ಕೇಶಿರಾಜವಿರಚಿತ

# ಶಬ್ದಮಣಿದರ್ಪಣಂ

SHABDA MANI DARPANA

KÊŠIRÂJA'S

# JEWEL MIRROR OF GRAMMAR

SECOND REVISED EDITION

REV. F. KITTEL

ಕೇಶಿರಾಜಕವಿಯ

# ಶಬ್ದಮಣಿದರ್ಪಣಂ

ಎರಡನೆಯ ಸುಧಾರಿಸಲ್ಪಟ್ಟ ಆವೃತಿ

SHABDA MANI DARPANA

KÊŠIRÂJA'S

# JEWEL MIRROR OF GRAMMER

ಕೇಶಿರಾಜಕವಿಯ

# ಶಬ್ದಮಣಿದರ್ಪಣಂ

ಎರಡನೆಯ ಸುಧಾರಿಸಲ್ಪಟ್ಟ ಆವೃತ್ತಿ

## SHABDA MANI DARPANA

KÊŠIRÂJA'S

# JEWEL MIRROR OF GRAMMER

EDITED BY

F. KITTEL

SECOND REVISED EDITION



ASIAN EDUCATIONAL SERVICES
NEW DELHI ★ MADRAS ★ 1990

ಕೇಶಿರಾಜಕವಿಯ

# ಶಬ್ದಮಣಿದರ್ಪಣಂ

ಎರಡನೆಯ ಸುಧಾರಿಸಲ್ಪಟ್ಟ ಆವೃತ್ತಿ

KÊŠIRÂJA'S

# JEWEL MIRROR OF GRAMMAR

EDITED

by the **Rev. F. KITTEL**

*Dr. Phil. Tübingen.*

**SECOND AND REVISED EDITION**

ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಯಾ ।
ಯದಿ ಶುದ್ಧಮಶುದ್ಧಂ ವಾ ಮಮ ದೋಷೋ ನ ವಿದ್ಯತೇ ॥

MANGALORE
BASEL MISSION BOOK & TRACT DEPOSITORY
1899

# PREFACE.

The emendations in the present edition refer principally to Kêširâja's quotations from previous poets. They are based partly on the different readings given in the Appendix to the first edition, but chiefly on a manuscript from Mûḍabidaru near Mangalore. A loan of this manuscript on palmyra leaves was obtained through the kind endeavours of the late Dr. A. C. Burnell in the year 1872. It is on the whole, a good one; nevertheless it has been impossible to give a few of the quotations, also with its aid, in a correct form. Such doubtful quotations have been marked out with a sign of interrogation in parenthesis, thus (?).

The Commentator on Keširâja's work in the Mûḍabidaru manuscript is not Nishṭhûrasañjayya (or Nishṭhûranañjayya); his name, however, does not appear. Though the wording of his commentary often is different from that of the first-mentioned one's (it may be called somewhat more archaeic), the meaning is essentially the same.

The Editor believes that the present edition fairly represents Kêširâja's original, and trusts that all scholars nterested in the Kannaḍa language will, therefore, grateılly welcome it.

***Dr. F. Kittel.***

*Tübingen, 11th May, 1897.*

# ಶಬ್ದಮಣಿದರ್ಪಣಂ

ನಿಷ್ಠೂರಸಂಜಯ್ಯನವರು (o: r. ನಿಷ್ಠೂರನಂಜಯ್ಯನವರು)
ಬರೆದ ವ್ಯಾಖ್ಯಾನಂ ಸಹಿತಮಾದುದು.

**The Jewel Mirror of Grammar, with the Commentary of Nishṭhûra Sańjayya (or -Nańjayya).**

## ಪೀಠಿಕೆ Preface.

### ಮೂಲಂ, Original text in the Kanda-metre.[1)]

The Author's esteem for Speech.

ಶ್ರೀವಾಗ್ದೇವಿಗೆ ಶಬ್ದದಿ
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು
ದ್ಭಾವಿಪ ನಿರ್ಮಲಮೂರ್ತಿಗ
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥ 1 ॥

### ಪದಚ್ಛೇದಂ, Separation of the words.

ಶ್ರೀವಾಗ್ದೇವಿಗೆ ಶಬ್ದದಿಂ ಆ ಆ ಇಂದ್ರಿಯದ ವಿಷಯಮಂ ಶ್ರೋತ್ರದೊಳ್ ಉದ್ಭಾವಿಪ ನಿರ್ಮಲಮೂರ್ತಿಗೆ ಇಳಾವಂದ್ಯೆಗೆ ಶಾಸ್ತ್ರಮುಖದೊಳ್ ಅವನತಂ ಅಪ್ಪೆಂ.

### ಅನ್ವಯಂ[2)], Arrangement of the words in their prose-order.

ಆ ಆ ಇಂದ್ರಿಯದ ವಿಷಯಮಂ ಶ್ರೋತ್ರದೊಳ್ ಶಬ್ದದಿಂ ಉದ್ಭಾವಿಪ ನಿರ್ಮಲಮೂರ್ತಿಗೆ ಇಳಾವಂದ್ಯೆಗೆ ಶ್ರೀವಾಗ್ದೇವಿಗೆ ಶಾಸ್ತ್ರಮುಖದೊಳ್ ಅವನತಂ ಅಪ್ಪೆಂ.

---

1) The Kanda-metre is twice:

◡◡◡◡ | ◡◡◡◡ | ◡◡◡◡
◡◡◡◡ | ◡◡◡◡ | ◡◡◡◡ | ◡◡◡◡ | ◡◡◡◡

The other forms these original verse-feet may assume are: — —; —◡◡; ◡◡—; ◡—◡; see our edition of Nâgavarma's Metrics, verses 81, 82, 83, 84.

2) The ಪದಚ್ಛೇದಂ and ಅನ್ವಯಂ are given only in two of our Manuscripts; they will be, however, a help to beginners. The ಟೀಕು too is often wanting in the Mûḍabidaru Manuscript.

## ಟೀಕು, Meaning of each word and Remarks as given by Nishṭhûra Sañjayya.

ಆ ಆ ಇಂದ್ರಿಯದ = ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣಂಗಳೆಂಬ ಸರ್ವೇಂದ್ರಿಯಂಗಳ; ವಿಷಯಮಂ = ಶಬ್ದ ಸ್ಪರ್ಶ ರೂಪ ರಸ ಗಂಧಂಗಳೆಂಬ ಸಮಸ್ತ ವಿಷಯಂಗಳಂ; ಶ್ರೋತ್ರದೊಳ್ = ಶ್ರೋತ್ರೇಂದ್ರಿಯಮೊಂದಱಲ್ಲಿಯೆ; ಶಬ್ದದಿಂ = ಶಬ್ದದಿಂದೆ; ಉದ್ಭಾವಿಪ = ಅಭಿವ್ಯಕ್ತಮಾಗಿ ತೋಱಿಯಿಸುವ; ನಿರ್ಮಲಮೂರ್ತಿಗೆ = ವಿಮಲಸ್ವರೂಪಿಯಾದ; ಇಳಾವಂದ್ಯೆಗೆ = ಭೂಜನದಿಂದೆ ವಂದಿಸಿಕೊಂಬಳಾದ; ಶ್ರೀ = ಐಶ್ವರ್ಯೋಪಲಕ್ಷಿತೆಯಾದ; ವಾಗ್ದೇವಿಗೆ = ವಾಕ್ಕೆಂಬ ದೇವಿಗೆ; ಶಾಸ್ತ್ರಮುಖದೊಳ್ = ಶಬ್ದಶಾಸ್ತ್ರಪ್ರಾರಂಭದಲ್ಲಿ; ಅವನತಂ = ನಮಸ್ಕರಿಸುವಾತಂ; ಅಪ್ಪೆಂ = ಆಗುವೆಂ.

## ವೃತ್ತಿ, The author's explanatory Gloss.

ಕಾಂತಿಯೆಂಬ ಗುಣದೊಳನ್ವಿತೆಯಪ್ಪ ವಾಕ್ಕೆಂಬ ದೇವಿಗೆ ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯಮೊಂದಱಿರಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲಸ್ವರೂಪಿಗೆ ಭುವನಸ್ತುತ್ಯೆಗೆ ಯೀ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪೆಂ.

## ಮೂಲಂ.

The Author's name is Keśava, his father is Mallikârjuna, and he is a daughter's son of the poet Sumanobâṇa who is a teacher to the Yâdavas.

ಕವಿಸುಮನೋಬಾಣನ ಯಾ
ದವಕಟಕಾಚಾರ್ಯನೆಸೆವ ದೌಹಿತ್ರನೆನಾಂ ।
ಕವಿಕೇಶವನೆಂ ಯೋಗಿ
ಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ ॥ 2 ॥

ಪದಚ್ಛೇದಂ.—ಕವಿಸುಮನೋಬಾಣನ ಯಾದವಕಟಕಾಚಾರ್ಯನ ಎಸೆವ ದೌಹಿತ್ರನೆಂ ಆಂ, ಕವಿಕೇಶವನೆಂ, ಯೋಗಿಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ. (See Sûtra 219.)

ಅನ್ವಯಂ.—ಯಾದವಕಟಕಾಚಾರ್ಯನ ಕವಿಸುಮನೋಬಾಣನ ಎಸೆವ ದೌಹಿತ್ರನೆಂ, ಯೋಗಿಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ, ಆಂ ಕವಿಕೇಶವನೆಂ.

ಟೀಕು.—ಯಾದವ = ಯದುಕುಲದ ಕ್ಷತ್ರಿಯರ; ಕಟಕ = ಸಮೂಹಕ್ಕೆ; ಆಚಾರ್ಯನ = ಗುರುವಾದ; ಕವಿಸುಮನೋಬಾಣನ = ಸುಮನೋಬಾಣನೆಂಬ ಕವೀಶ್ವರನ; ಎಸೆವ ದೌಹಿತ್ರನೆಂ = ಶೋಭಿಸುವ ಮಗಳ ಮಗನಾದ; ಯೋಗಿ = ಯೋಗಿಗಳಲ್ಲಿ; ಪ್ರವರ = ಅತ್ಯಂತ ಶ್ರೇಷ್ಠನಾದ; ಚಿದಾನಂದಮಲ್ಲಿಕಾರ್ಜುನ = ಜ್ಞಾನಾನಂದಮುಳ್ಳ ಮಲ್ಲಿಕಾರ್ಜುನನ; ಸುತನೆಂ = ಮಗನಾದ; ಆಂ = ಶಾಸ್ತ್ರಕಾರನಾದ ನಾಂ; ಕವಿಕೇಶವನೆಂ = ಕೇಶಿರಾಜಕವೀಶ್ವರಂ.

ವೃತ್ತಿ,—ಯಾದವಕಟಕೋಪಾಧ್ಯಾಯನಪ್ಪ ಕವಿಸುಮನೋಬಾಣನ ಮಗಳ ಮಗನೆಂ, ಯೋಗಿವಲ್ಲಭನಪ್ಪ ಮಲ್ಲಿಕಾರ್ಜುನನಂದನನೆಂ, ಕೇಶಿರಾಜ ಕವಿಯೆಂ ಆಂ.

ಮೂಲಂ.

This Grammar is composed at the request of learned men.

ಗುಣಮಮರೆ ಶಬ್ದಮಣಿದ
ರ್ಪಣನಾಮಮನಿಟ್ಟು ನೆಱಿಯೆ ಕರ್ಣಾಟಕಲ |
ಕ್ಷಣಶಬ್ದಶಾಸ್ತ್ರಮಂ ಲಾ
ಕ್ಷಣಿಕರ್ಪೇಱೆಂದು ಬೆಸಸೆ ಬಗೆವುಗೆ ಪೇೞ್ದೆಂ || 3 ||

ಪದಚ್ಛೇದಂ.—ಗುಣಂ ಅಮರೆ, ಶಬ್ದಮಣಿದರ್ಪಣನಾಮಮಂ ಇಟ್ಟು ನೆಱಿಯೆ, ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ—ಲಾಕ್ಷಣಿಕರ್, ಪೇೞ್ ಎಂದು, ಬೆಸಸೆ—ಬಗೆವುಗೆ ಪೇೞ್ದೆಂ.

ಯಥಾನ್ವಯಂ. ಟೀಕು.—ಗುಣಂ = ಶಬ್ದಸಾಮರ್ಥ್ಯವೆಂಬ ಗುಣಂ; ಅಮರೆ = ಪೊರ್ದುಗೆಯುಳ್ಳುದಾಗಲಾಗಿ; ಶಬ್ದಮಣಿದರ್ಪಣನಾಮಮಂ = ಶಬ್ದಮಣಿದರ್ಪಣವೆಂಬ ಪೆಸರಂ; ಇಟ್ಟು = ಕೊಟ್ಟು; ನೆಱಿಯೆ = ಪೆರ್ಚುಗೆಯಾಗೆ; ಕರ್ಣಾಟಕ = ಕನ್ನಡಕ್ಕೆ; ಲಕ್ಷಣ = ಲಕ್ಷಣವಾದ; ಶಬ್ದಶಾಸ್ತ್ರಮಂ = ವ್ಯಾಕರಣಶಾಸ್ತ್ರಮಂ; ಲಾಕ್ಷಣಿಕರ್ = ಲಕ್ಷಣಾಚಾರ್ಯರ್; ಪೇೞೆಂದು = ಹೇೞೆಂದು; ಬೆಸಸೆ = ನಿರೂಪಿಸೆ; ಬಗೆವುಗೆ = ಮನಂಬುಗೆ; ಪೇೞ್ದೆಂ = ಹೇೞ್ದೆಂ.

ವೃತ್ತಿ.—ಶಬ್ದಸಾಮರ್ಥ್ಯಮಮರೆ, ವಿಸ್ತಾರದಿಂ ಕರ್ಣಾಟಕವ್ಯಾಕರಣಮಂ, ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು—ಲಕ್ಷಣಾಚಾರ್ಯರ್, ಪೇೞೆಂದು, ಬೆಸಸೆ—ಮನಂಬುಗುವಂತೆ, ಪೇೞ್ದೆಂ.

ಮೂಲಂ.

Let learned men receive this work kindly!

ಅವಧರಿಪುದು ವಿಬುಧರ್ ದೋ
ಷವಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿ |
ರ್ದುವುದು ಗುಣಯುಕ್ತಮುಮಂ ದೋ
ಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ || 4 ||

ಪದಚ್ಛೇದಂ.—ಅವಧರಿಪುದು ವಿಬುಧರ್; ದೋಷಂ ಇದಱೊಳ್ ಏನಾನುಂ ಉಳ್ಳೊಡಂ ಪ್ರಿಯದಿಂ ತಿರ್ದುವುದು; ಗುಣಯುಕ್ತಮುಂ ದೋಷವಿದೂರಮುಂ ಆಗೆ, ಮೆಚ್ಚಿ, ಕೈಕೊ

ಅನ್ವಯಂ.—ಇದಂ ವಿಬುಧರ್ ಅವಧರಿಪುದು; ಇವದರೊಳ್ ದೋಷಂ ಏನಾನುಂ ಉಳ್ಳೊಡಂ ಪ್ರಿಯದಿಂ ತಿರ್ದುವುದು; ಗುಣಯುಕ್ತಮುಂ ದೋಷವಿದೂರವಮುಂ ಆಗೆ, ಮೆಚ್ಚಿ, ಕೈಕೊಳ್ವುದು.

ಯಥಾನ್ವಯಂ. ಟೀಕು.—ಇದಂ = ಈ ಶಬ್ದಮಣಿದರ್ಪಣವಂ; ವಿಬುಧರ್ = ವಿದ್ವಾಂಸರ್; ಅವಧರಿಪುದು = ಕೇಳ್ವುದು; ಇದಱೊಳ್ = ಈ ಶಬ್ದಮಣಿದರ್ಪಣದಲ್ಲಿ; ದೋಷಂ = ಅಷ್ಟಾದಶದೋಷಂ; ಏನಾನುಂ = ಎತ್ತಾನುಂ; ಉಳ್ಳೊಡಂ = ಉಂಟಾದೊಡೆಯುಂ; ಪ್ರಿಯದಿಂ = ಪ್ರೀತಿಯಿಂದೆ; ತಿರ್ದುವುದು = ನೇರಿತ್ತಂ ಮಾಡುವದು; ಗುಣಯುಕ್ತಮುಂ = ಶಬ್ದಸಾಮರ್ಥ್ಯವೆಂಬ ಗುಣದೊಡನೆ ಕೂಡಿದುದುಂ; ದೋಷವಿದೂರಮುಂ = ದೋಷರಹಿತವಾದುದುಂ; ಆಗೆ = ಆಗಲಾಗಿ; ಮೆಚ್ಚಿ = ಒಡಂಬಟ್ಟು; ಕೈಕೊಳ್ವುದು = ಅಂಗೀಕರಿಸುವದು.

ವೃತ್ತಿ.—ಶಬ್ದಮಣಿದರ್ಪಣದೊಳೇನಾನುಂ ದೋಷಮುಳ್ಳೊಡಂ ವಿದ್ವಾಂಸರವಧರಿಸಿ, ಕೇಳ್ದು, ಕರುಣದಿಂ, ಮನಪ್ರೀತಿವೆರಸಿ, ತಿರ್ದುವುದು; ಗುಣಾನ್ವಿತಮುಂ ನಿರ್ದೋಷಮುಮಾಗೆ, ಮೆಚ್ಚಿ, ಸ್ವೀಕರಿಪುದು.

## ಮೂಲಂ.

ಗಜಗನ ಗುಣನಂದಿಯ ಮನ
ಸಿಜನಸಗನ ಚಂದ್ರಭಟ್ಟಗುಣವರ್ಮಶ್ರೀ ।
ವಿಜಯರ ಹೊಂನನ ಹಂಪನ
ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ॥ 5 ॥

In this work quotations (*cf.* S. 196) have been made, for instance, from the works of the poets Gajaga Guṇanandi (s. S. 24 ?), Manasija, Asaga, Čandrabhaṭṭa, Guṇavarma (s. S. 118), Śrīvijaya, Honna, Hampa and Sujanottaṁsa (s. Ss. 88; 90; 108; 134 ?).

ಪದಚ್ಛೇದಂ.—ಗಜಗನ, ಗುಣನಂದಿಯ, ಮನಸಿಜನ, ಅಸಗನ, ಚಂದ್ರಭಟ್ಟಗುಣವರ್ಮಶ್ರೀವಿಜಯರ, ಹೊಂನನ, ಹಂಪನ, ಸುಜನೋತ್ತಂಸನ ಸುಮಾರ್ಗಂ ಇದಱೊಳೆ ಲಕ್ಷ್ಯಂ.

ಯಥಾನ್ವಯಂ. ಟೀಕು.—ಗಜಗನ = ಗಜಗನೆಂಬ ಕವೀಶ್ವರನ; ಗುಣನಂದಿಯ = ಗುಣನಂದಿಯೆಂಬ ಕವೀಶ್ವರನ; ಮನಸಿಜನ = ಮನಸಿಜನೆಂಬ ಕವೀಶ್ವರನ; ಅಸಗನ = ಅಸಗನೆಂಬ ಕವೀಶ್ವರನ; ಚಂದ್ರಭಟ್ಟಗುಣವರ್ಮಶ್ರೀವಿಜಯರ = ಚಂದ್ರಭಟ್ಟನೆಂಬ ಗುಣವರ್ಮನೆಂಬ ಶ್ರೀವಿಜಯನೆಂಬೀ ಕವೀಶ್ವರರ; ಹೊಂನನ = ಹೊಂನನೆಂಬ ಕವೀಶ್ವರನ; ಹಂಪನ = ಹಂಪನೆಂಬ ಕವೀಶ್ವರನ; ಸುಜನೋತ್ತಂಸನ = ಸುಜನೋತ್ತಂಸನೆಂಬ ಕವೀಶ್ವರನ; ಸುಮಾರ್ಗಂ = ಲೇಸಾದ ಕಾವ್ಯಮಾರ್ಗಂ; ಇದಱೊಳೆ = ಈ ಶಬ್ದಮಣಿದರ್ಪಣದಲ್ಲಿಯೆ; ಲಕ್ಷ್ಯಂ = ಉದಾಹರಣೆಗಳ್ ಕುಱುವಾಗಿರ್ಪವು.

ವೃತ್ತಿ.—ಈ ಕವಿಗಳಾದಿಯಾದ ಮತ್ತಂ ಪಲಂಬರ್ಪ್ರಸಿದ್ಧಕವಿಗಳುದಾಹರಣಂಗಳಿದಱೊಳೊಳವು.

## ಮೂಲಂ.

Besides, the Author wrote an explanatory Gloss (ಅರ್ಥವೃತ್ತಿ) to each Rule (ಸೂತ್ರಂ).

ಪ್ರಾಸಛ್ಛಂದೋನ್ವಯವಿ
ನ್ಯಾಸದಿನಂತಿಂತು ಶಬ್ದಮಿರ್ಕುಂ ವೃತ್ತಿ।
ವ್ಯಾಸಂ ತದ್ವ್ಯಾಕುಳಮೆಂ
ದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದೆಂ ‖ 6 ‖

ಪದಚ್ಛೇದಂ.—ಪ್ರಾಸಛ್ಛಂದೋನ್ವಯವಿನ್ಯಾಸದಿಂ ಅಂತು ಇಂತು ಶಬ್ದಂ ಇರ್ಕುಂ; ವೃತ್ತಿವ್ಯಾಸಂ ತದ್ವ್ಯಾಕುಳಂ ಎಂದು, ಆ ಸೂತ್ರಕ್ಕೆ ಅರ್ಥವೃತ್ತಿ ವರ್ತಿಸೆ ಬರೆದೆಂ.

ಅನ್ವಯಂ.—ಪ್ರಾಸಛ್ಛಂದೋನ್ವಯವಿನ್ಯಾಸದಿಂ ಶಬ್ದಂ ಅಂತಿಂತು ಇರ್ಕುಂ; ವೃತ್ತಿವ್ಯಾಸಂ ತದ್ವ್ಯಾಕುಳಂ ಎಂದು, ಆ ಸೂತ್ರಕ್ಕೆ ಅರ್ಥವೃತ್ತಿ ವರ್ತಿಸೆ ಬರೆದೆಂ.

ಟೀಕು.—ಪ್ರಾಸ = ಷಟ್ಪ್ರಾಸಂಗಳ; ಛಂದಃ = ಛಂದಸ್ಸಿನ; ಅನ್ವಯ = ಅರ್ಥದ; ವಿನ್ಯಾಸದಿಂ = ನಿಱುಗೆಯಿಂದೆ; ಶಬ್ದಂ = ಶಬ್ದಂಗಳ್; ಅಂತಿಂತು = ಪಲ್ಲಟವಾಗಿ; ಇರ್ಕುಂ = ಇರ್ಪುವು; ವೃತ್ತಿವ್ಯಾಸಂ = ವೃತ್ತಿವಿಸ್ತಾರಂ; ತತ್ = ಅದು; ವ್ಯಾಕುಳಮೆಂದು = ಸಂದೇಹವಪ್ಪದೆಂದು; ಆ ಸೂತ್ರಕ್ಕೆ = ಆಯಾ ಸೂತ್ರಂಗಳ್ಗೆ; ಅರ್ಥವೃತ್ತಿ = ಅರ್ಥದ ವೃತ್ತಿ; ವರ್ತಿಸೆ = ಪ್ರವರ್ತಿಸೆ; ಬರೆದೆಂ = (ಅನ್ತಹ) ವೃತ್ತಿಯಂ ಲಿಖಿಸಿದೆಂ.

ವೃತ್ತಿ.—ಪ್ರಾಸದ ಛಂದದ ಅನ್ವಯದ ನಿಱುಗೆಯಿಂ ಶಬ್ದಂಗಳ್ ವ್ಯತ್ಯಯಮಾಗಿರ್ಪುವು; ಅವಱಿವಱ ಬೞಿಯೊಳ್ವೃತ್ತಿಯ ವಿಸ್ತಾರಂ ವ್ಯಾಕುಲಮಾದಪುದೆಂದಾ ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತಮಿರೆ ಬರೆದೆಂ.

## ಮೂಲಂ.

The learned will accept this work favourably on account of its completeness.

ಜನಮಂಗೀಕರಿಪುದು ನೆ
ಟ್ಟನೆ ಸಂಬಂಧಾಭಿಧೇಯಶಕ್ಯಾನುಷ್ಠಾ।
ನನಿಜೇಷ್ಟಸಿದ್ಧಿಗಳ್ನೆಲ
ಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ ‖ 7 ‖

ಪದಚ್ಛೇದಂ.—ಜನಂ ಅಂಗೀಕರಿಪುದು, ನೆಟ್ಟನೆ ಸಂಬಂಧಾಭಿಧೇಯಶಕ್ಯಾನುಷ್ಠಾನನಿಜೇಷ್ಟಸಿದ್ಧಿಗಳ್ ನೆಲಸಿನಿಂದ ಕಾರಣದೆ, ಶಬ್ದಮಣಿದರ್ಪಣಮಂ.

ಅನ್ವಯಂ.—ಸಂಬಂಧಾಭಿಧೇಯಶಕ್ಯಾನುಷ್ಠಾನನಿಜೇಷ್ಟಸಿದ್ಧಿಗಳ್ ನೆಟ್ಟನೆ ನೆಲಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ ಜನಂ ಅಂಗೀಕರಿಪುದು.

ಟೀಕು.—ಸಂಬಂಧ = ಪ್ರಕೃತಿಪ್ರತ್ಯಯಸಂಬಂಧ[1] ಲಕ್ಷ್ಯಲಕ್ಷಣಸಂಬಂಧ[2] ವಿಶೇಷ್ಯ ವಿಶೇಷಣಸಂಬಂಧ[3] ಕರ್ತೃಕರ್ಮಕ್ರಿಯಾಸಂಬಂಧಮೆಂದು[4], ಪೊರ್ದುಗೆಗೆ ನಿಮಿತ್ತಂ; ಅಭಿ ಧೇಯಂ = ಅರ್ಥಂ; ಶಕ್ಯಾನುಷ್ಠಾನಂ = ಆ ಅರ್ಥವನ್ನು ಸಾಧಿಸಲ್ತಕ್ಕ ಉದ್ಯೋಗಂ; ನಿಜ = ತನ್ನ; ಇಷ್ಟಸಿದ್ಧಿಗಳ್ = ಇಷ್ಟಾರ್ಥಸಿದ್ಧಿಗಳ್; ನೆಟ್ಟನೆ = ವ್ಯಕ್ತಮಾಗಿ; ನೆಲಸಿ = ನೆಲೆಗೊಂಡು, ನಿಂದ ಕಾರಣದೆ = ಇರ್ದ ಕಾರಣದಿಂದೆ; ಶಬ್ದಮಣಿದರ್ಪಣಮಂ = ಶಬ್ದಮಣಿದರ್ಪಣವೆಂಬ ಶಾಸ್ತ್ರಮಂ; ಜನಂ = ವಿದ್ವಜ್ಜನಂ; ಅಂಗೀಕರಿಪುದು = ಸ್ವೀಕರಿಸುವದು.

ವೃತ್ತಿ.—ಸಂಬಂಧಮೆಂದು, ಪೊರ್ದುಗೆ ಅಭಿಧೇಯಮೆಂದರ್ಥಂ; ಶಕ್ಯಾನುಷ್ಠಾನಮೆಂದಾ ಪದಾರ್ಥಮಂ ಸಾಧಿಸಲ್ತಕ್ಕುದ್ಯೋಗಂ; ಇಷ್ಟಸಿದ್ಧಿಯೆಂದದಱಿಫಲಪ್ರಾಪ್ತಿ. ಇವು ಶಬ್ದಮಣಿದರ್ಪಣದೊಳ್ನೆಲೆಗೊಂಡಿರ್ಪುದಱಿಂ ಸ್ವೀಕರಿಸದ ಲೋಕಮಿಲ್ಲ.

## ವ್ಯಾಕರಣಪ್ರಾರಂಭಂ Commencement of the Grammar.

### ಮೂಲಂ.

This work has 8 Chapters.

ಕ್ರಮದಿಂದೆ ಸಂಧಿ ನಾಮಂ
ಸಮಾಸಮಾ ತದ್ಧಿತಂ, ಪೊದಱ್ದಾಖ್ಯಾತಂ |
ಪ್ರಮುದಿತ ಧಾತುವಪಭ್ರಂ.
ಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ || 1 ||

ಪದಚ್ಛೇದಂ.—ಕ್ರಮದಿಂದೆ ಸಂಧಿ, ನಾಮಂ, ಸಮಾಸಂ, ಆ ತದ್ಧಿತಂ, ಪೊದಱ್ದ ಆಖ್ಯಾತಂ, ಪ್ರಮುದಿತ ಧಾತುಂ, ಅಪಭ್ರಂಶಂ, ಅವ್ಯಯಂ—ಸಂಧಿ ಶಬ್ದಮಣಿದರ್ಪಣದೊಳ್.

ಅನ್ವಯಂ.—ಶಬ್ದಮಣಿದರ್ಪಣದೊಳ್ ಕ್ರಮದಿಂದೆ ಸಂಧಿ, ನಾಮಂ, ಸಮಾಸಂ, ಆ ತದ್ಧಿತಂ, ಪೊದಱ್ದಾಖ್ಯಾತಂ, ಪ್ರಮುದಿತಧಾತುಂ, ಅಪಭ್ರಂಶಂ, ಅವ್ಯಯಂ ಸಂಧಿ.

[1] Relation between themes and affixes. [2] Relation between definables and definitions. [3] Relation between Substantives and Adjectives. [4] Relation between Subjects, Objects and Predicates.

ಟೀಕು.—ಶಬ್ದಮಣಿದರ್ಪಣದೊಳ್ = ಶಬ್ದಮಣಿದರ್ಪಣದಲ್ಲಿ; ಕ್ರಮದಿಂದೆ = ತರುವಾಯಿಂದೆ; ಸಂಧಿ = ಸಂಧಿಪ್ರಕರಣವೆಂದು; ನಾಮಂ = ನಾಮಪ್ರಕರಣವೆಂದು; ಸಮಾಸಂ = ಸಮಾಸಪ್ರಕರಣವೆಂದು; ಆ ತದ್ಧಿತಂ = ಆ ಪ್ರಸಿದ್ಧವಾದ ತದ್ಧಿತಪ್ರಕರಣವೆಂದು; ಪೊದಟ್ಟ = ಪ್ರಸಿದ್ಧವಡೆದ; ಆಖ್ಯಾತಂ = ಆಖ್ಯಾತಪ್ರಕರಣವೆಂದು; ಪ್ರಮುದಿತಧಾತುಂ = ವಿಶೇಷವಾಗಿ ಸಂತೋಷಿಸಲ್ಪಟ್ಟ ಧಾತುಪ್ರಕರಣವೆಂದು; ಅಪಭ್ರಂಶಂ = ಅಪಭ್ರಂಶಪ್ರಕರಣವೆಂದು; ಅವ್ಯಯಂ = ಅವ್ಯಯಪ್ರಕರಣವೆಂದು; ಸಂಧಿ = ಸಂಧಿಗಳೆಂಟು.

ವೃತ್ತಿ.—ತರುವಾಯಿಂ ಸಂಧಿಯೆಂದುಂ, ನಾಮಮೆಂದುಂ, ಸಮಾಸಮೆಂದುಂ, ತದ್ಧಿತಮೆಂದುಮ್, ಆಖ್ಯಾತಮೆಂದುಂ, ಧಾತುಮೆಂದುಮ್, ಅಪಭ್ರಂಶಮೆಂದುಮ್, ಅವ್ಯಯಮೆಂದುಮ್, ಈ ಶಬ್ದಮಣಿದರ್ಪಣದೊಳ್ಸಂಧಿಯೆಂಟಕ್ಕುಂ.

## ಮೂಲಂ.

Origin of Sound (ಶಬ್ದದ್ರವ್ಯಂ) and Speech (or words, ಶಬ್ದಂ; *cf.* S. 34).

ಅನುಕೂಲಪವನನಿಂ ಜೀ
ವನಿಷ್ಟದಿಂ ನಾಭಿಮೂಲದೊಳ್ಕಹಳೆಯ ಪಾಂ |
ಗಿನ ವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ || 2 ||

ಪದಚ್ಛೇದಂ.—ಅನುಕೂಲಪವನನಿಂ ಜೀವನ ಇಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೊಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಂ; ಅದಱ ಕಾರ್ಯಂ ಶಬ್ದಂ.

ಅನ್ವಯಂ.—ಜೀವನ ಇಷ್ಟದಿಂ ಅನುಕೂಲಪವನನಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೊಲ್ ಶಬ್ದದ್ರವ್ಯಂ ಶ್ವೇತಂ ಜನಿಯಿಸುಗುಂ; ಅದಱ ಕಾರ್ಯಂ ಶಬ್ದಂ.

ಟೀಕು.—ಜೀವನ = ಜೀವಾತ್ಮನ; ಇಷ್ಟದಿಂ = ಇಚ್ಛೆಯಿಂದೆ; ಅನುಕೂಲಪವನನಿಂ = ಜೀವನೊಡನೆ ಅನುಕೂಲವಾದ ಪ್ರಾಣಮಾರುತನಿಂದೆ; ನಾಭಿಮೂಲದೊಳ್ = ನಾಭಿಯ ಮೊದಲಲ್ಲಿ; ಕಹಳೆಯ ಪಾಂಗಿನ ವೊಲ್ = ನೆಗಪಿದ ಕಹಳೆಯಾಕಾರದ ಹಾಗೆ; ಶಬ್ದದ್ರವ್ಯಂ = ಶಬ್ದವೆಂಬ ದ್ರವ್ಯಂ; ಶ್ವೇತಂ = ಧವಳವರ್ಣವಾಗಿ; ಜನಿಯಿಸುಗುಂ = ಪುಟ್ಟುವುದು; ಅದಱ = ಆ ಶಬ್ದದ್ರವ್ಯದ; ಕಾರ್ಯಂ = ಪ್ರಯೋಜನಂ; ಶಬ್ದ = ಶಬ್ದಮಕ್ಕುಂ.

ವಿಚಾರಂ, Remark.—ಶಬ್ದದ್ರವ್ಯಮೆಂದೊಡೆ ಘಟಕ್ಕೆ ಮೃತ್ತಿಕೆಯೆಂತಂತೆ ಅಕ್ಷರಾತ್ಮಕವಾದ ಶಬ್ದಂಗಳ್ಪುಟ್ಟುವುದರ್ಕೆ ಉಪಾದಾನಕಾರಣವಾದ ವಸ್ತುವೆಂದಱವುದು; ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇೞ್ವರ್.

ವೃತ್ತಿ.—ಅನುಕೂಲಪವನನ ಬೆಂಬಲಿಯಿಂ ಜೀವನೊಡನೆ ಸಂಬಂಧ ಮಾಗಿರ್ಪುದಱಿಂ ನಾಭಿಯ ಮೊದಲಲ್ಲಿ ನೆಗಪಿದ ಕಹಳೆಯಾಕಾರದಿಂ ಶಬ್ದ ಮೆಂಬ ದ್ರವ್ಯಂ ಧವಳವರ್ಣಮಾಗಿ ಪುಟ್ಟುಗುಂ; ಅದಱ ಕಾರ್ಯಮುಂ ಶಬ್ದ ಮೆಂಬರ್.

### ಮೂಲಂ.

Usefulness of Grammar.

ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ವಾ ।
ಲೋಕಂ ತತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮೆ. ಬುಧರ್ಗೆ ಫಲಂ ॥ 3 ॥

ಪದಚ್ಛೇದಂ.—ವ್ಯಾಕರಣದಿಂದೆ ಪದಂ, ಆ ವ್ಯಾಕರಣದ ಪದದಿಂ ಅರ್ಥಂ, ಅರ್ಥದೆ ತತ್ವಾಲೋಕಂ, ತತ್ವಾಲೋಕದಿಂ ಆಕಾಂಕ್ಷಿಪ ಮುಕ್ತಿ ಅಕ್ಕುಂ; ಅದೆ ಬುಧರ್ಗೆ ಫಲಂ.

ಯಥಾನ್ವಯಂ. ಟೀಕು.—ವ್ಯಾಕರಣದಿಂದೆ = ಶಬ್ದಶಾಸ್ತ್ರದಿಂದೆ; ಪದಂ = ಪದಸಿದ್ಧಿ; ಅಕ್ಕುಂ = ಅಪ್ಪುದು; ಆ ವ್ಯಾಕರಣದ = ಆ ಶಬ್ದಶಾಸ್ತ್ರದ; ಪದದಿಂ = ಪದಸಿದ್ಧಿಯಿಂದೆ; ಅರ್ಥಂ = ಅರ್ಥವಿಚಾರಂ ಅಪ್ಪುದು; ಅರ್ಥದೆ = ಅರ್ಥವಿಚಾರದಿಂದೆ; ತತ್ವಾಲೋಕಂ = ತತ್ವಜ್ಞಾನಂ ಅಪ್ಪುದು; ತತ್ವಾಲೋಕದಿಂ = ತತ್ವಜ್ಞಾನದಿಂದೆ; ಆಕಾಂಕ್ಷಿಪ ಮುಕ್ತಿ = ಬಯಸಲ್ತಕ್ಕ ಮೋಕ್ಷಂ ಅಪ್ಪುದು; ಅದೆ = ಆ ಮೋಕ್ಷವೆ; ಬುಧರ್ಗೆ = ವಿದ್ವಾಂಸರ್ಗೆ; ಫಲಂ = ಸತ್ಫಲಂ ಅಪ್ಪುದು.

ವೃತ್ತಿ.—ವ್ಯಾಕರಣದಿಂದೆ ಪದಸಿದ್ಧಿಯಕ್ಕುಂ; ಆ ವ್ಯಾಕರಣದ ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ; ಆ ಜ್ಞಾನದಿಂ ತತ್ವವಿಚಾರಮಕ್ಕುಂ; ತತ್ವವಿಚಾರದಿಂ ಬಯಸುವ ಮುಕ್ತಿ ದೊರೆಕೊಳ್ಗುಂ; ಬುಧರ್ಗದುಕಾರಣದಿಂ ವ್ಯಾಕರಣಮುಪಾದೇಯಂ.



# ೧ನೆಯ ಅಧ್ಯಾಯಂ CHAPTER.

## ಸಂಧಿ On Letters and Euphonism.

### 1. ಅಕ್ಷರಸಂಜ್ಞಾಪ್ರಕರಣಂ First Section: On Letters.

#### ಸೂತ್ರಂ Aphorism or Rule.

Letters the first subject to be treated of.

ಅಱಯೆ ತಚ್ಛಾಸ್ತ್ರವ್ಯವ
ಹಾರಜ್ಞಾನಾರ್ಥವಾಗೆ ಪೇೞಲ್ಪಡೆಗುಂ
ಧೀರರಿನಕ್ಷರಸಂಜ್ಞಾ
ಕಾರಂ ವ್ಯಾಕರಣದಾದಿಯೊಳ್ಪರಿವಿಡಿಯಿಂ || 1 ||

ಪದಚ್ಛೇದಂ.— ಅಱಯೆ ತಚ್ಛಾಸ್ತ್ರವ್ಯಹಾರಜ್ಞಾನಾರ್ಥಂ ಆಗೆ ಪೇೞಲ್ ಪಡೆಗುಂ ಧೀರರಿಂ ಅಕ್ಷರಸಂಜ್ಞಾಕಾರಂ ವ್ಯಾಕರಣದ ಆದಿಯೊಳ್ ಪರಿವಿಡಿಯಿಂ.

ಅನ್ವಯಂ.—ತಚ್ಛಾಸ್ತ್ರವ್ಯವಹಾರಜ್ಞಾನಾರ್ಥಂ ಆಗೆ, ಅಱಯೆ, ವ್ಯಾಕರಣದ ಆದಿಯೊಳ್ ಧೀರರಿಂ ಅಕ್ಷರಸಂಜ್ಞಾಕಾರಂ ಪರಿವಿಡಿಯಿಂ ಪೇೞಲ್ ಪಡೆಗುಂ.

ಟೀಕು.—ತಚ್ಛಾಸ್ತ್ರ = ಆ ಶಬ್ದಶಾಸ್ತ್ರದ; ವ್ಯವಹಾರ = ವ್ಯವಹಾರಮಂ; ಜ್ಞಾನಾರ್ಥವಾಗೆ = ತಿಳಿವ ಪ್ರಯೋಜನವಾಗಿ; ಅಱಯೆ = ಪಿಚಾರಿಸೆ; ವ್ಯಾಕರಣದ = ವ್ಯಾಕರಣಶಾಸ್ತ್ರದ; ಆದಿಯೊಳ್ = ಮೊದಲಲ್ಲಿ; ಥೀರರಿಂ = ವಿದ್ವಾಂಸರಿಂದೆ; ಅಕ್ಷರಸಂಜ್ಞಾಕಾರಂ = ಅಕ್ಷರಂಗಳ ಸಂಜ್ಞಾಸ್ವರೂಪಂ; ಪರಿವಿಡಿಯಿಂ = ತರುವಾಯಿಂದೆ; ಪೇೞಲ್ಪಡೆಗುಂ = ಹೇೞಲ್ಪಡುವುದು.

ವೃತ್ತಿ.—ಆ ಶಬ್ದಶಾಸ್ತ್ರವ್ಯವಹಾರಮಂ ತಿಳಿಯಲೋಸ್ಕರವಾಗಕ್ಷರಸಂಜ್ಞಾಸ್ವರೂಪಂ ವ್ಯಾಕರಣಡ ಮೊದಲೊಳ್ ಕ್ರಮದಿಂ ಪೇೞಲ್ಪಡೆಗುಂ.

## ಸೂತ್ರಂ.

The two synonyms for "Letter" are ಅಕ್ಷರಂ and ವರ್ಣಂ.

ಅಕ್ಕರಮುಂ ವರ್ಣಮುಮೆಂ
ದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂ |
ಬೊಕ್ಕುಚ್ಚರಿಸಲ್ಬಾರದು
ವಕ್ಕರಮಲ್ತವು ಘನಸ್ವನಾದಿಧ್ವನಿಗಳ್ || 2 ||

ಪದಚ್ಛೇದಂ.— ಅಕ್ಕರಮುಂ ವರ್ಣಮುಂ ಎಂದು, ಅಕ್ಕುಂ ಶುದ್ಧಾಕ್ಷರಕ್ಕೆ ನಾಮಂ; ಬರೆಪಂಬೊಕ್ಕ ಉಚ್ಚರಿಸಲ್ ಬಾರದುವು ಅಕ್ಕರಂ ಅಲ್ತು, ಅವು ಘನಸ್ವನಾದಿಧ್ವನಿಗಳ್.

ಯಥಾನ್ವಯಂ. ಟೀಕು.— ಅಕ್ಕರಮುಂ = ಅಕ್ಕರಮೆಂದುಂ; ವರ್ಣಮುಂ = ವರ್ಣಮೆಂದುಂ; ಶುದ್ಧಾಕ್ಷರಕ್ಕೆ = ಶುದ್ಧವಾದಕ್ಷರಂಗಳ್ಗೆ; ನಾಮಂ = ಪೆಸರ್; ಅಕ್ಕುಂ = ಅಪ್ಪುದು; ಬರೆಪಂಬೊಕ್ಕ = ಬರೆವುದಂ ಪೊಕ್ಕು; ಉಚ್ಚರಿಸಲ್ ಬಾರದುವು = ಉಚ್ಚಾರಣೆಗೆ ಬಾರದುವು; ಅಕ್ಕರಂಗಳ್ = ಅಕ್ಷರಂಗಳ್; ಅಲ್ತು = ಅಲ್ಲ; ಅವು = ತಾವು; ಘನ = ಮೋಘದ; ಸ್ವನ = ಧ್ವನಿ; ಆದಿ = ಮೊದಲಾದ; ಧ್ವನಿಗಳ್ = ಪಲವು ತೆಱದ ಧ್ವನಿಗಳ್ ಅಪ್ಪುವು.

ವೃತ್ತಿ.— ಅಕ್ಕರಮೆಂದುಂ, ವರ್ಣಮೆಂದುಂ, ಶುದ್ಧಾಕ್ಷರಕ್ಕೆ ಪರ್ಯಾಯನಾಮಂ; ಬರೆಯಲುಮುಚ್ಚರಿಸಲ್ಬಾರದುವಕ್ಷರಂಗಳಲ್ತವು ಮೊಟಿಗು ಮೊದಲಾದ ಪಲ ತೆಱದ ಧ್ವನಿಗಳ್.

## ಸೂತ್ರಂ.

In each letter Sound and Form.

ವ್ಯವಹರಿಪುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ |
ವಿವಿಧಾಕಾರಂ ಲಿಪಿಭೇ
ದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ || 3 ||

ಪದಚ್ಛೇದಂ.— ವ್ಯವಹರಿಪುವು ಎರಡು ರೂಪಿಂದೆ ಅವು ಅಕ್ಕರಂ; ಶ್ರಾವಣಂ ಸ್ವನೈಕಾಕಾರಂ, ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ; ಪುರಾತನಮತದಿಂ.

ಅನ್ವಯಂ.— ಪುರಾತನಮತದಿಂ ಅಕ್ಕರಂ ಅವು ಎರಡು ರೂಪಿಂದೆ ವ್ಯವಹರಿಪುವು; ಸ್ವನೈಕಾಕಾರಂ ಶ್ರಾವಣಂ, ಲಿಪಿಭೇದವೃತ್ತಿಯಿಂ ವಿವಿಧಾಕಾರಂ ಚಾಕ್ಷುಷಂ.

ಟೀಕು.—ಪುರಾತನಮತದಿಂದೆ= ಪೂರ್ವದ ಕವಿಗಳ ಮತದಿಂದೆ; ಅಕ್ಕರಂ = ಅಕ್ಷರಂಗಳ್; ಅವು = ಅವು ತಾಂ; ಎರಡು ರೂಪಿಂದೆ = ಶ್ರಾವಣ ಚಾಕ್ಷುಷವೆಂಬೆರಡು ತೆಱದಾಕಾರದಿಂದೆ; ವ್ಯವಹರಿಪುವು = ವರ್ತಿಪುವು; ಸ್ವನೈಕಾಕಾರಂ = ಧ್ವನಿಯೊಂದಱಾಕಾರವನುಳ್ಳುದು; ಶ್ರಾವಣಂ ಶ್ರಾವಣವೆನಿಪುದು; ಲಿಪಿ = ಲಿಪಿಗಳ; ಭೇದ = ಭೇದದ; ವೃತ್ತಿಯಿಂ = ವರ್ತನೆಯಿಂದೆ; ವಿವಿಧಾಕಾರಂ = ನಾನಾಪ್ರಕಾರವಾದ ಆಕಾರವನುಳ್ಳುದು; ಚಾಕ್ಷುಷಂ = ಚಾಕ್ಷುಷವೆನಿಸುವದು.—ಶ್ರಾವಣವೆಂದೊಡೆ ಕಿವಿಯಲ್ಲಿ ಕೇಳ್ವುದು; ಚಾಕ್ಷುಷವೆಂದೊಡೆ ಕಣ್ಣೊಳ್ಕಾಣ್ಬುದೆಂದಱಿವುದು.

ವೃತ್ತಿ.—ಎರಡ್ತೆಱದಾಕಾರದಿಂದಕ್ಕರಂ ವರ್ತಿಸುಗುಂ; ಶಬ್ದಾಕಾರದಿಂ ಕಿವಿಗೆ ವಿಷಯಮಾದಕ್ಷರಂ ಶ್ರಾವಣಮೆಂಬುದು, ಲಿಪಿಭೇದದಿಂ ಪಲವಾಕಾರಮಾಗಿ ಕಣ್ಗೆ ತೋಱುವಕ್ಕರಂ ಚಾಕ್ಷುಷಮೆಂಬುದು; ಇದನಾದಿಮಾರ್ಗದಿನಱಿವುದು.

## 1. The Alphabet.

### ಸೂತ್ರಂ.

The 48 independent (for the dependent ones see Ss. 12; 17) letters of the Saṁskṛita-Canarese Alphabet.*

ವರ್ಣಂಗಳ ಪಾಠಕ್ರಮ
ಮರ್ಣವವೃತಧಾತ್ರಿಯೊಳ್ಪ್ರಸಿದ್ಧಂ ನಿಜದಿಂ ।
ವರ್ಣಂಗಳಕಾರಾದ್ಯಾ
ಪೂರ್ಣತೆಯಂ ಪಡೆವುವಾ ಳಕಾರಂಬರೆಗಂ ॥ 4 ॥

ಪದಚ್ಛೇದಂ.—ವರ್ಣಗಳ ಪಾಠಕ್ರಮಂ ಅರ್ಣವವೃತಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ; ವರ್ಣಂಗಳ್ ಅಕಾರಾದ್ಯಾಪೂರ್ಣತೆಯಂ ಪಡೆವುವು, ಆ ಳಕಾರಂಬರೆಗಂ.

ಅನ್ವಯಂ.—ಅರ್ಣವವೃತಧಾತ್ರಿಯೊಳ್ ವರ್ಣಂಗಳ ಪಾಠಕ್ರಮಂ ನಿಜದಿಂ ಪ್ರಸಿದ್ಧಂ; ವರ್ಣಂಗಳ್ ಅಕಾರಾದ್ಯಾಪೂರ್ಣತೆಯುಂ ಆ ಳಕಾರಂಬರೆಗಂ ಪಡೆವುವು.

ಟೀಕು.—ಅರ್ಣವ = ಸಮುದ್ರದಿಂದೆ; ವೃತ = ಸುತ್ತಲ್ಪಟ್ಟ; ಧಾತ್ರಿಯೊಳ್ = ಭೂಮಿಯಲ್ಲಿ; ವರ್ಣಂಗಳ = ಅಕ್ಷರಂಗಳ; ಪಾಠಕ್ರಮಂ = ಓದುವನುಕ್ರಮಂ; ನಿಜದಿಂ = ಸಹಜದಿಂದೆ; ಪ್ರಸಿದ್ಧಂ = ಪ್ರಸಿದ್ಧಂ; ವರ್ಣಂಗಳ್ = ಅಕ್ಷರಂಗಳ್; ಅಕಾರ = ಅಕಾರಂ; ಆದಿ = ಮೊದಲಾಗಿ; ಆಪೂರ್ಣತೆಯಂ = ಪರಿಪೂರ್ಣತ್ವಮಂ; ಆ ಳಕಾರಂಬರೆಗಂ = ಆ ಳಕಾರಂಪರಿಯಂತರಂ; ಪಡೆವುವು = ಹಡೆವುವು.

* The ಳ್ under this rule is the ಕ್ಷಳಂ.

ವೃತ್ತಿ.—ಅಕ್ಕರಂಗಳನೋದುವನುಕ್ರಮಂ ಕಡಲುಡಿಗೆಯಾದ ಪೊಡವಿಯೊಳ್ಪ್ರಸಿದ್ಧಂ; ಅಕ್ಕರಂಗಳಕಾರಂ ಮೊದಲಾಗಿ ಳಕಾರಪರ್ಯಂತಂ ಪರಿಪೂರ್ಣಮಾಗಿರ್ಪುವು; ಅವಾವುವೆಂದೊಡೆ—

ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ; ಕ್ ಖ್, ಗ್ ಘ್, ಙ್; ಚ್ ಛ್, ಜ್ ಝ್, ಞ್; ಟ್ ಠ್, ಡ್ ಢ್, ಣ್; ತ್ ಥ್, ದ್ ಧ್, ನ್; ಪ್ ಫ್, ಬ್ ಭ್, ಮ್; ಯ್, ರ್, ಲ್, ವ್, ಶ್, ಷ್, ಸ್, ಹ್, ಳ್.

## ಸೂತ್ರಂ.

The Saṁskṛita ಲ್ must take the form of ಳ್ (ಕ್ಷಳಂ) to be in Alliteration (ನಿಯಾಮಂ, ಪ್ರಾಸಂ) with the Canarese ಳ್ (ಕುಳಂ).

ಕುಳದ ನಿಯಾಮದೊಳೆಂದುಂ
ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ ವಿಕಲ್ಪಂ |
ಕ್ಷಳನಲ್ಲದಿಲ್ಲ ಸಂಸ್ಕೃತ
ದೊಳಾ ಲಕಾರಕ್ಕೆ ಪೇೞ್ದಿಸದಱಿಂ ಕ್ಷಳನಂ || 5 ||

ಪದಚ್ಛೇದಂ.—ಕುಳದ ನಿಯಾಮದೊಳ್ ಎಂದುಂ ಕ್ಷಳಕ್ಕೆ ಲಾಕ್ಷರವಿಕಲ್ಪಂ ಇಲ್ಲ; ವಿಕಲ್ಪಂ, ಕ್ಷಳಂ ಅಲ್ಲದೆ, ಇಲ್ಲ; ಸಂಸ್ಕೃತದೊಳ್ ಆ ಲಕಾರಕ್ಕೆ ಪೇೞ್ದಿಂ ಅದಱಿಂ ಕ್ಷಳನಂ.

ಅನ್ವಯಂ.—ಕುಳದ ನಿಯಾಮದೊಳ್ ಕ್ಷಳಕ್ಕೆ ಲಾಕ್ಷರವಿಕಲ್ಪಂ ಎಂದುಂ ಇಲ್ಲ; ವಿಕಲ್ಪಂ, ಕ್ಷಳಂ ಅಲ್ಲದೆ, ಇಲ್ಲ; ಅದಱಿಂ ಸಂಸ್ಕೃತದೊಳ್ ಆ ಲಕಾರಕ್ಕೆ ಕ್ಷಳನಂ ಪೇೞ್ದಿಂ.*

ಟೀಕು.—ಕುಳದ = ಕುಳಳಕಾರದ; ನಿಯಾಮದೊಳ್ = ಪ್ರಾಸಿನಲ್ಲಿ; ಕ್ಷಳಕ್ಕೆ = ಕ್ಷಳ ಳಕಾರಕ್ಕೆ; ಲಾಕ್ಷರವಿಕಲ್ಪಂ = ಲಕಾರದ ವಿಕಲ್ಪ; ಎಂದುಂ = ಆವಾಗಳುಂ; ಇಲ್ಲ = ಉಂಟಾಗದು; ವಿಕಲ್ಪಂ = ಕುಳಪ್ರಾಸಿಂಗೆ ವಿಕಲ್ಪಂ; ಕ್ಷಳನಲ್ಲದೆ = ಕ್ಷಳಳಕಾರಮಲ್ಲದೆ; ಇಲ್ಲ = ಲಕಾರದ ವಿಕಲ್ಪಮಿಲ್ಲ; ಅದಱಿಂ = ಅದು ಕಾರಣದಿಂದೆ; ಸಂಸ್ಕೃತದೊಳ್ = ಸಂಸ್ಕೃತದಲ್ಲಿ; ಆ ಲಕಾರಕ್ಕೆ = ಆ ಸಂಸ್ಕೃತದಲ್ಲಿರ್ದ ಲಕಾರಕ್ಕೆ; ಕ್ಷಳನಂ = ಕ್ಷಳನೆಂಬ ಳಕಾರಮಂ; ಪೇೞ್ದಿಂ = ಹೇೞ್ದೆಂ.

ವಿಚಾರಂ.—ಕುಳಮೆಂದೊಡೆ ಕನ್ನಡ ಶಬ್ದದಲ್ಲಿ ಇರ್ದ ಳಕಾರಂ; ಕ್ಷಳಮೆಂದೊಡೆ, ಸಂಸ್ಕೃತ ಶಬ್ದದಲ್ಲಿ || ಲಳಯೋರ್ ಅಭೇದಃ || ಎಂದು, ಉಂಟಾಗಿ, ಲಕಾರ ಳಕಾರಂಗಳ್ಗೆ ಭೇದವಿಲ್ಲದ ಳಕಾರವೆಂದಱಿವುದು.

---

* 16ನೆಯ ಸೂತ್ರಮಂ ನೋಡು.

ವೃತ್ತಿ. ಕುಳಪ್ರಾಸಮಾಗೆ ಪೇೞ್ದಿ ಕಬ್ಬಂ ಸೆಱೆ ಗೆಯ್ವುದಾಗಿ, ಲಕಾರಮಂ ವಿಕಲ್ಪಮುಂ ಮಾಡಬಾರದು; ಲಕಾರಪ್ರಾಸಮಾಗೆ ಪೇೞ್ದಿ ಕನ್ನಡದ ಕಬ್ಬದೊಳ್ ಕ್ಷಳನಂ ವಿಕಲ್ಪದಿನಿರಿಸಬಾರದು, ಇದುವುಮಾಗದು. ಕ್ಷಳನೆಂಬುದಿಲ್ಲದೆ, ಸಂಸ್ಕೃತಪದದ ಲಕಾರಕ್ಕೆ ವಿಕಲ್ಪಮುಂ ಪೇೞಿಲ್ವಾರದಾಗಿ, ಕ್ಷಳನನಿದಱೊಳೆ ಬೆರಸಿ ಪೇೞ್ದೆಂ.

ಪ್ರಯೋಗಂ. Application of the foregoing rule.

ಕುಳಕ್ಷಳಪ್ರಾಸಕ್ಕೆ—ಕಿಳಿಱೆ ಹಯಂಗಳ್, ಗರ್ಜಿಸೆ
ಜಳದನಿಭಂಗಳ್ ಗಜಂಗಳ್, ಇತ್ಯಾದಿ (ಕಂದಭಾಗಂ)

ಲಕಾರಕ್ಕೆ ಕ್ಷಳನನಿರಿಸಬಾರದುದರ್ಕೆ—
ಓಲಗದೊಳೊರ್ಮೆ ನತನರ
ಪಾಲಕಚೂಡಾಮಣಿದ್ಯುತಿಪ್ಲುತಚರಣಂ (ಕಂದಾರ್ಧಂ).

## 2. The Vowels.

### ಸೂತ್ರಂ.

ತರದಿನಕಾರಂ ಮೊದಲಾ
ಗಿರೆ ಪದಿನಾಲ್ಕುಂ ಸ್ವರಂಗಳಾದಿಯ ಪತ್ತ
ಕ್ಕರಮುಂ ಸಮಾನಮೆನಿಸುಗು
ಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ ‖6‖

There are 14 Saṁskṛita-Canarese Vowels; excepting ಏ, ಐ and ಓ, ಔ (which are Diphthongs, ಸಂಧ್ಯಕ್ಷರಂಗಳ್, *cf.* S. 10), they are Monophthongs (ಸಮಾನಂಗಳ್), and Homogens (ಸವರ್ಣಂಗಳ್).

ಪದಚ್ಛೇದಂ.— ತರದಿಂ ಅಕಾರಂ ಮೊದಲ್ ಆಗಿ ಇರೆ, ಪದಿನಾಲ್ಕುಂ ಸ್ವರಂಗಳ್; ಆದಿಯ ಪತ್ತು ಅಕ್ಕರಮುಂ ಸಮಾನಂ ಎನಿಸುಗುಂ, ಎರಡು ಎರಡು ಅವಱೊಳ್ ಸವರ್ಣಂ, ಎಂತು ಓದಿದೊಡಂ.

ಅನ್ವಯಂ.—ತರದಿಂ ಅಕಾರಂ ಮೊದಲ್ ಆಗಿ ಇರೆ, ಪದಿನಾಲ್ಕುಂ ಸ್ವರಂಗಳ್; ಆದಿಯ ಪತ್ತಕ್ಕರಮುಂ ಸಮಾನಂ ಎನಿಸುಗುಂ, ಅವಱೊಳ್ ಎರಡೆರಡು, ಎಂತು ಓದಿದೊಡಂ, ಸವರ್ಣಂ.

ಟೀಕು.—ತರದಿಂ = ತರುವಾಯಿಂದೆ; ಅಕಾರಂ = ಅತ್ವಂ; ಮೊದಲಾಗಿ = ಆದಿಯಾಗಿ; ಇರೆ = ಇರಲಾಗಿ; ಪದಿನಾಲ್ಕುಂ = ಹದಿನಾಲ್ಕಕ್ಷರಂಗಳುಂ; ಸ್ವರಂಗಳ್ = ಸ್ವರಾಕ್ಷರಂಗಳ್; ಎನಿ

ಸುಗುಂ = ಎನಿಸುವವು; ಆದಿಯ = ಮೊದಲ; ಪತ್ತಕ್ಕರಮುಂ = ಹತ್ತಕ್ಷರಂಗ' ೨; ಸಮಾನಂ = ಸಮಾನಂಗಳ್; ಎನಿಸುಗುಂ = ಎನಿಸುವವು; ಅವಱೊಳ್ = ಆ ಸಮಾನಸಂಜ್ಞೆಯುಂ ಪಡೆದ ಹತ್ತಕ್ಷರಂಗಳಲ್ಲಿ; ಎರಡೆರಡು = ಎರಡೆರಡಕ್ಷರಂಗಳ್; ಎಂತೋದಿದೊಡಂ = ಅನುಲೋಮ ವಿಲೋಮಂಗಳಾಗಿ ಹ್ಯಾಗೆ ಓದಿದೊಡೆಯುಂ; ಸವರ್ಣಂ = ಸವರ್ಣಂಗಳ್; ಎನಿಸುಗುಂ = ಎನಿಸುವವು.

ವೃತ್ತಿ.—ಕ್ರಮದಿಂದಕಾರಂ ಮೊದಲಾಗಿ ಔಕಾರಪರ್ಯಂತಮಿಪ್ಪ ಪದಿನಾಲ್ಕಕ್ಕರಂ ಸ್ವರಸಂಜ್ಞೆಯುಂ ಪಡೆಗುಮ್; ಅಲ್ಲಿ ಮೊದಲ ಪತ್ತಕ್ಕರಂ ಸಮಾನಸಂಜ್ಞೆಯುಂ ಪಡೆಗುಮ್; ಆ ಪತ್ತಕ್ಕರಂಗಳೊಳೆರಡೆರಡಕ್ಕರಂಗಳ್, ತಮ್ಮೊಳನುಲೋಮದೊಳಿರ್ದೊಡಂ ವಿಲೋಮದೊಳಿರ್ದೊಡಂ, ಸವರ್ಣಸಂಜ್ಞೆಯುಂ ಪಡೆಗುಂ.

ಪದಿನಾಲ್ಕು ಸ್ವರಂಗಳ್—ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ ಎಂಬೀ ಪದಿನಾಲ್ಕುಂ ಸ್ವರಂಗಳ್.

ಸಮಾನಸಂಜ್ಞಾಕ್ಷರಂಗಳ್— ಅ ಆ, ಇ ಈ, ಉ ಊ, ಋ ೠ, ಌ ೡ ಎಂಬಿವು ಪತ್ತುಂ ಸಮಾನಸಂಜ್ಞೆಗಳ್.

ಅನುಲೋಮಕ್ಕೆ—ಅ ಆ, ಇ ಈ ಎಂಬೀ ಪ್ರಕಾರಮಾಗಿ ಆ ಪತ್ತಕ್ಷರಂಗಳ್ ಅನುಲೋಮದೊಳಿರ್ದೊಡಂ ಸವರ್ಣಸಂಜ್ಞೆಯುಂ ಪಡೆಗುಂ.

ವಿಲೋಮಕ್ಕೆ—ಆ ಅ, ಈ ಇ ಎಂಬೀ ಪ್ರಕಾರಮಾಗಿರ್ದೊಡಂ ಸವರ್ಣಸಂಜ್ಞೆಯುಂ ಪಡೆಗುಂ.

## ಸೂತ್ರಂ.

**Further remark on the Homogeny of the said 10 Vowels.**

ಕ್ರಮದಿಂ ಹ್ರಸ್ವಕ್ಕಂ ಹ್ರ
ಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ ।
ಸಮ ಸಂದಾ ಯುಗಳಂಗಳೊ
ಳಮಳಿನಮಾಗೆಲ್ಲಿಯುಂ ಸವರ್ಣವಿಧಾನಂ ॥ 7 ॥

ಪದಚ್ಛೇದಂ.—ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಂ ಒದವೆ, ದೀರ್ಘಕ್ಕೆ ದೀರ್ಘಂ ಒದವೆ, ತಗುಳ್ಗುಂ ಸಮ ಸಂದ ಆ ಯುಗಳಂಗಳೊಳ್, ಅಮಳಿನಂ ಆಗಿ, ಎಲ್ಲಿಯುಂ ಸವರ್ಣವಿಧಾನಂ.

ಅನ್ವಯಂ—ಸಮ ಸಂದಾ ಯುಗಳಂಗಳೊಳ್ ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಂ ಒದವೆ, ದೀರ್ಘಕ್ಕೆ ದೀರ್ಘಂ ಒದವೆ, ಅಮಳಿನಂ ಆಗಿ ಎಲ್ಲಿಯುಂ ಸವರ್ಣವಿಧಾನಂ ತಗುಳ್ಗುಂ.

ಟೀಕು.—ಸಮ ಸಂದ= ಸಮಾನಮಾಗಿ ಸಂದ; ಆ ಯುಗಳಂಗಳೊಳ್= ಆ ಎರಡೆರಡಕ್ಷರಂಗಳಲ್ಲಿ; ಕ್ರಮದಿಂ = ತಱುವಾಯಿಂದೆ; ಹ್ರಸ್ವಕ್ಕಂ= ಹ್ರಸ್ವಾಕ್ಷರಕ್ಕೆಯುಂ; ಹ್ರಸ್ವಂ= ಹ್ರಸ್ವಾಕ್ಷರಂ; ಒದವೆ= ಪ್ರಾಪ್ತಿಸೆ; ದೀರ್ಘಕ್ಕೆ = ದೀರ್ಘಾಕ್ಷರಕ್ಕೆ; ದೀರ್ಘಂ= ದೀರ್ಘಾಕ್ಷರಂ; ಒದವೆ= ಪ್ರಾಪ್ತಿಸೆ; ಅಮಳಿನಮಾಗಿ = ನಿರ್ದೋಷಮಾಗಿ; ಎಲ್ಲಿಯುಂ= ಆವೆಡೆಯಲ್ಲಿಯುಂ; ಸವರ್ಣವಿಧಾನಂ= ಸವರ್ಣಸಂಜ್ಞಾವಿಧಾನಂ; ತಗುಳ್ಗುಂ= ಐದುವುದು.

ವೃತ್ತಿ.—ತಱುವಾಯಿಂದಾ ಯುಗಳಂಗಳೊಳೆ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ, ದೀರ್ಘಕ್ಕೆ ದೀರ್ಘಂ ಪರಮಾದೊಡಂ, ನಿರ್ದೋಷಮಾಗಿ ಸವರ್ಣಸಂಜ್ಞೆ ವರ್ತಿಸುಗುಂ. ಎಂತೆಂದೊಡೆ—

ಹ್ರಸ್ವಕ್ಕೆ—ಅ ಅ; ಇ ಇ; ಉ ಉ; ಋ ಋ; ಌ ಌ.
ದೀರ್ಘಕ್ಕೆ—ಆ ಆ; ಈ ಈ; ಊ ಊ; ೠ ೠ; ೡ ೡ.

## ಸೂತ್ರಂ.

ಸವನಿಸಿದೆ ಏ ಒ ಓ ಎಂ
ಬಿವು ಕನ್ನಡದೊಳ್ಸ್ವಭಾವದಿಂದೊಳವು ಸವ |
ರ್ಣವುಮಪ್ಪುವು ವರ್ಣಾಂಕಂ
ಸವರ್ಣಸಂಜ್ಞೆಯೊಳವೊದವುಗುಂ ವ್ಯಾಕೃತಿಯೊಳ್ ||8||

The 4 Vowels ಎ ಏ, ಒ ಓ are inherent in Canarese and form two distinct pairs of letters each of homogen character. (In Saṁskṛita there is neither ಎ nor ಒ; *cf.* S. 19).

ಪದಚ್ಛೇದಂ.—ಸವನಿಸಿದ ಎ ಏ, ಒ ಓ ಎಂಬ ಇವು ಕನ್ನಡದೊಳ್ ಸ್ವಭಾವದಿಂದೆ ಒಳವು; ಸವರ್ಣವುಂ ಅಪ್ಪುವು; ವರ್ಣಾಂಕಂ ಸವರ್ಣಸಂಜ್ಞೆಯೊಳಂ ಒದವುಗುಂ ವ್ಯಾಕೃತಿಯೊಳ್.

ಅನ್ವಯಂ.—ಕನ್ನಡದೊಳ್ ಸವನಿಸಿದ ಎ ಏ, ಒ ಓ ಎಂಬಿವು ಸ್ವಭಾವದಿಂದೆ ಒಳವು; ಸವರ್ಣವುಂ ಅಪ್ಪುವು; ವ್ಯಾಕೃತಿಯೊಳ್ ಸವರ್ಣಸಂಜ್ಞೆಯೊಳಂ ವರ್ಣಾಂಕಂ ಒದವುಗುಂ.

ಟೀಕು.—ಕನ್ನಡದೊಳ್ = ಕನ್ನಡ ಭಾಷೆಯಲ್ಲಿ; ಸವನಿಸಿದ= ಪ್ರಾಪ್ತಿಸಿದ; ಎ ಏ ಒ ಓ = ಎ ಏ ಒ ಓ ಎಂಬಿವು ಹ್ರಸ್ವ ದೀರ್ಘಂಗಳಾಗಿ; ಎಂಬ ಇವು = ಈ ಯುಗಳಾಕ್ಷರಂಗಳ್; ಸ್ವಭಾವದಿಂದೆ= ಸಹಜದಿಂದೆ; ಒಳವು= ಉಂಟು; ಸವರ್ಣವುಂ= ಸವರ್ಣಗಳುಂ; ಅಪ್ಪುವು= ಆಗುವವು; ವ್ಯಾಕೃತಿಯೊಳ್= ವ್ಯಾಕರಣದಲ್ಲಿ; ಸವರ್ಣಸಂಜ್ಞೆಯೊಳಂ= ಸವರ್ಣವೆಂಬ ಸಂಜ್ಞೆಯಲ್ಲಿಯುಂ; ವರ್ಣಾಂಕಂ= ವರ್ಣವೆಂಬ ಸಂಜ್ಞೆ; ಒದವುಗುಂ= ಪ್ರಾಪ್ತಿಸುವುದು.

ವಿಚಾರಂ.—ವರ್ಣಸಂಜ್ಞೆ ಎಂತೆಂದೊಡೆ, ಅವರ್ಣಂ ಇವರ್ಣಂ ಉವರ್ಣಂ ಎಂಬಂತೆ ಇವಂ ತಿಳಿವುದು.

ವೃತ್ತಿ.—ಎ ಏ, ಒ ಓ ಎಂಬೀ ಯುಗಳಾಕ್ಷರಂಗಳ್ವಿಶಂಕಾವಧಾರಣನಿಪಾತಂಗಳಲ್ಲದೆ ನಿಜದಿನೊಳವು; ಸವರ್ಣಸಂಜ್ಞೆಯುಮವರ್ಕೆ ದೊರೆಕೊಳ್ವುದು; ವ್ಯಾಕರಣದೊಳ್ ಸವರ್ಣಸಂಜ್ಞೆ ವರ್ಣಸಂಜ್ಞೆಯುಮುಂಟು.

ಪ್ರಯೋಗಂ.—ಎಲೆ, ಎಱವಂ; ಏರಿ, ಏತಂ.—ಒಕ್ಕಲ್, ಒರೆಗಲ್; ಓತಂ, ಓರಗೆ.

ಎತ್ತುಂಗೋಲುಂ ಬಿರಯಿಂಗೆ | ಚಿತ್ತಭವಂ || ಕಂದಭಾಗಂ ||.
ಎಡಱಿದರನಟ್ಟಿ ವೋದುವ
ಪಡಿಯಱಿಗಟ್ಟಿಗೆಗಳ್ || ಕಂದಭಾಗಂ ||.
ಏಳಿದಂ ಗೆಯ್ಯಲಿವಿಾಗಳ್.
ಏತಱಿ ಮಾತೋ ಭೂತಳದೊಳ್.
ಏೞುಂ ಬೆಸನಮುಮಂ ನರಪಾಲನುೞಿಗೆ.
ಒತ್ತರಮೊತ್ತಿದಂತೆ ಬೆಱಿಗಾಗೆ ಕೃಪಾದಿಗಳೊತ್ತೆ.
ಓಸರಿಸಿದ ಜವನಿಕೆಯೊಡ
ನೋಸರಿಸಿದನಲ್ತೆ ಕಂತು || ಕಂದಭಾಗಂ ||

ಸೂತ್ರಂ.

As will have been observed, the Vowels are long and short. The Saṁskrita-Canarese vowels, except ಅ and ಆ, are called "Benders" (ನಾಮಿಗಳ್).*

ವಿದಿತಸಮಾನಂಗಳ ಪೂ
ರ್ವದಕ್ಕರಂ ಹ್ರಸ್ವಮದಱಿ ಪರದಕ್ಕರಮುಂ |
ತದು ದೀರ್ಘವರ್ಣಂ ಪಿಂ
ಗಿದಾ ಸ್ವರಂ ನಾಮಿಯೆಂದು ಪೇೞಿಲ್ಪಡೆಗುಂ || 9 ||

* Nâmi means "bending"; the Nâmi vowels bend or change a Dental into a Cerebral. The author does not make use of the word again.

ಪದಚ್ಛೇದಂ.—ವಿದಿತಸಮಾನಂಗಳ ಪೂರ್ವದ ಅಕ್ಕರಂ ಹ್ರಸ್ವಂ, ಅದಱ ಪರದ ಅಕ್ಕರಂ ಅಂತು ಅದು ದೀರ್ಘಂ; ಅವರ್ಣಂ ಪಿಂಗಿದಾ ಸ್ವರಂ, ನಾಮಿ ಎಂದು, ಪೇೞಲ್ ಪಡೆಗುಂ.

ಯಥಾನ್ವಯಂ. ಟೀಕು.—ವಿದಿತ = ಪ್ರಸಿದ್ಧವಾದ; ಸಮಾನಂಗಳ = ಸಮಾನ ಸಂಜ್ಞೆಯಂ ಪಡೆದ ಪತ್ತಕ್ಕರಂಗಳ; ಪೂರ್ವದ = ಮೊದಲ; ಅಕ್ಕರಂ = ಅಕ್ಷರಂ; ಹ್ರಸಂ = ಹ್ರಸ್ವಾಕ್ಷರಂ; ಅದಱ = ಆ ಹ್ರಸ್ವಾಕ್ಷರದ; ಪರದ = ಮುಂದಣ; ಅಕ್ಕರಂ = ಅಕ್ಷರಂ; ಅಂತು = ಹಾಗೆ; ಅದು = ತಾಂ; ದೀರ್ಘಂ = ದೀರ್ಘಾಕ್ಷರಂ; ಅವರ್ಣಂ = ಅ ಆ ಎಂಬ ಸವರ್ಣಂ; ಪಿಂಗಿದ = ತೊಲಗಿದ; ಆ ಸ್ವರಂ = ಆ ಹನ್ನೆರಡು ಸ್ವರಾಕ್ಷರಂಗಳ್; ನಾಮಿಯೆಂ. ದು = ನಾಮಿಗಳೆಂದು; ಪೇೞಲ್ಪಡೆಗುಂ = ಪೇಳಲ್ಪಡೆವುವು.

ವೃತ್ತಿ.— ಸಮಾನಸಂಜ್ಞೆಯಂ ಪಡೆದ ಪತ್ತಕ್ಕರಂಗಳ ಮೊದಲಕ್ಕರಂಗಳ್ ಹ್ರಸ್ವಂಗಳ್, ಅವಾವುವೆಂದೊಡೆ—ಅ, ಇ, ಉ, ಋ, ಌ ಎಂಬಿವು; ಎ, ಒ ಎಂಬಿವುಮಂತೆ ಸಲ್ವುವು. ಅವಱ ಮುಂದಣಕ್ಕರಂಗಳ್ ದೀರ್ಘಂ; ಅವಾವು ವೆಂದೊಡೆ—ಆ, ಈ, ಊ, ೠ, ೡ, ಏ, ಓ. ಅ ಆ ಎಂಬ ವರ್ಣಂ ಪಿಂಗಿ ದಾ ಪನ್ನೆರಡು ಸ್ವರಂಗಳ್ ನಾಮಿಸಂಜ್ಞೆಯಂ ಪಡೆವುವು; ಅವಾವುವೆಂದೊಡೆ— ಇ, ಈ; ಉ, ಊ; ಋ, ೠ; ಌ, ೡ; ಏ, ಐ; ಓ, ಔ ಎಂಬಿವು.

ಉಪೇಂದ್ರವಜ್ರವೃತ್ತಂ.[1]

ಅವರ್ಣವಾದಕ್ಕೆಡೆಯಾಗದೊಳ್ಪಿಂ
ದವರ್ಣಿಕಾಮರ್ ಗುಣವೃದ್ಧಿಧಾಮರ್ ।
ದಿವಾಕರರ್ ವ್ಯಾಕೃತಿನಾಮಿಗಳ್ ಪೋಲ್
ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ ॥

ಸೂತ್ರಂ.

The 4 Diphthongs (*cf.* S. 6). Metrical quantity of the Vowels.

ಕ್ರಮದೆ ಗುರುದೀರ್ಘಮೇಕಾ
ರಮುಖ್ಯಸಂಧ್ಯಕ್ಷರಂಗಳವು ನಿಜದಿಂ ಹ್ರ ।
ಸ್ವಮದೇಕಮಾತ್ರಕಂ ದೀ
ರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ
॥ 10 ॥

[1] This metre is of the Upêndravajra, *i. e.* 4 times:
◡—◡|——◡|◡—◡|——|

ಪದಚ್ಛೇದಂ.—ಕ್ರಮದೆ ಗುರು ದೀರ್ಘಂ ಏಕಾರಮುಖ್ಯಸಂಧ್ಯಕ್ಷರಂಗಳ್ ಅವು ನಿಜದಿಂ; ಹ್ರಸ್ವಂ ಅದು ಏಕಮಾತ್ರಕಂ, ದೀರ್ಘಂ ಉಭಯಮಾತ್ರಂ, ತ್ರಿಮಾತ್ರಕಂ ಪ್ಲುತಂ ಅಕ್ಕುಂ.

ಅನ್ವಯಂ.—ಕ್ರಮದೆ ಏಕಾರಮುಖ್ಯಸಂಧ್ಯಕ್ಷರಂಗಳ್ ಅವು ನಿಜದಿಂ ಗುರು ದೀರ್ಘಂ ಅಕ್ಕುಂ; ಏಕಮಾತ್ರಕಂ ಅದು ಹ್ರಸ್ವಂ, ಉಭಯಮಾತ್ರಂ ದೀರ್ಘಂ, ತ್ರಿಮಾತ್ರಕಂ ಪ್ಲುತಂ ಅಕ್ಕುಂ.

ಟೀಕು.—ಕ್ರಮದೆ = ತಱುವಾಯಿಂದೆ; ಏಕಾರ = ಏಕಾರಂ; ಮುಖ್ಯ = ಮೊದಲಾದ; ಸಂಧ್ಯಕ್ಷರಂಗಳ್ = ಏ ಐ, ಓ ಔ ಎಂಬ ಸಂಧ್ಯಕ್ಷರಂಗಳ್; ಅವು = ಅವು ತಾಂ; ನಿಜದಿಂ = ಸ್ವಭಾವದಿಂದೆ; ಗುರು = ಗುರುಗಳುಂ; ದೀರ್ಘಂ = ದೀರ್ಘಂಗಳುಂ; ಅಕ್ಕುಂ = ಅಪ್ಪುವು; ಏಕಮಾತ್ರಕಂ = ಒಂದು ಮಾತ್ರೆಯನುಳ್ಳುದು; ಅದು = ಅದು ತಾಂ; ಹ್ರಸ್ವಂ = ಹ್ರಸ್ವಾಕ್ಷರಂ ಅಪ್ಪುದು; ಉಭಯಮಾತ್ರಂ = ಎರಡು ಮಾತ್ರೆಯನುಳ್ಳುದು; ದೀರ್ಘಂ = ದೀರ್ಘಾಕ್ಷರಂ ಅಪ್ಪುದು; ತ್ರಿಮಾತ್ರಕಂ = ಮೂಱು ಮಾತ್ರೆಯನುಳ್ಳುದು; ಪ್ಲುತಂ = ಪ್ಲುತವಾದಕ್ಷರಂ ಅಪ್ಪುದು.

ವಿಚಾರಂ.—ಸಂಧ್ಯಕ್ಷರಂಗಳೆಂದೊಡೆ ಸಂಸ್ಕೃತವ್ಯವಹಾರದಲ್ಲಿ ಸಂಧಿಯಾದಕ್ಷರಂಗಳೆಂದಱಿವುದು; ಅದೆಂತೆಂದೊಡೆ, ಅಕಾರಮುಂ ಇಕಾರಮುಂ ಕೂಡಿ ಸಂಧಿಯಾಗೆ, ಏಕಾರಂ ಪುಟ್ಟುಗುಂ; ಅಕಾರಮುಂ ಏಕಾರಮುಂ ಕೂಡಿ ಸಂಧಿಯಾಗೆ, ಐಕಾರಂ ಪುಟ್ಟುಗುಂ; ಅಕಾರಮುಂ ಉಕಾರಮುಂ ಕೂಡಿ ಸಂಧಿಯಾಗೆ, ಓಕಾರಮುಂ ಪುಟ್ಟುಗುಂ; ಅಕಾರಮುಂ ಓಕಾರಮುಂ ಕೂಡಿ ಸಂಧಿಯಾಗೆ, ಔಕಾರಮುಂ ಪುಟ್ಟುಗುಂ. ಇದರ್ಕುದಾಹರಣೆಗಳ್—

ಅಕಾರಂ ಇಕಾರಂ ಕೂಡಿ ಏಕಾರಮಾದುದರ್ಕೆ—ನಿಜ ಇಷ್ಟ ಸಿದ್ಧಿಗಳ್ = ನಿಜೇಷ್ಟಸಿದ್ಧಿಗಳ್.
ಐಕಾರಕ್ಕೆ—ಜ್ಯಾದಿ ಸಮಸ್ತ ಏಕಾಕ್ಷರಂ = ಜ್ಯಾದಿಸಮಸ್ತೈಕಾಕ್ಷರಂ.
ಓಕಾರಕ್ಕೆ—ವಿದಿತ ಉಭಯ ಕರ್ತೃಕಂ = ವಿದಿತೋಭಯಕರ್ತೃಕಂ.
ಔಕಾರಕ್ಕೆ—ವಿದಿತ ಓಕಾರಂ = ವಿದಿತೌಕಾರಂ ಎಂಬಂತೆ.

ವೃತ್ತಿ.—ತಱುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು; ಅವಾವುವೆಂದೊಡೆ—ಏ ಐ, ಓ ಔ.

ವರಸಂಧ್ಯಕ್ಷರದಂತಿರೆ
ಗುರು ದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ ।
ಕರಮೆಸೆದಿರ್ಕುಂ ಪದ್ಮೋ
ದರಂಗೆ ಚಕ್ರಾಸಿಶಂಖಶಾರ್ಙಸಮೇತಂ ॥ ಕಂದಂ ॥

ಎರಡು ವ್ಯಂಜನಮನುಚ್ಚರಿಸುವನಿತು ಕಾಲಂ ಮಾತ್ರೆಯೆಂಬುದು, ಅದು ಹ್ರಸ್ವಮೆನಿಪುದು, ಲಘುವೆನಿಪುದು; ಸ್ವರವ್ಯಂಜನದಿನೇಕಮಾತ್ರಮಾದೊಡೆ ಹ್ರಸ್ವಂ; ದ್ವಿಮಾತ್ರಮಾದೊಡೆ ದೀರ್ಘಂ; ತ್ರಿಮಾತ್ರಮಾದೊಡೆ ಪ್ಲುತಂ.

ಪ್ರಯೋಗಂ.—ಹ್ರಸ್ವದೀರ್ಘಪ್ಲುತಕ್ಕೆ—ಭು ಭೂ ಭೋ ಎಂದು, ಪೂರಯಿಸಿದುದು ಶಂಖಂ; ಕು ಕೂ ಕೋ ಎಂದು, ಕೋಟಿ ಕೂಗಿದುವಾಗಳ್.

## ಸೂತ್ರಂ.

On Anusvâra (೦) and Visarga (ಃ).

ಬಿಂದುಮನುಸ್ವಾರಂ ತಾ
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ।
ಸಂದಿರ್ಪುದಂತದಡಕಿ
ಲ್ವೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ॥11॥

ಪದಚ್ಛೇದಂ.—ಬಿಂದುಂ ಅನುಸ್ವಾರಂ ತಾಂ ಎಂದು, ಅಕ್ಕುಂ ಸೊನ್ನೆ; ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು. ಅಂತು ಅದು ಅಡಕಿಲ್ ಪೊಂದಿ ಇರೆ, ಮಣಿಗೊಪ್ಪುವೋಲ್ ವಿಸರ್ಗಂ ಎನಿಕ್ಕುಂ.

ಅನ್ವಯಂ.—ಬಿಂದುಂ ಅನುಸ್ವಾರಂ ಎಂದು, ಸೊನ್ನೆ ತಾಂ ಅಕ್ಕುಂ; ವೃತ್ತತೆಯಿಂ ಮುತ್ತುವೋಲ್ ಸಂದಿರ್ಪುದು. ಅಂತು ಅದು ಅಡಕಿಲ್ವೊಂದಿರೆ, ಮಣಿಗೊಪ್ಪುವೋಲ್ ವಿಸರ್ಗಂ ಎನಿಕ್ಕುಂ

ಟೀಕು.—ಬಿಂದು = ಬಿಂದುವೆಂದೂ; ಅನುಸ್ವಾರಂ = ಅನುಸ್ವಾರವೆಂದೂ; ಸೊನ್ನೆ = ಸೊನ್ನೆ; ತಾಂ = ತಾಂ; ಅಕ್ಕುಂ = ಅಪ್ಪುದು; ವೃತ್ತತೆಯಿಂ = ಬಟ್ಟತ್ತಾಗಿರ್ಪುದರಿಂದೆ; ಮುತ್ತುವೋಲ್ = ಮುತ್ತಿನ ಮಣಿಯ ಹಾಗೆ; ಸಂದಿರ್ಪುದು = ಸಲುವಳಿಯಾಗಿರ್ಪುದು; ಅಂತು = ಹಾಗೆ; ಅದು = ಆ ಸೊನ್ನೆ; ಅಡಕಿಲ್ವೊಂದಿರೆ = ಒಂದರ ಮೇಲೊಂದಿರೆ; ಮಣಿಗೊಪ್ಪುವೋಲ್ = ಮಣಿಗೊಪ್ಪಿನ ಹಾಗೆ; ವಿಸರ್ಗಂ = ವಿಸರ್ಜನೀಯಂ; ಎನಿಕ್ಕುಂ = ಎನಿಸುವುದು.

ವೃತ್ತಿ.—ಬಿಂದುವೆಂದುಮನುಸ್ವಾರಮೆಂದುಂ ಸೊನ್ನೆಗೆ ಪೆಸರಕ್ಕುಂ; ಬಿಂದು ಮುತ್ತಂ ಪೋಲ್ತು, ಶೂನ್ಯೆಯಂತೆ ಬಟ್ಟತ್ತಾಗಿರ್ಪುದರಿಂ ಶೂನ್ಯಶಬ್ದಂ; ಅಪಭ್ರಂಶಮಾಗೆಯುಂ ಕನ್ನಡದೊಳ್ಸೊನ್ನೆಯೆಂದಾಯ್ತು; ಬಿಂದುವಿನಂತಿರ್ಪುದರಿಂ ಬಿಂದುವೆಂದಾಯ್ತು; ಬಿಂದುಸ್ವರೂಪಂ॥ ೦॥. ಮಣಿಗೊಪ್ಪುವಿನಂತಿರೆ,

ಎರಡು ಸೊನ್ನೆಯುಮಡಕಿಲಾಗಿ ನಿಲೆ, ವಿಸರ್ಗಮೆನಿಸುಗುಂ; ವಿಸರ್ಜನೀಯ ಮೆಂದುಂ ವಿಸರ್ಗಕ್ಕೆ ಪೆಸರ್; ವಿಸರ್ಗಸ್ವರೂಪಂ ||ಃ||.

ಪ್ರಯೋಗಂ. ಬಿಂದುವಿಂಗೆ — ಆಂದೋಳಂ ಅಂದುಗೆ, ಅಂಬಿಕೆ. —
ಬೆರ್ಚಿ ಬೆಳ್ಪಳಿಸಿ ಬಂದಂ ಫಲ್ಗುಣನಲ್ಲಿ; ಸಂದ
ಯಮಣಂ ತಾನಿಲ್ಲ.
ವಿಸರ್ಗಕ್ಕೆ — ಅಃ, ಸಂದಯುಮಿಲ್ಲ! ಮೆಚ್ಚಿದೆಂ.

## ಸೂತ್ರಂ.

They are half vowels, half consonants, and called Yôgavâhas, *i. e.* letters which are dependent on others (*cf.* S. 17).

ಸ್ವರಪರದೊಳಿರ್ಪ ತೆಱದಿಂ
ದುರು ಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ |
ಪರಿಕಿಸೆ ಬಿಂದುವಿಸರ್ಗಂ
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ ||12||

ಪದಚ್ಛೇದಂ. — ಸ್ವಪರದೊಳ್ ಇರ್ಪ ತೆಱದಿಂದೆ ಉರು ಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ, ಪರಿಕಿಸೆ, ಬಿಂದುವಿಸರ್ಗಂ ಸ್ವರಾಂಗಮುಂ ವ್ಯಂಜನಾಂಗಮುಂ ತಾಂ ಎಂಬರ್.

ಯಥಾನ್ವಯಂ. ಟೀಕು. — ಸ್ವರ = ಸ್ವರಾಕ್ಷರಂಗಳ; ಪರದೊಳ್ = ಮುಂದುಗಡೆ ಯಲ್ಲಿ; ಇರ್ಪ ತೆಱದಿಂದೆ = ಇರ್ಪ ರೀತಿಯಿಂದೆ; ಉರು = ವಿಶೇಷವಾಗಿ; ಮುಖ್ಯೋಚ್ಚಾರಣಕ್ಕೆ = ಮುಖ್ಯವಾಗಿ ಉಚ್ಚರಿಪುದಕ್ಕೆ; ಬಾರದ ಕತದಿಂ = ಬಾರದ ಕಾರಣದಿಂದೆ; ಪರಿಕಿಸೆ = ವಿಚಾರಿಸೆ; ಬಿಂದು = ಸೊನ್ನೆ; ವಿಸರ್ಗಂ = ವಿಸರ್ಜನೀಯಂ; ಸ್ವರಾಂಗಮುಂ = ಸ್ವರಾಂಗವೆಂದುಂ; ವ್ಯಂಜನಾಂಗಮುಂ = ವ್ಯಂಜನಾಂಗವೆಂದುಂ; ತಾಂ = ವಿದ್ವಾಂಸರ್ತಾಂ; ಎಂಬರ್ = ಪೇಳ್ವರ್.

ವಿಚಾರಂ. — ಸ್ವರಂಗಳ ಪರದೊಳಿರ್ಪುದಱಿಂ ಸ್ವರಾಂಗಮೆಂದುಂ, — ಸಂಸ್ಕೃತದೊಳ್ || ಮೋಽನುಸ್ವಾರಃ || [1] ಸ್ರೋರ್ವಿಸರ್ಗಃ || ಎಂಬ ಸೂತ್ರಂಗಳಿಂದೆ — ಮಕಾರಮನುಸ್ವಾರಮೆಂದುಂ ರೇಫ ಸಕಾರಂಗಳ್ವಿಸರ್ಗಮೆಂದುಂ ಪೇೞ್ವುದಱಿಂ ವ್ಯಂಜನಾಂಗಮೆಂದುಂ, ಪೇೞ್ವರ್. ಅದಱಿಂ ಕೆಲಂಬರ್ ವ್ಯಾಕರಣಕಾರರ್ ಸ್ವರಸಂಜ್ಞೆಯಲ್ಲಿ ಪೇೞ್ವರ್; ಕೆಲಂಬರ್, ಜಿಹ್ವಾಮೂಲೀಯೋಪಧ್ಮಾನೀಯಬಿಂದುವಿಸರ್ಗಂಗಳಂ ವ್ಯಂಜನಸಂಜ್ಞೆಯಲ್ಲಿ ಯೋಗವಾಹಂಗಳೆಂದು, ಪೇೞ್ವರ್.

1) ಪಾಣಿನಿಸೂತ್ರಂ VIII, 3, 23.

ವೃತ್ತಿ.—ಸ್ವರಂಗಳ ಪರದೊಳಿರ್ಪ ದೂಸಱಿಂ ಸ್ವರಾಂಗಮುಮಪ್ಪುವು; ಸ್ವತಂತ್ರಮಾಗುಚ್ಚರಿಸಲ್ಬಾರದುದಱಿಂ ಬಿಂದು ವಿಸರ್ಗಂಗಳ್ ಸ್ವರಾಂಗಮುಂ ವ್ಯಂಜನಾಂಗಮುಮಪ್ಪುವು.

ಇದು ಸ್ವರಸಂಜ್ಞೆ.

### 3. The Consonants.

ಸೂತ್ರಂ.

The 34 Saṁskṛita-Canarese Consonants, being classified (ವರ್ಗಾಕ್ಷರಂಗಳ್) and not classified (ಅವರ್ಗಾಕ್ಷರಂಗಳ್).

ಪ್ರಕಟತರವ್ಯಂಜನಸಂ
ಜ್ಞೆ ಕಕಾರದಿನಾ ಳಕಾರಪರ್ಯಂತಂ ಪಂ |
ಚಕಪಂಚಕಂಗಳಿಂ ಪಂ
ಚಕಮಕ್ಕುಂ ವರ್ಗಮಂತ್ಯವರ್ಣಮವರ್ಗಂ || 13 ||

ಪದಚ್ಛೇದಂ.—ಪ್ರಕಟತರವ್ಯಂಜನಸಂಜ್ಞೆ ಕಕಾರದಿಂ ಆ ಳಕಾರಪರ್ಯಂತಂ; ಪಂಚಕಪಂಚಕಂಗಳಿಂ ಪಂಚಕಂ ಅಕ್ಕುಂ ವರ್ಗಂ; ಅಂತ್ಯವರ್ಣಂ ಅವರ್ಗಂ.

ಅನ್ವಯಂ.—ಕಕಾರದಿಂ ಆ ಳಕಾರಪರ್ಯಂತಂ ಪ್ರಕಟತರವ್ಯಂಜನಸಂಜ್ಞೆ; ಪಂಚಕಪಂಚಕಂಗಳಿಂ ವರ್ಗಂ ಪಂಚಕಂ ಅಕ್ಕುಂ; ಅಂತ್ಯವರ್ಣಂ ಅವರ್ಗಂ.

ಟೀಕು.—ಕಕಾರದಿಂ=ಕಕಾರದಿಂದೆ; ಆ ಳಕಾರಪರ್ಯಂತಂ=ಆ ಳಕಾರಪರ್ಯಂತವಾಗಿ; ಪ್ರಕಟತರ=ಪ್ರಸಿದ್ಧವಾದ; ವ್ಯಂಜನಸಂಜ್ಞೆ=ವ್ಯಂಜನಾಕ್ಷರಂಗಳೆಂಬ ಸಂಜ್ಞೆ ಅಪ್ಪುದು; ಪಂಚಕಪಂಚಕಂಗಳಿಂ=ಐದೈದಕ್ಷರಂಗಳಿಂದೆ; ವರ್ಗಂ=ವರ್ಗಸಂಜ್ಞೆ; ಪಂಚಕಂ=ಐದುವರ್ಗಂ; ಅಕ್ಕುಂ=ಅಪ್ಪುವು; ಅಂತ್ಯವರ್ಣಂ=ಕಡೆಯಒಂಬತ್ತಕ್ಷರಂಗಳ್; ಅವರ್ಗಂ=ಅವರ್ಗಾಕ್ಷರಂಗಳ್ ಅಪ್ಪುವು.

ವೃತ್ತಿ.—ಕಕಾರಂ ಮೊದಲಾಗಿ ಳಕಾರಪರ್ಯಂತಂ ವರ್ತಿಪ ವರ್ಣಂಗಳ್ ವ್ಯಂಜನಸಂಜ್ಞೆಯುಂ ಪ್ರತ್ಯೇಕಂ ಪಡೆಗುಂ ಕ್ ಖ್ ಗ್ ಘ್ ಙ್, ಚ್ ಛ್ ಜ್ ಝ್ ಞ್, ಟ್ ಠ್ ಡ್ ಢ್ ಣ್, ತ್ ಥ್ ದ್ ಧ್ ನ್, ಪ್ ಫ್ ಬ್ ಭ್ ಮ್; ಯ್ ರ್ ಲ್ ವ್ ಶ್ ಷ್ ಸ್ ಹ್ ಳ್ ಎಂಬಿವು 34 ವ್ಯಂಜನಂಗಳ್; ಅವಱೊಳ್ ಕಕಾರಂ ಮೊದಲಾಗಿ ಮಕಾರಪರ್ಯಂತಾವೈದೈದು ವರ್ಣಂಗಳೊಂದೊಂದು ವರ್ಗಮಾಗಿ, ವರ್ಗಮೈದಕ್ಕುಂ; ಆ ವರ್ಗಾಕ್ಷರಂಗಳರ್ಪತ್ತೈದಱ ಕಡೆಯಕ್ಕರಂಗಳವರ್ಗಂಗಳ್, ಯ್ ರ್ ಲ್ ವ್ ಶ್ ಷ್ ಹ್ ಳ್ ಎಂಬಿವು.

## ಸೂತ್ರಂ.

The Aspirates. In Canarese they are chiefly used in numbers (ಸಂಖ್ಯೆ) and imitative sounds (ಅನುಕೃತಿ).

ವರ್ಗದ್ವಿತೀಯವರ್ಣಂ
ವರ್ಗಚತುರ್ಥಾಕ್ಷರಂ ಮಹಾಪ್ರಾಣಮವಂ।
ಮಾರ್ಗವಿದರ್ಸಂಖ್ಯೆಯೊಳಂ ಬಲ್ಲವರು—
ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ ॥ 14 ॥

ಪದಚ್ಛೇದಂ.—ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಂ; ಅವಂ ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವ ಅನುಕೃತಿಯೊಳಂ ಪ್ರಯೋಗಿಸುತೆ ಇರ್ಪರ್.

ಯಥಾನ್ವಯಂ. ಟೀಕು.—ವರ್ಗ = ವರ್ಗಂಗಳ; ದ್ವಿತೀಯವರ್ಣಂ = ಖ್ ಛ್ ಠ್ ಥ್ ಫ್ ಎಂಬೆರಡನೆಯ ಅಕ್ಕರಂಗಳುಂ; ವರ್ಗ = ವರ್ಗಂಗಳ; ಚತುರ್ಥಾಕ್ಷರಂ = ಘ್ ಝ್ ಢ್ ಧ್ ಭ್ ಎಂಬ ನಾಲ್ಕನೆಯ ಅಕ್ಷರಂಗಳುಂ; ಮಹಾಪ್ರಾಣಂ = ಮಹಾಪ್ರಾಣಾಕ್ಷರಂಗಳೆನಿಸುವುವು; ಅವಂ = ಆ ಮಹಾಪ್ರಾಣಾಕ್ಷರಂಗಳಂ; ಮಾರ್ಗವಿದರ್ = (ಕನ್ನಡದ) ಕವಿಮಾರ್ಗಮಂ ಬಲ್ಲವರ್; ಸಂಖ್ಯೆಯೊಳಂ = ಸಂಖ್ಯಾವಾಚಿಗಳಲ್ಲಿಯುಂ; ಭೋರ್ಗರೆವ = ಧ್ವನಿ ಗೆಯ್ವ; ಅನುಕೃತಿಯೊಳಂ = ಅನುಕರಣಶಬ್ದಂಗಳಲ್ಲಿಯುಂ; ಪ್ರಯೋಗಿಸುತಿರ್ಪರ್ = ಪ್ರಯೋಗವಂ ಮಾಡುತಿರ್ಪರ್.

ವಿಚಾರಂ.—ವರ್ಗದೆರಡನೆಯ ನಾಲ್ಕನೆಯ ಅಕ್ಷರಂಗಳ್ಮಹಾಪ್ರಾಣಂಗಳಾದಲ್ಲಿ ವರ್ಗದೊಂದನೆಯ ಮೂರನೆಯ ಕ್, ಚ್, ಟ್, ತ್, ಪ್; ಗ್ ಜ್, ಡ್, ದ್, ಬ್ ಎಂಬಿವು ಅಲ್ಪಪ್ರಾಣಂಗಳೆಂದಱಿವುದು.

ವೃತ್ತಿ.—ವರ್ಗದೆರಡನೆಯಕ್ಕರಂಗಳುಂ ನಾಲ್ಕನೆಯಕ್ಕರಂಗಳುಂ ಮಹಾಪ್ರಾಣಂಗಳೆನಿಸುಗುಂ; ಇವಂ ಸಂಖ್ಯೆಯೊಳಮನುಕರಣದೊಳಂ ಮಾರ್ಗವಿದರ್ ಪ್ರಯೋಗಿಸುವರ್.

ಪ್ರಯೋಗಂ. ಸಂಖ್ಯೆಗೆ—ಇಚ್ಛಾಸಿರಂ; ಎಣ್ಭಾಸಿರಂ; ನೂಚ್ಛಾಸಿರಂ; ಪದಿನೆಶ್ಛಾಸಿರಂ; ಲೋಹವಕ್ಕರೆಯ ಜಾತ್ಯಶ್ವಂಗಳಿಚ್ಛಾಸಿರಂ.

ಅನುಕರಣಕ್ಕೆ—ಖಣಿಲನೆ, ಖಟಿಲನೆ, ಥಮ್ಮನೆ, ಧುಮ್ಮನೆ, ಝುಲುಮ್ಮನೆ, ಪಿಲ್ಲನೆ, ಥಮ್ಮನೆ, ಥೊಪ್ಪನೆ, ಧಣಮ್ಮನೆ, ಫೊಟ್ಟನೆ, ಘಟಿಲನೆ, ಝುಲ್ಲನೆ, ದುಧುಮ್ಮನೆ, ಧಟಿಮ್ಮನೆ, ಭೋರನೆ ಎಂಬಿವಾದಿಯಾಗಱಿವುದು. See s. S. 23, No. 110.

## ಸೂತ್ರಂ.

Besides, there are some other words used by Canarese people in which the Aspirates appear.
The Nasals.

ಒಳವು ಮಹಾಪ್ರಾಣಂಗ
ಳ್ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋ।
ಜ್ಜ್ವಳವಾಗಿ ವರ್ಗದಂತ್ಯಂ
ಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ॥15॥

ಪದಚ್ಛೇದಂ.— ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋಜ್ಜ್ವಳಂ ಆಗಿ; ವರ್ಗದ ಅಂತ್ಯಂಗಳಂ, ಅಱಿ, ಅನುನಾಸಿಕಾಖ್ಯೆಯಂ ತಳೆದು ಇರ್ಕುಂ.

ಅನ್ವಯಂ.— ವಿಳಸತ್ಕರ್ಣಾಟಭಾಷೆಯೊಳ್ ಮಹಾಪ್ರಾಣಂಗಳ್ ಕೆಲವು ನಿಜೋಜ್ಜ್ವಳಂ ಆಗಿ ಒಳವು; ವರ್ಗದ ಅಂತ್ಯಂಗಳಂ, ಅಱಿ, ಅನುನಾಸಿಕಾಖ್ಯೆಯಂ ತಳೆದು ಇರ್ಕುಂ.

ಟೀಕು.— ವಿಳಸತ್ = ಒಪ್ಪಲ್ಪಟ್ಟ; ಕರ್ಣಾಟ = ಕನ್ನಡದ; ಭಾಷೆಯೊಳ್ = ಭಾಷೆಯಲ್ಲಿ; ಮಹಾಪ್ರಾಣಂಗಳ್ = ಮಹಾಪ್ರಾಣಂಗಳಾದ; ಕೆಲವು = ಕೆಲವು ಶಬ್ದಂಗಳ್; ನಿಜ = ನಿಜದಿಂದೆ; ಉಜ್ಜ್ವಳಂ = ಪ್ರಕಾಶಿಪುವು; ಆಗಿ = ಆಗಿ; ಒಳವು = ಉಂಟು; ವರ್ಗದ = ವರ್ಗಂಗಳ; ಅಂತ್ಯಂಗಳಂ = ಙ್, ಞ್, ಣ್, ನ್, ಮ್ ಎಂಬ ಅಂತ್ಯಾಕ್ಷರಂಗಳಂ; ಅಱಿ = ತಿಳಿ; ಅನುನಾಸಿಕಾಖ್ಯೆಯಂ = ಅನುನಾಸಿಕವೆಂಬ ಪೆಸರಂ; ತಳೆದು = ಧರಿಸಿ; ಇರ್ಕುಂ = ಇರ್ಪುವು.

ವಿಚಾರಂ.— ಅನುನಾಸಿಕವೆಂದೊಡೆ ಮುಖನಾಸಿಕದೊಡನೆ ಕೂಡಿ ಉಚ್ಚರಿಪುದು.

ವೃತ್ತಿ.—ಒಪ್ಪುವ ಕನ್ನಡದೊಳೆ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು; ಅವಾವುವೆಂದೊಡೆ—

ವರ್ಗದ್ವಿತೀಯಾಕ್ಷರಂಗಳ್ಗೆ— ವಕ್ಖಾಣಂ, ದೆಖ್ಖಾಣಂ (ದೆಖ್ಖಾಳಂ). ಪಖ್ಖಾಳಂ, ಅಖ್ಖಡಂ (ಅಖ್ಖಣ್ಡಂ), ಖೊಪ್ಪರಂ, ಖಾಣಂ, ಖಾರಿಗೆ. - ಛಲ್ಲಿ ಮಾಡಿದಂ (ಛಲ್ಲಂ ಮಾಡಿದಂ), ಛರ್ಪಿಸಿದಂ (ಛಪ್ಪಿಸಿದಂ), ಎಕ್ಕಛಾಯಂ.— ಠಾವು, ಠಾಣಂ, ಠಕ್ಕಿಸಿದಂ (ಠೆಕ್ಕಿಸಿದಂ), ಠಾಣೆಸಿತು.—ಥಟ್ಟು, ಥಾಪನೆ, ಸುತ್ಥಣಿ (ಸುತ್ಥಣಿಯಂ, ಸತ್ಥಣಿ), ಮತ್ಥವಟ್ಟಗೆ, ಕಥಾಯ (ಕತ್ಥಾಯಂ).— ಫಳೆಯಕಾಱಿಂ, ಫೆಳಾವುಗಂ, ಫೆಳೆ, ಅಫಳಿಯಂ (ಅಪ್ಫಳಿಯಂ).

ವರ್ಗಚತುರ್ಥಾಕ್ಷರಂಗಳ್ಗೆ—ಘುಱಿಯಂ, ಘಾಱಿಗೆ (ಘಾರಿಗೆ), ಘೋಱಿಗೆ, ಘೋಸಂ, ಘಾಸಿ, ಘಾಸರಂ.—ಝುಳಂ, ಝುಳಕಂ, ಝುಲ್ಲಱಿ (ಝುಲ್ಲರಿ), ಝುಱಿಸಿತು, ಝೂಳಿಸಿತು, ಝುಳಪಿಸಿತು, ಝುಲ್ಲಿ, ಝುಂಕೆ.—

ಢೊಂಕಣಿ, ಢೆಂಕಣ, ಆಢಾಳಂ, (ಢಾಳಂ), ವೇಢೆಯಂ, ಢೆಂಕೆ, ಢೊಕ್ಕರಂ.—ಧಬಿಂ, ಧಾಳಿ, ಧಾರಿ, (ಧವಳಂ) (ಧವಡಂ).—ಭಂಗಾರಂ, ಭಂಡಾರಂ, ಭರಿಕೈ, ಭಲ್ಲೆಯಂ, ಭಾವಂ.—ಕಂಭಕ್ಕಂ ಭಾಸೆಗಂ ವಿಕಲ್ಪಂ.

ವರ್ಗಂಗಳೈದನೆಯ ಅಕ್ಕರಂಗಳನುನಾಸಿಕಾಖ್ಯೆಯಂ ಪಡೆಗುಂ; ಙ್, ಞ್, ಣ್, ನ್, ಮ್ ಎಂಬಿವು; ಇವರ್ಕೆ ಪ್ರಯೋಗಂ—

ಬಿಙ್ಕಂಬೆತ್ತಿಸೆವಞ್ಚಿಯ
ಸಙ್ಕುಳಮನ್ ತೊಣ್ಡುಗೆಡೆವ ಶುಕಸಾರಿಕೆಯುಂ |
ಸೊಙ್ಕಿ ಬಲವನ್ದು ತೀಡುವ
ತೆಙ್ಕಣ ಗಾಳಿಯುಮದೇಮ್ ಮನಙ್ಗೊಳಿಸಿದುವೋ || ಕಂದಂ ||

## ಸೂತ್ರಂ.

ಯ, ವ, ಲ are Nasals and Non-nasals. The ಕ್ಷಳಂ again (see S. 5).

ಅನುನಾಸಿಕಮುಂ ಯವಲಮ
ನನುನಾಸಿಕಮುಂ ದಲೆಂಬರಾ ಸಂಸ್ಕೃತಶ |
ಬ್ದನಿಯುಕ್ತಲಕಾರದ ನೆಲೆ
ಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ || 16 ||

ಪದಚ್ಛೇದಂ.—ಅನುನಾಸಿಕಮುಂ ಯ ವ ಲಂ ಅನನುನಾಸಿಕಮುಂ ದಲ್ ಎಂಬರ್; ಆ ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳಂ ಎಂಬರ್.

ಅನ್ವಯಂ.—ಯವಲಂ ಅನುನಾಸಿಕಮುಂ ಅನನುನಾಸಿಕಮುಂ ದಲ್ ಎಂಬರ್; ಆ ಸಂಸ್ಕೃತಶಬ್ದನಿಯುಕ್ತಲಕಾರದ ನೆಲೆಗೆ ಸರಿಯಾಗಿ ನಿಂದು ಸಲ್ವುದಂ ಕ್ಷಳಂ ಎಂಬರ್.

ಟೀಕು.—ಯವಲಂ = ಯಕಾರ ವಕಾರ ಲಕಾರಂಗಳ್; ಅನುನಾಸಿಕಮುಂ = ಅನುನಾಸಿಕಂಗಳೆಂದುಂ; ಅನನುನಾಸಿಕಮುಂ = ನಿರನುನಾಸಿಕಂಗಳೆಂದುಂ; ದಲ್ = ನಿಶ್ಚಯವಾಗಿ; ಎಂಬರ್ = ಪೇಳ್ವರ್; ಆ ಸಂಸ್ಕೃತ = ಆ ಸಂಸ್ಕೃತದ; ಶಬ್ದ = ಶಬ್ದದಲ್ಲಿ; ನಿಯುಕ್ತ = ಕೂಡಲ್ಪಟ್ಟ; ಲಕಾರದ = ಲತ್ವದ; ನೆಲೆಗೆ = ಸ್ಥಾನಕ್ಕೆ; ಸರಿಯಾಗಿ = ಸಮಾನವಾಗಿ; ನಿಂದು = ನೆಲೆಗೊಂಡು; ಸಲ್ವುದಂ = ಸಲುವಳಿಯಾಗಿರ್ಪ ಳಕಾರಮಂ; ಕ್ಷಳಂ = ಕ್ಷಳನೆಂದು; ಎಂಬರ್ = ಪೇಳ್ವರ್:

ವೃತ್ತಿ.—ಯ ವ ಲಂಗಳನುನಾಸಿಕಂಗಳುಂ ನಿರನುನಾಸಿಕಂಗಳುಮಪ್ಪವು; ಸಂಸ್ಕೃತ ಶಬ್ದದಲ್ಲಿ ಯುಕ್ತಮಾದ ಲಕಾರದ ಸ್ಥಾನಕ್ಕೆ ನಿಂದು ಸರಿಯಾಗಿ ಸಲ್ವ ಳಕಾರಮಂ ಕ್ಷಳನೆಂಬರ್.

ಪ್ರಯೋಗಂ.—ಅನುನಾಸಿಕ ಯಕಾರಕ್ಕೆ—ಮೇಯಿಸಿದಂ, ನೋಯಿಸಿದಂ, ಮಯಣಂ, ನಯಣಂ, ಮಾಯಂ.

ಅನುನಾಸಿಕ ವಕಾರಕ್ಕೆ—ಸೇವಂ, ಸೋವೆ, ಸಾವೆ, ಜಾವಂ, ಮಾವಂತಂ, ಕೋವಣಂ, ಕಾವಣಂ, ಸೇವಗೆ.

ಅನುನಾಸಿಕ ಲಕಾರಕ್ಕೆ—ಕೊಲ್ಲಣಿಗೆ, ಅಲ್ಲಣಿಗೆ ಎಂದು ಮೇಳಂ; ಹಲ್ಲಣಂ, ಇಲ್ಲಣಂ.

ನಿರನುನಾಸಿಕ ಯಕಾರಕ್ಕೆ—ಬಯಕೆ, ಬಿಯದಂ, ಬಿಯುಳಂ, ದಯಕಾಱಂ, ದಾಯಿಗಂ, ವಾಯಂ, ಬಯಲ್.

ನಿರನುನಾಸಿಕ ವಕಾರಕ್ಕೆ—ಕವಳಂ, ಹವಳಂ. ತಿವಳಿ, ತವಕಂ (ಅವಕಂ).

ನಿರನುನಾಸಿಕ ಲಕಾರಕ್ಕೆ—ಹಾಲಿಗೆ, ಹಲಸಿಗಂ, ಹಲಗೆ, ನೆಲಕಲನೆಂದು ಲೋಭಿ.

ಲಕಾರಕ್ಕೆ ಕ್ಷಳಂ—ಜಲಂ = ಜಳಂ; ತಿಲಂ = ತಿಳಂ; ಫಲಂ = ಫಳಂ; ಬಲಂ = ಬಳಂ; ಖಲಂ = ಖಳಂ; ಕಮಲಂ = ಕಮಳಂ.

## ಸೂತ್ರಂ.

Besides ಂ and ಃ (Ss. 11; 12), there are two other Yôgavâhas viz. ೱ and ೲ[1], the first occurring before ಕ, the second before ಪ (*cf.* S 32).

ಸಮ ಸಂದಿರ್ದ ೱಕಮುಮ
ೲಪಮುವೊಂದಿದ ಬಿಂದುವುಂ ವಿಸರ್ಗಮುಮೆಂದ ।
ಕ್ಕುಮಿವೆಯ್ದು ಯೋಗವಾಹಂ
ಕ್ರಮದಿಂ ಕಪಯುಗಳಮಿವಱೊಳನುಬಂಧಂಗಳ್ ॥17॥

ಪದಚ್ಛೇದಂ.—ಸಮ ಸಂದು ಇರ್ದ ೱಕಮುಂ ೲಪಮುಂ ಬಂದಿದ ಬಿಂದುವುಂ ವಿಸರ್ಗಮುಂ ಎಂದು, ಅಕ್ಕುಂ ಇವು ಎಯ್ದು ಯೋಗವಾಹಂ; ಕ್ರಮದಿಂ ಕಪಯುಗಳಂ ಇವಱೊಳ್ ಅನುಬಂಧಂಗಳ್.

ಯಥಾನ್ವಯಂ. ಟೀಕು.—ಸಮಸಂದು = ಸಮಾನವಾಗಿ ಸಂದು; ಇರ್ದ = ಇರ್ದ; ೱಕಮುಂ = ೱಕೆಂಬ ಜಿಹ್ವಾಮೂಲೀಯಮುಂ; ೲಪಮುಂ = ೲಪೆಂಬ ಉಪಧ್ಮಾನೀಯಮುಂ; ಬಂದಿದ = ಕೂಡಿದ; ಬಿಂದುವುಂ = ಸೊನ್ನೆಯುಂ; ವಿಸರ್ಗಮುಂ = ವಿಸರ್ಜನೀಯ

1) These 2 Sibilants correspond to the Vajrâkṛiti and Gajakumbhâkṛiti in the Devanâgari. S. 32 includes ೱ and ೲ among the Saṁskṛita-Canarese Letters.

ಮುಂ; ಎಂದು = ಎಂದು; ಇವು = ಈ ನಾಲ್ಕಕ್ಷರಂಗಳ್; ಎಯ್ದೆ = ಚನ್ನಾಗಿ; ಯೋಗವಾಹಂ= ಯೋಗವಾಹಾಕ್ಷರಂಗಳ್; ಆಕ್ಕುಂ = ಅಪ್ಪುವು; ಕ್ರಮದಿಂ = ತಱುವಾಯಿಂದೆ: ಕಪಯುಗಳಂ= ಕಕಾರ ಪಕಾರಂಗಳೆಂಬೆರಡುಂ; ಇವಱೊಳ್ = ಈ ಜಿಹ್ವಾಮೂಲೀಯೋಪಧ್ಮಾನೀಯಂಗಳಲ್ಲಿ; ಅನುಬಂಧಂಗಳ್ = ಸಂಬಂಧಂಗಳಾಗಿರ್ಪುವು.

ವೃತ್ತಿ.—ಕಕಾರಮುಚ್ಚಾರಣಾರ್ಥಮಾಗುೞಿದ, ಪಸುಂಬೆಯ ಲಜ್ಞಣ ದಂತಿರ್ದ ವರ್ಣಂ ಜಿಹ್ವಾಮೂಲೀಯಮೆಂಬುದು; (ಕಕಾರಸಂಗಡದ) ಅದಱ ಸ್ವರೂಪಂ || ᳵಕ ||

ಪಕಾರಮುಚ್ಚಾರಣಾರ್ಥಮಾಗುೞಿದ ಕುಮಾರೀಸ್ತನಯುಗಳಾಕೃತಿ ಯ ವರ್ಣಮುಪಧ್ಮಾನೀಯಮುಂ: (ಪಕಾರಸಂಗಡದ) ಅದಱ ಸ್ವರೂಪಂ || ᳵಪ ||.

ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ; ಅದಱ ರೂಪಂ || ಂ || .

ಮೇಲೆಯುಂ ಕೆಳಗೆಯುಂ ಆ ತೆಱದಿನಿರೆ, ವಿಸರ್ಗನುದಱ ಸ್ವರೂಪಂ ||ಃ||. ಈ ನಾಲ್ಕು ಯೋಗವಾಹಂಗಳ್.

### 4. The Canarese Consonants ಱ, ೞ, ಳ (ಕುಳಂ).

**ಸೂತ್ರಂ.**

On the three Canarese consonants ಱ[1], ೞ[2], and ಳ. They are cognates of ರ, ಡ, ಡ is often changed into ೞ in Canarese words (*cf*. S. 232; see s. S. 66; S. 183), and sometimes in Tadbhavas (ನಾಡಿಕಾ = ನಾೞಿಗೆ).

ಅತಿಪೀಡನದಿಂದ ರೇಫಾ
ಶ್ರಿತಮಾದ ಱಕಾರಮುಂ ಸಮಂತು ಡಕಾರಾ |
ಶ್ರಿತಮಾದ ೞಟನುಮಂಗೀ[3]
ಕೃತಪದಲತ್ವಕೆ ಸನೇಮ ಸಲ್ಲದ ಕುಳನುಂ || 18 ||
ಇವು ವರ್ಣಾವೃತ್ತಿಗೆ ಸ
ಲ್ಲವು; ಸಂದುಂ ಪ್ರಾಸದೆಡೆಗೆ ಸಲ್ಲವು; ಯಮಕ |
ವ್ಯವಹೃತಿಗಾಗವು; ದೇಶೀ
ಯುವೆನಿಪುವಾ ಹ್ರಸ್ವಮೆನಿಸಿದಾ ಎ ಒ ಸಹಿತಂ || 19 ||

ಪದಚ್ಛೇದಂ.—ಅತಿಪೀಡನದಿಂ ರೇಫಾಶ್ರಿತಂ ಆದ ಱಕಾರಮುಂ, ಸಮಂತು ಡಕಾರಾಶ್ರಿತಂ ಆದ ೞಟನುಂ ಅಂಗೀಕೃತಪದಲತ್ವಕೆ ಸನೇಮ ಸಲ್ಲದ ಕುಳನುಂ—ಇವು ವರ್ಣಾವೃತ್ತಿಗೆ

1) = ಮಲಯಾಳಂ || ന ||. 2) = ಮಲಯಾಳಂ || ഴ ||. 3) ೞ ಎಂಬ ಈ ಅಕ್ಷರಂ ಉಚಿತೋಚ್ಚರಣಕ್ಕಾಗಿ ಟ ಎಂಬುವದಱ ಪಿಂದೆ ಇಟ್ಟಿರ್ಪುದು.

ಸಲ್ವುವು; ಸಂದುಂ ಪ್ರಾಸದ ಎಡೆಗೆ ಸಲ್ಲವು; ಯಮಕ ವ್ಯವಹೃತಿಗೆ ಅಗವು; ದೇಶೀಯಂ ಎನಿಪುವು, ಆ ಹ್ರಸ್ವಂ ಎನಿಸಿದ ಆ ಎ ಒ ಸಹಿತಂ.

ಯಥಾನ್ವಯಂ. ಟೀಕು.—ಅತಿಪೀಡನದಿಂ = ರೇಫೆ ಪುಟ್ಟುವ ಸ್ಥಾನವಂ ಬೆಟ್ಟಿತ್ತಾಗಿ ಉಚ್ಚರಿಪುದಱಿಂದೆ, ರೇಫಾಶ್ರಿತಂ = ರೇಫೆಯನಾಶ್ರೈಸಿ ಪುಟ್ಟಿಪುದು; ಆದ = ಆದ; ಱಕಾರಮುಂ = ಱಕಾರವಮುಂ; ಸಮಂತು = ಹಾಗೆ; ಡಕಾರಾಶ್ರಿತಂ = ಡಕಾರವನಾಶ್ರೈಸಿ ಪುಟ್ಟದುದು; ಆದ = ಆದ; ೞೞನುಂ = ೞೞನೆಂಬ ೞಕಾರವುಂ; ಅಂಗೀಕೃತಪದಲತ್ವಕೆ = ಅಂಗೀಕರಿಸಲ್ಪಟ್ಟ ಪದಂಗಳ ಲಕಾರಕ್ಕೆ; ಸನೇಮ = ಪ್ರಾಸು; ಸಲ್ಲದ = ಸಲುವಳಿಯಾಗದ; ಕುಳನುಂ = ಕುಳವೆಂಬ ಳಕಾರಮುಂ; ಇವು = ಈ ಅಕ್ಷರಂಗಳ್; ವರ್ಣಾವೃತ್ತಿಗೆ = ವರ್ಣಂಗಳಾವೃತ್ತಿಗೆ; ಸಲ್ವುವು = ಸಲುವಳಿಯಪ್ಪುವು; ಸಂದುಂ = ವರ್ಣಾವೃತ್ತಿಗೆ ಸಂದುಂ; ಪ್ರಾಸದ = ನಿಯಾಮದ (ನಿಯಮದ); ಎಡೆಗೆ = ಸ್ಥಾನಕ್ಕೆ; ಸಲ್ಲವು = ಸಲುವಳಿಯಾಗವು; ಯಮಕವ್ಯವಹೃತಿಗೆ = ಯಮಕವ್ಯವಹಾರಕ್ಕೆ; ಅಗವು = ಸಲುವಳಿಯಾಗವು; ಆ ಹ್ರಸ್ವಮೆನಿಸಿದ = ಆ ಸ್ವರಸಂಜ್ಞೆಯಲ್ಲಿ ಹ್ರಸ್ವಂಗಳೆನಿಸಿದ; ಆ ಎ ಒ ಸಹಿತಂ = ಆ ಎ ಒ ಎಂಬಿವು ಸಹಿತವಾಗಿ; ದೇಶೀಯಂ = ದೇಶೀಯಾಕ್ಷರಂಗಳ್; ಎನಿಪುವು = ಎನಿಸುವುವು.

ವೃತ್ತಿ.—ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱಕಾರಂ ಪುಟ್ಟುಗುಂ; ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ೞೞಂ ಪುಟ್ಟುಗುಂ; ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಕುಳಳಕಾರಂ ಪುಟ್ಟುಗುಂ. (ರೇಫೆ ಮೂರ್ಧನ್ಯಂ, ಱಕಾರಮುದಱೊಳ್ ಏಕಸ್ಥಾನಿ; ಡಕಾರಂ ಮೂರ್ಧನ್ಯಂ, ೞೞನದಱೊಳೇಕಸ್ಥಾನಿ; ಲಕಾರಂ ದಂತ್ಯಂ, ಕುಳನದಱೊಳೇಕಸ್ಥಾನಿ.) 'ಮೊರೆ, ಮೊಱೆ; ಮರೆ, ಮಱೆ;—ಕೋಡಿ, ಕೋೞಿ; ಕಡಲ್, ಕೞಿಲ್;—ಮೊಲೆ, ಮೊಳೆ; ಕಲೆ, ಕಳೆ;)—ಇಂತೇಕಸ್ಥಾನಿಗಳಾದ ಕಾರಣದಿಂದಿವು ವರ್ಣಾವೃತ್ತಿಗೆ ಸಲ್ವುವು; ನಿಯಾಮಕ್ಕಂ ಯಮಕ ವ್ಯವಹೃತಿಗಮಾಗವು. (ಱಕಾರಮುಂ ೞೞನುಂ ಕುಳನುಂ ಹ್ರಸ್ವಮಾದ ಎ ಒ ಎಂಬಿವುಂ ಸಂಸ್ಕೃತದೊಳಿಲ್ಲ) ಅವು ಕೂಡಿ ದೇಶೀಯಂಗಳಾಗಿ ಕನ್ನಡದೊಳೊಳವು.

ಪ್ರಯೋಗಂ.—ರೇಫೆ ಱಕಾರಂಗಳ ವರ್ಣಾವೃತ್ತಿಗೆ—

ಸುರಗಿಱಿದೊಱಗಿದ ಬಿರುದರ  
ಕರುಳಂ ಕೊಱೆಕೊಱೆದು ಮರುಳಿರುಳ್ತಿಂಬೆಡೆಯೊಳ್

|| ಕಂದಾರ್ಧಂ ||

ಡಕಾರ ಱಳಂಗಳ ವರ್ಣಾವೃತ್ತಿಗೆ—

ಖೞಿಲೆ ನುಡಿದೞಿಲೆ ಬಗ್ಗಿಸಿ
ಘೞಿಲನೆ ನಡೆಯೆಂದು ಜಡಿದು ಸಾರಥಿಯಂ || ಕಂದಭಾಗಂ ||

ಲಕಾರ ಕುಳಂಗಳ ವರ್ಣಾವೃತ್ತಿಗೆ—

ದೆಸೆಗಳನಳುರ್ದುಸುರಲ್ಕೆಳರ್ದು ವಿಃಳಿರ್ದುತಳರ್ದತ್ತಾಗಳ್.

ರೇಫೆ ಱಕಾರಂಗಳ ನಿಯಮಮಾಗದುದರ್ಕೆ—

ಧುರದೊಳ್ಪಱಿಮಱಿಯಾಡುವ
ತೆಱದಿಂದುಱದಿಱಿದನೆಂಬ ನಿಯಮಂ ದೂಷ್ಯಂ ||ಕಂದಾರ್ಥಂ||

ಡಕಾರ ಱಳಂಗಳ್ಗೆ ಪ್ರಾಸಮಾಗದುದರ್ಕೆ—

ಕೋಡದಿೞಿದಿಂದ್ರರಾದರ್
ನಾೞಿಗೆಯೊಳ್ ವೀರರೆಂಬ ನಿಯಮಂ ದೂಷ್ಯಂ || ಕಂದಾರ್ಥಂ||

ಲಕಾರ ಕುಳಂಗಳ ಪ್ರಾಸಮಾಗದುದರ್ಕಂ—

ನೆಲದೊಳ್ ಪಗೆ ಪುಗೆ ಫಣಿಯ ವೊ
ಲೊಳಪೊಕ್ಕಳೞಿಸಿದನೆಂಬ ನಿಯಮಂ ದೂಷ್ಯಂ || ಕಂಧಾರ್ಥಂ ||

ಯಮಕಂಗಳಾಗದುದರ್ಕೆ-

ಕರೆಯಂ ನೆರವಂ ವಂಶಂ
ಕಱೆಯಂ ಪೊತ್ತಪ್ಪುದೆಂದು ಸಂಗರಮುಖದೊಳ್ ||ಕಂದಾರ್ಥಂ||

ಇಲ್ಲಿ ಶಬ್ದಾವೃತ್ತಿ ಕೆಟ್ಟಪ್ಪುದಾಗಿಯುಂ, ಕಱೆಯಂ ಪೊತ್ತಪ್ಪುದೆಂಬುದಂ ಕರೆಯಂ ಪೊತ್ತಪ್ಪುದೆಂದೊಡೆ ಅರ್ಥಘಟನೆಯಿಲ್ಲಾಗಿಯುಂ, ಯಮಕಲಕ್ಷಣಮಿಲ್ಲ.

ಡಕಾರ ಱಳಂಗಳುಂ ಲಕಾರ ಕುಳಂಗಳುಂ ಈ ತೆಱದಿಂ ಯಮಕಕ್ಕೆ ಸಲ್ಲವು.

ಡಕಾರಕ್ಕಾದೇಶಮಾದ ಱಳಕ್ಕೆ ಪ್ರಯೋಗಂ—ಕಾಡುಕಿಚ್ಚು = ಕಾೞ್ಕಿಚ್ಚು; ಕೋಡುಕುಟ್ಟು = ಕೋೞ್ಕುಟ್ಟು; ನೀಡುಕರಿಸಿದಂ = ನೀೞ್ಕರಿಸಿದಂ; ಬೀಡುಕೊಂಡಂ = ಬೀೞ್ಕೊಂಡಂ; ನಾಡಕಡೆ = ನಾೞ್ಕಡೆ; ಸೆಡುಪಟ್ಟಂ = ಸೆೞ್ಪಟ್ಟಂ; ನೀರಡಿಕೆ = ನೀರೞ್ಕೆ; ಎರಡುಮೂಱು = ಎರೞ್ಮೂಱು; ಮಾಡುವಂ = ಮಾೞ್ಪಂ; ನೋಡುವಂ = ನೋೞ್ಪಂ; ಬೇಡುವಂ = ಬೇೞ್ಪಂ; ಬೆಗಡುವಂ = ಬೆಗೞ್ಪಂ; ಪೞ್ಕೆ ತೞ್ಕೈಸಿದನೆಂಬಲ್ಲಿ ತಡಕೈಯ್ಯಂ ಮಾಡಿದನೆಂಬರ್ಥಂ;

ನಾಡಿ=ನಾೞಿ; ನಾಡಿಕಾ=ನಾೞಿಗೆ, ನಾೞಿಗೆಯೆಂದು ಘೞಿಗೆ; ಎಸಡಿಗೆ=ಎಸೞ್ಗೆ, ಪೂವಿನೆಸಳೊಳ್ ಕುಳಂ; ಕಿವುಡು ಕೇಳ್ವನೆಂಬಲ್ಲಿ ಕಿವುೞ್ಗೇಳ್ವಂ.

### ಸೂತ್ರಂ.

Saṁskṛita ಡ changed also into ಳ in some Tadbhava-nouns (*cf.* S. 284).

ದಾಡಿಮಮಾ ಕೂಷ್ಮಾಂಡಂ
ಗೌಡಂ ಗುಡಮಡಸಿ ಪೊಡೆವ ಝುಗಡೆ ವಿಡಂಗಂ ।
ಕೂಡೆ ಕುಳನೇಡಕಮುಮಱಿ
ರೂಢಿಯ ಕುಳನೆಂದು ೞೞಿದಪಭ್ರಂಶತೆಯೊಳ್ ॥20॥

ಪದಚ್ಛೇದಂ.—ದಾಡಿಮಂ, ಆ ಕೂಷ್ಮಾಂಡಂ, ಗೌಡಂ, ಗುಡಂ, ಅಡಸಿ ಪೊಡೆವ ಝುಗಡೆ, ವಿಡಂಗಂ ಕೂಡೆ ಕುಳಂ; ಏಡಕಮುಂ, ಅಱಿ, ರೂಢಿಯ ಕುಳಂ ಎಂದು, ೞೞಿದ ಅಪಭ್ರಂಶತೆಯೊಳ್!

ಅನ್ವಯಂ.—ೞೞಿದ ಅಪಭ್ರಂಶತೆಯೊಳ್ ದಾಡಿಮಂ, ಆ ಕೂಷ್ಮಾಂಡಂ, ಗೌಡಂ, ಗುಡಂ, ಅಡಸಿ, ಪೊಡೆವ ಝುಗಡೆ, ವಿಡಂಗಂ ಕೂಡೆ ಕುಳಂ; ಏಡಕಮುಂ ರೂಢಿಯ ಕುಳಂ ಎಂದು, ಅಱಿ!

ಟೀಕು.—ೞೞಿದ = ೞೞಿವೆಂಬ ೞಕಾರದ; ಅಪಭ್ರಂಶತೆಯೊಳ್ = ತದ್ಭವದಲ್ಲಿ; ದಾಡಿಮಂ = ದಾಡಿಮವೆಂಬ ಶಬ್ದಂ; ಆ ಕೂಷ್ಮಾಂಡಂ = ಆ ಕೂಷ್ಮಾಂಡಮೆಂಬ ಶಬ್ದಂ; ಗೌಡಂ = ಗೌಡವೆಂಬ ಶಬ್ದಂ; ಗುಡಂ = ಗುಡಮೆಂಬ ಶಬ್ದಂ; ಅಡಸಿ = ಸಂಗಡಿಸಿ; ಪೊಡೆವ = ಹೊಡೆವ; ಝುಗಡೆ = ಝುಗಡೆಯೆಂಬ ಶಬ್ದಂ; ವಿಡಂಗಂ = ವಿಡಂಗವೆಂಬ ಶಬ್ದಂ; ಕೂಡೆ = ಒಡನೆ; ಕುಳಂ = ಕುಳವೆಂಬ ಳಕಾರಂ; ಏಡಕಮುಂ = ಏಡಕಮೆಂಬ ಶಬ್ದಮುಂ; ರೂಢಿಯ = ಪ್ರಸಿದ್ಧಿಯ; ಕುಳನೆಂದು = ಕುಳಮೆಂಬ ಳಕಾರಮೆಂದು; ಅಱಿ = ತಿಳಿ!

ವೃತ್ತಿ.—ದಾಳಿಂಬಂ, ಕುಂಬಳಂ, ಗೌಳಂ, ಗುಳಂ, ಝುಗಳೆ, ವಿಳಂಗಂ ಇವು ಕೂಡೆ ಡಕಾರಕ್ಕೆ ಪುಟ್ಟಿ ೞೞಿದಪಭ್ರಂಶತೆಯುಂ ಪಡೆದುಂ ರೂಢಿಯ ಕುಳಂಗಳ್; ಏಳಗವೆಂಬುದು ಏಡಕಕ್ಕೆ ಪುಟ್ಟಿಯುಂ ಕುಳಂ.

### ಸೂತ್ರಂ.

Saṁskṛita ಟ, ತ, ಶ, ರ, ಳ (ಕ್ಷಳಂ) changed into ೞ (*cf.* Ss. 257; 280) in Tadbhavas.

ಕೃತಿಮಾರ್ಗದೊಳುಂಟು ಟಕಾ
ರತಕಾರಶಕಾರರೇಫದೆಡೆಗಂ ಬಹುಳ ।
ಸ್ಥಿತಿಯಿಂ ಕ್ಷಳಕಮಪಭ್ರಂ
ಶತೆಯೊಳ್ಸುಕವೀಂದ್ರರಿಂದೆ ೞೞಿದಾದೇಶಂ ॥ 21 ॥

ಪದಚ್ಛೇದಂ.— ಕೃತಿಮಾರ್ಗದೊಳ್ ಉಂಟು ಟಕಾರತಕಾರಠಕಾರರೇಫದ ಎಡೆಗಂ ಬಹುಳ ಸ್ಥಿತಿಯಿಂ ಕ್ಷಳಕಂ ಅಪಭ್ರಂಶತೆಯೊಳ್ ಸುಕವೀಂದ್ರರಿಂದೆ ೞೞದ ಆದೇಶಂ.

ಅನ್ವಯಂ.—ಕೃತಿಮಾರ್ಗದೊಳ್ ಸುಕವೀಂದ್ರರಿಂದೆ ಅಪಭ್ರಂಶತೆಯೊಳ್ ಟಕಾರತಕಾರಠಕಾರರೇಫದ ಎಡೆಗಂ ಕ್ಷಳಕಂ ಬಹುಳ ಸ್ಥಿತಿಯಿಂ ೞೞದ ಆದೇಶಂ ಉಂಟು.

ಟೀಕು.— ಕೃತಿಮಾರ್ಗದೊಳ್ = ಕಾವ್ಯಮಾರ್ಗದಲ್ಲಿ; ಸುಕವೀಂದ್ರರಿಂದೆ = ಸತ್ಕವೀಂದ್ರರಿಂದೆ; ಅಪಭ್ರಂಶತೆಯೊಳ್ = ಅಪಭ್ರಂಶದಲ್ಲಿ; ಟಕಾರತಕಾರಠಕಾರರೇಫದ = ಟಕಾರದ ತಕಾರದ ಠಕಾರದ ರೇಫೆಯ; ಎಡೆಗಂ = ಸ್ಥಾನಕ್ಕೆಯು; ಕ್ಷಳಕಂ = ಕ್ಷಳಳಕಾರಕ್ಕೆಯುಂ; ಬಹುಳ ಸ್ಥಿತಿಯಿಂ = ಬಹುಳಸ್ಥಿತಿಯಿಂದೆ; ೞೞದ = ೞೞಮೆಂಬ ೞಕಾರದ; ಆದೇಶಂ = ಆದೇಶಂ; ಉಂಟು = ಉಂಟಾಗಿರ್ಪುದು.

ವಿಚಾರಂ.— ಆದೇಶಮೆಂದೊಡೆ ಮೊದಲಿರ್ದುದಂ ತೊಲಗಿಸಿ ಬರ್ಪುದೆಂದಱಿವುದು.

ವೃತ್ತಿ.— ಕಾವ್ಯಮಾರ್ಗದೊಳ್ ಟಕಾರ ತಕಾರ ಠಕಾರ ರೇಫ ಕ್ಷಳಂಗಳ್ಗೆ ೞೞಾದೇಶಮ್ ಅಪಭ್ರಂಶತೆಯೊಳುಂಟು.

ಪ್ರಯೋಗಂ. ಟಕಾರಕ್ಕೆ—ಘಟಿಕೆ=ಗೞಿಗೆ; ಘೋಟಿಕೆ=ಗೋೞಿಗೆ; ಧಾಟಿ=ದಾೞಿ; ಲಾಟಂ=ಲಾೞಿಂ; ಲಾಟಭಾಷಿಕಂ=ಲಾೞಿಬಾಸೆಗಂ; ಘೋಟಾರೂಢಂ=ಗೋೞಿಯಾಯಿಲಂ; ಕುಕ್ಕುಟಂ=ಕೋೞಿ.

ತಕಾರಕ್ಕೆ—ಪ್ರತಿಹಸ್ತಂ=ಪೞಿಹತ್ತ; ಪ್ರತಿಪಾದುಕಂ=ಪೞಿವಾವುಗೆ.

ಠಕಾರಕ್ಕೆ—ಮಠಿಕೆ=ಮೞಿಗೆ; ಪೀಠಿಕೆ=ಪೀೞಿಗೆ.

ರೇಫಕ್ಕೆ—ಕ್ರೂರಂ=ಕೂೞ್; ಝುಲ್ಲರಿ=ಝುಲ್ಲೞಿ.

ಕ್ಷಳಕ್ಕೆ— ತಾಳಂ=ತಾೞ್; ಪುಳಿನಂ=ಪುೞಿಲ್; ಕಳಮಂ=ಕೞವೆ; ಅರ್ಗಳಂ=ಅಗುೞಿ; ಮನ್ನಾಳಿ=ಮನ್ನೞಿ; ಅಳಿಕಾಬದ್ಧಂ=ಅೞಿಗೆವದ್ದಂ.

## ಸೂತ್ರಂ.

Samskṛit ಟ changed also into ಳ (ಕುಳಂ) in some Tadbhavas (*cf.* S. 272).

ಸ್ಫಟಿಕಂ ಪೇಟಿಕೆ ವೀಟಿಕೆ
ಘುಟಿಕೆ ವರಾಟಂ ಪೊದಟ್ಟಿ ರಘಟಿ ಕುಳಂ ತಾಂ |
ಸ್ಫುಟಸಹಿತಂ; ಸ್ಫೋಟಕಲಂ
ಪಟಶಬ್ದಯುಗಂ ೞಿೞಿಕ್ಕೆ ನೆಱೆ ಸಂದೇಹಂ || 22 ||

ಪದಚ್ಛೇದಂ.—ಸ್ಫಟಿಕಂ, ಪೇಟಿಕೆ, ವೀಟಿಕೆ, ಘುಟಿಕೆ, ವರಾಟಂ, ಪೊದಟ್ಟಿ ರಘಟಿ ಕುಳಂ ತಾಂ ಸ್ಫುಟಸಹಿತಂ; ಸ್ಫೋಟಕಲಂಪಟಶಬ್ದಯುಗಂ ೞಿೞಿಕ್ಕೆ ನೆಱೆ ಸಂದೇಹಂ.

ಅನ್ವಯಂ.—ಸ್ಫಟಿಕಂ, ಪೇಟಿಕೆ, ವೀಟಿಕೆ, ಘುಟಿಕೆ, ವರಾಟಂ, ಪೊದಟ್ಟಿ ರಘಟಿ ಸ್ಫುಟಸಹಿತಂ ತಾಂ ಕುಳಂ; ಸ್ಫೋಟಕಲಂಪಟಶಬ್ದಯುಗಂ ೞಿೞಿಕ್ಕೆ ನೆಱೆ ಸಂದೇಹಂ.

ಟೀಕು.—ಸ್ಫಟಿಕಂ=ಸ್ಫಟಿಕವೆಂಬ ಶಬ್ದಂ; ಪೇಟಿಕೆ=ಪೇಟಿಕೆಯೆಂಬ ಶಬ್ದಂ; ವೀಟಿಕೆ=ವೀಟಿಕೆಯೆಂಬ ಶಬ್ದಂ; ಘುಟಿಕೆ=ಘುಟಿಕೆಯೆಂಬ ಶಬ್ದಂ; ವರಾಟಂ=ವರಾಟವೆಂಬ ಶಬ್ದಂ; ಪೊದಟ್ಟಿ=ಪ್ರಸಿದ್ಧವಾದ; ರಘಟಿ=ರಘಟಿಯೆಂಬ ಶಬ್ದಂ; ಸ್ಫುಟಸಹಿತಂ=ಸ್ಫುಟಮೆಂಬ ಶಬ್ದಸಹಿತಮಾಗಿ; ತಾಂ=ಈ ಶಬ್ದಂಗಳ್ ತಾಂ; ಕುಳಂ=ಳಕಾರಮಪ್ಪುವು; ಸ್ಫೋಟಕಲಂಪಟಶಬ್ದಯುಗಂ=ಸ್ಫೋಟಕವೆಂಬ ಲಂಪಟವೆಂಬ ಶಬ್ದಗಳೆರಡುಂ; ೞಿೞಿಕ್ಕೆ=ೞಿವೆಂಬ ೞಕಾರಕ್ಕೆ; ನೆಱೆ=ಚನ್ನಾಗಿ; ಸಂದೇಹಂ=ಸಂದೇಹಮಪ್ಪುವು, ಕುಳವೇ ಅಪ್ಪುದೆಂಬುದರ್ಥಂ.

ವೃತ್ತಿ.—ಪಳಿಕಂ, ಪೇಳಿಗೆ, ವೀಳಿಗೆ, ಗುಳಿಗೆ, ವರಾಳಂ, ರಗಳೆ, ಪುಳಂ ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟಿಯುಂ ಕುಳಂಗಳಾದುವು; (ಸ್ಫೋಟಕಶಬ್ದಕ್ಕಾದ ಹೋಳಿಗೆಯೆಂಬುದುಂ, ಲಂಪಟಶಬ್ದಕ್ಕಾದ ಲಂಬಳಮೆಂಬುದುಂ ೞಿೞಿಕ್ಕೆ ಸಂದೇಹಂ, ಕುಳಂಗಳೆಯುಪ್ಪವು.)

## ಸೂತ್ರಂ.

A list of words with the letter ೞ.

ಏಕದ್ವಿತ್ರಿಚತುಃಪಂ
ಚಾಕಲಿತಾರ್ಥಂಗಳಾಗಿ ೞಿೞಿನೊಳವು ನಿಸ |
ರ್ಗಾಕೃತಿಯಿಂದವನಾದಿಮ
ಹಾಕವಿಕೃತಿದೃಷ್ಟಮಂ ನಿರಾಕುಳಮುಸಿರ್ವೆಂ ||23||

ಪದಚ್ಛೇದಂ.— ಏಕದ್ವಿತ್ರಿಚತುಃಪಂಚಾಕಲಿತಾರ್ಥಂಗಳ್ ಆಗಿ ೞಱಿಂ ಒಳವು; ನಿಸರ್ಗಾಕೃತಿಯಿಂದೆ ಅವಂ ಆದಿಮಹಾಕವಿಕೃತಿದೃಷ್ಟಮುಂ ನಿರಾಕುಳಂ ಉಸಿರ್ವೆಂ.

ಯಥಾನ್ವಯಂ. ಟೀಕು.—ಏಕ = ಒಂದಱಲ್ಲಿ; ದ್ವಿ = ಎರಡಱಲ್ಲಿ; ತ್ರಿ = ಮೂಱಱಲ್ಲಿ; ಚತುಃ = ನಾಲ್ಕಱಲ್ಲಿ; ಪಂಚ = ಐದಱಲ್ಲಿ; ಆಕಲಿತ = ಕೂಡಲ್ಪಟ್ಟ; ಅರ್ಥಂಗಳ್ = ಅರ್ಥವುಳ್ಳುವು; ಆಗಿ = ಆಗಿ; ೞಱಿಂ = ೞಱಿಶಬ್ದಂಗಳ್; ಒಳವು = ಉಂಟು; ನಿಸರ್ಗಾಕೃತಿಯಿಂದೆ = ನಿಶ್ಚಯಾಕಾರದಿಂದೆ; ಅವಂ = ಆ ೞಱಿಶಬ್ದಂಗಳುಂ; ಆದಿ = ಪೂರ್ವದ; ಮಹಾಕವಿ = ಮಹಾಕವಿಗಳ; ಕೃತಿದೃಷ್ಟಮುಂ = ಕಾವ್ಯದೃಷ್ಟಮುಂ; ನಿರಾಕುಳಂ = ವ್ಯಾಕುಳವಿಲ್ಲದ ಹಾಗೆ; ಉಸಿರ್ವೆಂ = ಪೇೞ್ವೆಂ.

ವೃತ್ತಿ.—ಒಂದರ್ಥಮುಂ ಎರಡರ್ಥಮುಂ ಮೂಱರ್ಥಮುಂ ನಾಲ್ಕರ್ಥಮುಂ ಐದರ್ಥಮುಂ ಪೇೞ್ವ ಸಹಜ ೞಱಿಂಗಳಂ ಪ್ರಮಾಣಪುರುಷರ ಕಾವ್ಯಮಾರ್ಗದಿಂ ಕಂಡು, ನೆಱೆ ಪೇೞ್ದಪೆಂ. ಅವಾವೆಂದೊಡೆ—

ಒಂದರ್ಥಕ್ಕೆ—

1. ಉೞುಗೆಂದು, ಬೇಟಂ.
2. ಉೞುಗಿದನೆಂದು, ಒಲ್ದಂ.
3. ಈೞ್ದನೆಂದು, ಸೆಳೆದಂ.
4. ಆೞ್ದನೆಂದು, ಮುೞುಗಿದಂ.
5. ಬೞಲ್ದನೆಂದು, ಜಗುೞ್ದಂ.
6. ಜಗುೞ್ದನೆಂದು, ಜಾಱಿದಂ.
7. ಅಗುೞ್ದನೆಂದು, ನೀರ್ನೆಲೆದಪ್ಪಿದಂ.
8. ತೆಗೞ್ದನೆಂದು ಪೞಿದಂ.
9. ಅಸಕೞಿದನೆಂದು, ಕೈ ಮಾಱಿದಂ.
10. ತೞ್ಗಿದನೆಂದು, ಕುಸಿದಂ.
11. ಕಿೞ್ಗಿದನೆಂದು, ಗುಜ್ಜಂ.
12. ದಂಡುೞಿಗನೆಂದು, ದಂಡದೊಳ್ ಪಡೆದವಂ.
13. ಆೞ್ವಾೞಿಗಮೆಂದು, ಒಂದು ಸಾಮಾನ್ಯ ಮಾಲಾಬಂಧಂ.
14. ಅವಗೞಿಯಮೆಂದು, ಉರವಣೆಕಾರ್ತನಂ.
15. ಒೞಿಯನೆಂದು, ವಿಧೇಯಂ.
16. ಹಾೞ್ಮನೆಹಾೞಿನೆಂದು, ತುಡುಗುಣಿನಾಯ್.
17. ಪೊಂಪುೞಿಯೆಂದು, ಪೆರ್ಚುಗೆ.
18. ಪುಚ್ಚೞಿಯೆಂದು, ಕೇಡು.
19. ಕಚ್ಚೞಿಯೆಂದು, ಬಿರುದಿನ ಬಳೆ.
20. ಚಕ್ಕೞಿಯೆಂದು, ಒತ್ತಿ ಚಪ್ಪಟೆಯಾದುದು.
21. ಮಣ್ಮೞಿಯೆಂದು, ರೂಪೞಿದ ಸಾವು.
22. ದಟ್ಟೞಿಯೆಂದು, ಸುಕಳೆ.

23. ತೊೞ್ತುೞಿಯೆಂದು, ಸೊಪ್ಪಾದುದು.

24. ಪಾೞಿಯೆಂದು, ಕ್ರಮಂ.

25. ಕೂೞನೆಂದು, ಎಗ್ಗಂ.

26. ಘೞಿಯುಮೆಂದು, ಸಮಕಟ್ಟು.

27. ಕೆೞವನೆಂದು, ಮುದುಕಂ.

28. ಪೞಗವೆಂದು, ಒಣಗಿದೆಲೆ.

29. ಕೞಕುೞವೆಂದು, ಸ್ಥಾನವ್ಯಾಕುಲತೆ.

30. ಉೞಿಗನೆಂದು, ಶಕುನದ ಪಕ್ಕಿ.

31. ದೞಿಮುೞವೆಂದು, ಬಲ್ಸೂೞ್.

32. ತಲ್ಲೞವೆಂದು, ಭಯಂ.

33. ಗುೞವೆಂದು, ಆನೆ ಕುದುರೆಗಳ ಪಕ್ಕರಕೆ.

34. ಗೞಪನೆಂದು, ಸೊರಹಂ.

35. ಬೞಿಯಂ, ಬೞಿಕಂ, ಬೞಿಕ್ಕಂ, ಬೞಿಕೆ, ಬೞಿಕ್ಕೆ ಎಂಬಿವು ಪಶ್ಚಾದರ್ಥಂಗಳ್.

36. ಅೞ್ತಿಯೆಂದು, ಪ್ರೀತಿ; ಅದನ್ನರ್ತಿಯೆಂದು ಪೇೞ್ವುದಬದ್ಧಂ.

37. ಅೞ್ಕರ್ತನೆಂದು, ಪ್ರೀತಿವಟ್ಟಂ.

38. ಜರ್ಕೊೞವಿಯೆಂದು, ಜಲಯಂತ್ರಂ.

39. ತೊೞಲ್ವುದಾಗಿ. ತೊೞಕಲ್.

40. ಉೞಿಕು, ಉೞಿವು, ಕೞಿವು ಎಂಬಿವು ಭಾವವಾಚಿಗಳ್.

41. ಮೊೞಗು ಎಂದು, ವಾದ್ಯಂ.

42. ಒೞ್ಕೆಂದು, ನದಿಪ್ರವಾಹಂ.

43. ಪೆೞಕೆಂದು, ಜಗಳಂ.

44. ಪೊೞಕೆಂದು, ಸಾಮಾನ್ಯಾಕೃತಿ.

45. ಪೞಪೆಂದು, ನರೆಗಿಕ್ಕುವ ಕರ್ಪುರ.

46. ಪೞುವೆಂದು, ಅಡವಿ.

47. ಪೞ್ಕೆ ತೞ್ಕೈಸಿದಂ ತಡಕಯ್ಯಂ ಮಾಡಿದನೆಂಬುದರ್ಥಂ.

48. ಏೞೆಂದು, ಸಂಖ್ಯಾವಾಚಿ.

49. ಮೞಲ್ದುದು, ಮೞಮೞಿಸಿತ್ತು ಎಂಬೆರಡುಂ ಕಣ್ಕದಡಿದ ಭಾವಂ.

50. ಪುೞ್ಗಿಯೆಂದು, ಉರ್ದು ತೊವರಿ ಪೆಸೞು ಮೊದಲಾದುವನಿಕ್ಕಿ ಅಟ್ಟ ಕೂೞ್.

51. ಹೞ್ಗಿಯೆಂದು, ದೂವೆಯೊಳ್ ತೞಲಂ ಪೂೞ್ದ ಕ್ರಿಯೆ.

52. ತೞಲೆಂದು, ಮುತ್ತ ಕಾಯ್.

53. ತುೞಿಕಲೆಂದು, ಸೊಪ್ಪಾದುದು

54. ಅದವೞಲೆಂದು, ಮುೞುಕಂ.

55. ಸೂೞೆಂದು, ಬಾರಿ.

56. ಸೂೞಾಯ್ತನೆಂದು, ಸೂೞ್ಗರೆವಂ.

57. ಪಾೞೆಂದು, ಶೂನ್ಯಸ್ಥಾನಂ.

58. ಚಾೞೆಂದು, ರಾಹು.

59. ಪೋೞೆಂದು, ಸೀೞ್ದ ಭಾಗಂ.

60. ಬೋೞೆನ್ದು, ಚಾಪಂ.

61. ಈ ಸೂೞೆಂದು, ವರ್ತಮಾನ ವರುಷಂ.

62. ತುಪ್ಪುೞೆಂದು, ಪಕ್ಕಿಯ ರೋಮಂ.

63. ತಿಪ್ಪುೞು ಎಂದು, ಪಕ್ಕಿಯ ಗಱಿ.

64. ಬೆೞಲೆಂದು, ಒಂದು ಮರಂ.

65. ಪೋೞಲೆಂದು, ಮರದ ಪೊಟ್ಟೆ.

66. ಬಿೞಲೆಂದು, ಮರದ ಜೆಡೆ.

67. ಬಾಸುೞೆಂದು, ಪೊಯ್ದ ಬೞಿ.

68. ಉಂಬೞಿಯೆಂದು, ಕೊಡಗೆ.

69. ಜಾೞಿಗೆಯೆಂದು, ಉಡುಗೆ.

70. ಪೊೞ್ತಡೆಯೆಂದು, ಉದಯಕಾಲಂ.

71. ಕೞಲೆಯೆಂದು, ಮುಳ್ವಿರಸಿದ ಗುಜುೞು ಗೊಂಬು.

72. ಬಾೞ್ತೆಯೆಂದು, ಪ್ರಯೋಜನಂ,

73. ಬೋೞಿಯೆಂದು, ಒಂದಂಬಿನ ಭೇದಂ.

74. ಬೞ್ಕೆಯೆಂದು, ಒಂದು ಮರಂ.

75. ಅೞ್ಕಮೆಯೆಂದು, ಅೞವೆ.

76. ಉೞ್ಕೆಯೆಂದು, ಉಳ್ವಿ ಥಾವಂ.

77. ಎೞವಿದನೆಂದು, ನೀವಿದಂ.

78. ಮೞೆಯೆಂದು, ವೃಷ್ಟಿ.

79. ಕೞೆಲೆಯೆಂದು, ಬಿದಿರ ಕುಡಿ.

80. ಪೊೞಲೆಂದು, ಪುರಂ.

81. ಅೞ್ಕೆಯೆಂದು, ರೋದನಂ.

82. ಸುೞಿಯೆಂದು, ಜಲಾವರ್ತಂ.

83. ಕುೞಿಯೆಂದು, ಅಗುೞ್ದೆಡೆ.

84. ಬೆಂಬೞಿಯೆಂದು, ಪಿಂದೆ ಬರ್ಪುದು.

85. ಬೞಿವೞಿಯೆಂದು, ಕೊಟ್ಟ ವಸ್ತುವಿನ ಬೞಿಯೊಳ್ ಕುಡುವುದು.

86. ಪೞ್ತಿಯೆಂದು, ಕಾರ್ಪಾಸಂ.

87. ಅಗೞ್ತೆಯೆಂದು, ಖನನಂ.

88. ಪೊಗೞ್ತೆಯೆಂದು, ಕೀರ್ತನಂ.

89. ಕೞ್ತನೆಂದು, ನಿರ್ಮೂಲಿಸಿದಂ.

90. ಪೞಯಿಗೆಯೆಂದು, ಕೇತನಂ.

91. ಮೞ್ತಿಯೆಂದು, ಒಂದು ಮರಂ.

92. ಗೞಸೆಂದು, ಗೆಡ್ಡೆ.

93. ಕುೞಮೆಂದು, ನೇಗಿಲ್ಗಾಯ್ದ ಕರ್ಬುನಂ.

94. ಪುೞುವೆಂದು, ಕೀಟಂ.

95. ಪೞದೆಂದು, ಜೀರ್ಣಂ.

96. ಮುೞ್ತಗಮೆಂದು, ಒಂದು ಮರಂ.

97. ಕೞ್ತೆಯೆಂದು, ಗರ್ದಭಂ.

98. ಕೞ್ತಲೆಯೆಂದು, ಮರ್ಬು.

99. ಕಿಮುೞ್ಚಿದನೆಂದು, ಚಿಕ್ಕಣವಾಗಿ ಮಾಡಿದಂ.

100. ಕಿಮುೞ್ದುೞಿದನೆಂದು, ಸಣ್ಣಮಾಗಿ ತುೞಿದಂ.

101. ಪೇೞ್ದನೆಂದು, ನಿರೂಪಿಸಿದಂ.

102. ಬಾೞಿಕಮೆಂದು, ಸೀೞ್ದೊಣಗಿ ಬಾೞ್ದ ಶಾಖಂ.

103. ಮೊೞಕಾಲೆಂದು, ಒಳ್ದೊಡೆಯ ಸಂದು.

104. ಕೊಂಕುೞೆಂದು, ಕಕ್ಷಮೂಲಂ.

105. ಮೊೞನೆಂದು, ಅರತ್ನಿ.

106. ಪೆೞವನೆಂದು, ಕಾಲಿಲ್ಲದವಂ.

107. ಪೊಕ್ಕುೞೆಂದು, ನಾಭಿ.

108. a. ತೇೞೆಂದು, ವೃಶ್ಚಿಕಂ.

108. b. ನೆಗೞೆಂದು, ನಕ್ರಂ.

109. ಬೋೞತರಮೆಂದು, ಮುಂಡಿ.

110. ಖೞಿಲೆನೆ (or ಖೞಿಲನೆ), ಛೞಿಲೆನೆ; ಫೞಿಲೆನೆ, ಫೞಿಲೆನ್ನೆ, ಘುೞುಮೆನೆ, ಘುೞುಮ್ಮೆನೆ, ಧೞಮ್ಮೆನೆ—ಇವು ಮೊದಲಾದ ಮಹಾಪ್ರಾಣಾನುಕರಣಂಗಳ್ ನಿತ್ಯ ೞಂಗಳ್.

111. ಪೞಪೞನೆ, ಪೞ್ಪೞನೆಯೆಂದು, ವಿರಳಾರ್ಥಂ.

112. ಗೞಗೞನೆಯೆಂದು, ಬೇಗಂ.

113. ಕೞ್ಕನೆಯೆಂದು, ಆಕಸ್ಮಿಕಂ.

114. ನೆೞಿಲೆನೆ, ನೆೞ್ಕನೆಯೆ ಮುೞಿದುದು—ಇವುಂ ಅನುಕರಣಂಗಳ್.

115. ತೞತೞಗುದಿ, ತೞ್ತೞಗುದಿಯೆಂಬಿವು ಕಾಸುವ ರಸದ್ರವ್ಯಾನುಕರಣಂಗಳ್.

116. ತೞತೞನೆ ನೇಸಮೂರ್ಡಿದುದು.

117. ಕೞಕೞಿಸಿದನರ್ಕಂ.

118. ಗೋೞಿಟ್ಟಂ, ಗೀೞಿಟ್ಟಂ, ಗೞಗೞನೆ.

119. ಗುೞುಗುೞು ಗೞಗೞಿಯೆನುತಂ ಪರಿವ ಪರಿವೊನಲ್ ಸೊಗಯಿಸುಗುಂ—ಇವು ಮೊದಲಾದುವಲ್ಪಪ್ರಾಣಾನುಕರಣಂಗಳ್; ೞನುಂ ಕುಳನುಮಪ್ಪುವು.

120 ಹೞಿದುದೆಂದು, ರಸಮಂ ಹಿಂಡುವಲ್ಲಿ ೞಂ; ಬಿರಿದುದೆಂಬಲ್ಲಿ ಕುಳಂ.

121. ತೞಿಯೆಂದು, ಸ್ಥೂಲದಾರುವಿನೊಳ್ ೞಂ; ಸತ್ತ್ರಾರ್ಥದೊಳ್ ಕುಳಂ. ತಳಿಯ ಕೂೞಿನಿರೊಳ್ ಪಣ್ತಾರವೆ.

122. ತೞಿಯೆಂದು, ಆತಪತ್ರದೊಳ್ ೞಂ; ತಳೆಯೆಂಬ ಕ್ರಿಯೆಯೊಳಂ ಪಶುವಿನ ತಳೆಯೊಳಂ ಕುಳಂ.

123. ಕೊೞಲೆಂದು, ವೇಣುವಾದ್ಯದೊಳ್ ೞಂ; ಕೊಳಲೆಂಬ ಕ್ರಿಯೆಯೊಳ್ ಕುಳಂ.

124. ಕೇೞಿಯೆಂದು, ಪಂಕ್ತಿಯೊಳ್ ೞಂ; ಕ್ರೀಡೆಯೊಳ್ ಕ್ಷಳಂ.

125. ಬಾೞೆಂದು, ಜೀವನಾರ್ಥದೊಳ್ ೞಂ; ನಾವಿದವಾಳ್, ಕೂರ್ವಾಳ್, ಹರಗುವಾಳ್, ಎಂಬಲ್ಲಿ ಕುಳಂ.

## ಎರಡರ್ಥಕ್ಕೆ—

126. ನಾೞಮೆಂದು ತುಂಬಿನೊಳಂ ಕೞ್ವಿನೊಳಂ (?) ೞಂ; ನಾೞವಾಸಗೆ ಕಳ್ಳವಾಸಗೆ. ನಾಳಂ ಸಂಸ್ಕೃತದೊಳ್ ಕ್ಷಳಂ.

127. ಎೞ್ಚಸೆಂದು, ನೆಗೆದನುಂ ನಿದ್ರೆ ತಿಳಿದನುಮಕ್ಕುಂ.

128. ಬೞ್ದನೆಂದು, ಜೀವಿಸಿದನುಂ ಒಕ್ಕಲಾದನುಮಕ್ಕುಂ.

129. ಅೞ್ದನೆಂದು, ನೀರೊಳ್ ಮುೞುಂಗಿದನುಂ ಕೆಟ್ಟನುಮಕ್ಕುಂ.

130. ಕೞಲ್ದನೆಂದು, ಬಱವಾದನುಂ ಮನವಿಕ್ಕನುಮಕ್ಕುಂ.

131. ಎೞಲ್ದನೆಂದು, ಜೋಲ್ದನುಂ ಬೞಲ್ದನುಮಕ್ಕುಂ.

132. ತೊೞಲ್ದನೆಂದು, ಭ್ರಮೆಗೊಂಡನುಂ ಗರವಟ್ಟಿಗೆವಂದನುಮಕ್ಕುಂ.

133. ತುೞಿದನೆಂದು, ಬಡವಾದನುಂ ಅಗಲ್ದನುಮಕ್ಕುಂ.

134. ಇೞಿದನೆಂದು, ಮೈಗುಂದಿದನುಂ ಕೆಳಗಣ್ಗೆ ವಂದನುಮಕ್ಕುಂ.

135 ಸುೞಿದನೆಂದು, ಸಂಚಲಿಸಿದನುಂ ಬಟ್ಟೆವಂದನುಮಕ್ಕುಂ.

136. ಎೞ್ಚಿಸಿದನೆಂದು, ನಿದ್ರೆ ತಿಳಿಯಿಸಿದನುಂ ಎತ್ತಿ ಕಳೆದನುಮಕ್ಕುಂ.

137. ಅೞ್ದಿದನೆಂದು, ಸತ್ತನುಂ ಸೊಪ್ಪಾದನುಮಕ್ಕುಂ.

138. ಮುೞ್ಗಿದನೆಂದು, ಬಿದ್ದನುಂ ಪೊಡವಟ್ಟನುಮಕ್ಕುಂ.

139. ಗೞಿಯಿಸಿದನೆಂದು, ದೊರೆ ಕೊಳಿಸಿದನುಂ ದೊರೆ ಕೊಣ್ಡನುಮಕ್ಕುಂ.

140. ಅೞಿಪನೆಂದು, ಅೞಿಪುವನುಂ ಅೞಿಪಿದವನುಮಕ್ಕುಂ.

141. ತುೞಿಲ್ಸಂದನೆಂದು, ವೀರನುಂ ಪಂಚಮನುಮಕ್ಕುಂ.

142. ತುೞಿಲೆಂದು, ಪೊಡವಡಿಕೆಯುಂ ವೀರಮುಮಕ್ಕುಂ.

143. ಬೞ್ದುಂಕಿದನೆಂದು, ಜೀವಿಸಿದನುಂ ಬಿಡಲ್ಪಟ್ಟನುಮಕ್ಕುಂ; ಪುಲಿಯ ಬಾಯಿಂ ಬೞ್ದುಂಕಿದನೆಂಬಂತೆ.

144. ದೞವೆಂದು, ಚತುರಂಗಬಲಮುಂ ಸಾಮಾನ್ಯಬಲಮುಮಕ್ಕುಂ.

145. ಪೞಹವೆಂದು, ಬೇಂಟೆಯ ತೆರೆಯುಂ ವಾದ್ಯವಿಶೇಷಮುಮಕ್ಕುಂ.

146. ಅಗ್ಗೞಿಕೆಯೆಂದು, ಲಾಳವಿಂಡಿಗೆಯುಂ ಆವುಜದ ಮುಟ್ಟುಮಕ್ಕುಂ.

147. ಕೊತ್ತೞಿಯೆಂದು, ಕಾಗೆಯ ಮೊತ್ತಮುಂ ಬೆಸದವರ ನೆರವಿಯುಮಕ್ಕುಂ.

148. ಮೂೞಿಯೆಂದು, ಕಿವಿಯಿಲ್ಲದವಳುಂ ಕರಗದ ಜೂಳಿಯುಮ್ ಅಕ್ಕುಂ.

149. ಅೞಿಯೆಂದು, ವಂಚನೆಯುಂ ಏಕಾಗ್ರಚಿತ್ತಮುಮಕ್ಕುಂ; ಸಂಸ್ಕೃತದೊಳ್ ಸಖಿಯುಂ ಸಾಲುಂ ಬರ್ಪೆಡೆ ಅದು ಕ್ಷಳಂ.

150. ಅೞಿಯೆಂದು, ಬಳ್ಳದೞಿಯೊಳಂ ವಿಧಿಕ್ರಿಯೆಯೊಳಂ ೞೞಂ; ತುಂಬಿಯ ಪೇೞ್ವಲ್ಲಿ ಕ್ಷಳಂ.

151. ಎೞಿಯೆಂದು, ನೂಲೆೞಿಯೊಳಂ ಬರಸೆಳೆವುದೞೊಳಂ ೞೞಂ; ಭೂಮ್ಯರ್ಥದೊಳ್ ಕ್ಷಳಂ.

152. ಗೞಿಯೆಂದು, ಕಡೆಗೋಲುಂ ಕೊಲ್ಲಟಗರಾಡುವುದುಮಕ್ಕುಂ.

153. ಪೞ್ಕೆಯೆಂದು, ಶಯನಮುಂ ಶಯನಸ್ಥಾನಮುಮಕ್ಕುಂ.

154. ತೊೞ್ತೆಂದು, ದಾಸನುಂ ದಾಸಿಯುಮಕ್ಕುಂ.

155. ಪೊೞೆಯೆಂದು, ಬಟ್ಟೆಯುಂ ತೊೞೆಯುಮ್ ಅಕ್ಕುಂ.

156. ಕೞಲೆಂದು, ಮಜ್ಜಿಗೆಯುಂ ಅಂದುಗೆಯುಮಕ್ಕುಂ.

157. ನೆೞಲೆಂದು, ಆತಪತ್ರಾದಿಛಾಯೆಯುಂ ಜಳದರ್ಪಣಪ್ರತಿಬಿಂಬಮುಮಕ್ಕುಂ.

158. ಇಕ್ಕುೞೆಂದು, ವ್ಯಾಧಿವಿಕಾರಮುಂ ಸಂದಂಶಮುಮ್ ಅಕ್ಕುಂ.

159. ತುೞಿದನೆಂದು, ಕಾಲೊಳ್ ಮರ್ದಿಸಿದನುಂ ಘಾಸಿ ಮಾಡಿದನುಮಕ್ಕು.

160. ಬೀೞೆಂದು, ಮಾಡದ ಕೆಯ್ಯುಂ ಪತನಕ್ರಿಯೆಯುಮಕ್ಕುಂ.

161. ಮಲ್ಲೞಿಯೆಂದು, ಶರೀರವ್ಯಾಕುಲತೆಯುಂ ಸುತ್ತಿ ಬರ್ಪುದುಮಕ್ಕುಂ.

162. ನೆಗೞ್ತೆಯೆಂದು, ಪ್ರಸಿದ್ಧಿಯುಂ ಚರಿತ್ರಮುಮಕ್ಕುಂ.

### ಮೂೞರ್ಥಕ್ಕೆ—

163. ಎೞ್ದನೆಂದು, ನೆಗೆದನುಂ ನಿದ್ರೆ ತಿಳಿದನುಂ ದೊರೆಕೊಂಡನುಮಕ್ಕುಂ.

164. ಕೞಲೆಂದು, ಪಿಂತೆ (No. 156) ಪೇೞ್ದುದಲ್ಲದೆ ತನುತ್ವಮುಮಕ್ಕುಂ.

165. ನೆೞಲೆಂದು, ಪಿಂತೆ (No. 157) ಪೇೞ್ದುದಲ್ಲದೆ ಒಂದು ಮರಮುಮಕ್ಕುಂ.

166. ಎೞ್ಚತ್ತನೆಂದು, ನಿದ್ರೆ ತಿಳಿದನುಂ ಕತ್ತನೋಸರಿಸಿದನುಂ ಮಱವೆ ಪಿಂಗಿದನುಮಕ್ಕುಂ.

167. ತಾೞೆಂದು, ಒಂದು ಮರನುಮ್ ಅಗುೞಿಯುಂ ಸೂರಣದ ದಂಟುಮಕ್ಕುಂ.

168. ಕೞಿದನೆಂದು, ಸತ್ತನುಂ ದೂರಂಬೋದನುಂ ಕಯ್ಮೀಱಿದನುಮಕ್ಕುಂ.

169. ಮೊೞಗೆಂದು, ಮುಗಿಲ ದನಿಯುಂ ಒಂದು ಮರದ ಪೆಸರುಂ ವಾದನವಿಧಿಯುಮಕ್ಕುಂ.

170. ಬೞ್ದುದೆಂದು, ಪೞಸಿದುದುಂ ಸತ್ತುದುಂ ಕಯ್ಸೋಲ್ದುದುಮಕ್ಕುಂ.

171. ಕೊೞೆತುದೆಂದು, ಜೀರ್ಣಿಸಿದುದುಮ್ ಅಳವೞಿಸಿ ಮಲವೇಱಿದುದುಂ ಮನವಿಕ್ಕಿದುದುಮಕ್ಕುಂ.

172. ಪೊೞ್ತೆಂದು ಸಾಮಾನ್ಯಕಾಲಮುಂ ಪ್ರಸವಕಾಲಮುಂ ನೇಸಱುಮಕ್ಕುಂ.

173. ಎೞ್ತೆಂದು, ಗೂಳಿಯುಮ್ ಅನಡುಹುಂ ಹೊರಸಿನ ನೆಯ್ಗೆಯ ಊಕೆಯ ನುಲಿಯುಮಕ್ಕುಂ.

174. ಸುೞಿಯೆಂದು, ಕೆಲಸಗಳ್ಳನುಂ ಸಸಿಯ ಸುೞಿಯುಂ ಸುೞಿವ ಭಾವಮುಮಕ್ಕುಂ. ಸುಳಿಯೆಂದೀಶ್ವರನ ಪೆಸರೊಳ್ ಕ್ಷಳಂ.

175. ಅೞಿದನೆಂದು, ಸತ್ತನುಂ ಕೆಟ್ಟನುಂ ಕೆಡಿಸಿದನುಮಕ್ಕುಂ.

176. ಬೋೞಮೆಂದು, ಮಿೞ್ತುವುಂ ಮುಂಡಮುಂ ಮುಂಡಮೆಂದೊಂದೌಷಧಿಯುಮಕ್ಕುಂ.

## ನಾಲ್ಕರ್ಥಕ್ಕೆ—

177. ಪೞಿಯೆಂದು, ವಸ್ತ್ರವಿಶೇಷಮುಂ ದೂಷಣಮುಂ ನಾಯುಂ ಸೋವುವುದುಂ ಲೋಹದ ಘಟ್ಟಿಯುಮಕ್ಕುಂ.

178. ಉೞಿದುದೆಂದು, ಬಿಟ್ಟುದುಂ ಜೀವಿಸಿದುದುಂ ಲಾಭಮಾದುದುಮಕ್ಕುಂ, ಇವೞೊಳ್ ೞೞಂ; ಅಡಂಗಿದುದೞೊಳಂ ಬಡಿಗೆಯ ಕಳ್ಳನ ಬೇಂಟೆಯ ಉಳಿಯೊಳಂ ಕುಳಂ; ಸ್ಥಾನವ್ಯಕ್ತಿಯುಂ ಪೇೞ್ವೆಡೆ ಉೞಿ; ಪೆೞವುೞಿಯೆಂಬ ವ್ಯಯುಂ ೞೞಂ..

179. ಕೀೞೆಂದು, ದೊರೆಯಿಲ್ಲದ ಭಂಗಾರಮುಂ ತುರಗಮುಖದ ಲೋಹಮುಂ ಕ್ಷೀಣಕುಲನುಂ ಕೆಳಗುಮಕ್ಕುಂ.

180. ಸುೞಿಯೆಂದು, ಕೆಲಸಗಳ್ಳಂ ಮೊದಲಾದುದಲ್ಲದೆ (No. 174) ಜಲಾವರ್ತಮುಮಕ್ಕುಂ.

## ಐದರ್ಥಕ್ಕೆ—

181. ಬೞಿಯೆಂದು, ಬಟ್ಟೆಯುಂ ವಂಶಮುಂ ಕರೆವನುಂ ಲೇಪಿಸುವುದುಂ ಪಿಂಗಲಿಯ ಬೞಿಗೊರಲುಮ್ ಅಕ್ಕುಂ ಮತ್ತಂ ಬ ಪೂರಕದ ಬೞಿ ಅವ್ಯಯಮಾಗಿ ೞೞಂ.

ಇವು ಪ್ರಯೋಗದೃಷ್ಟಂಗಳಿವೞೊಳ್ ಸಂಶಯಮಿಲ್ಲ.

## ಸೂತ್ರಂ.

In Alliteration double consonants with ರ್ (F) harmonize with ೞ್ when forming a part of a double consonant.

ಪಿರಿಯರ್ಸಲಿಪರ್ದಡ್ಡ
ಕ್ಕರದ ೞಕ್ಕೈದೆ ರೇಫೆವೆರಸಿದ ದಡ್ಡ |
ಕ್ಕರಮಂ ೞನಾಗದನು
ಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ || 24 ||

ಪದಚ್ಛೇದಂ.—ಪಿರಿಯರ್ ಸಲಿಪರ್ ದಡ್ಡಕ್ಕರದ ೞಕ್ಕೆ ಐದೆ ರೇಫೆವೆರಸಿದ ದಡ್ಡಕ್ಕರಮಂ, ೞಂ ಆಗಿ; ಅದಂ ಉಚ್ಚರಿಸಲ್ಕೆ ಆಗಿರ್ದ ತೆಱದಿಂ ಅಂತು ಅದು ಶುದ್ಧಂ.

ಅನ್ವಯಂ.—ಪಿರಿಯರ್ ದಡ್ಡಕ್ಕರದ ೞಕ್ಕೆ ಐದೆ ರೇಫೆವೆರಸಿದ ದಡ್ಡಕ್ಕರಮಂ ಸಲಿಪರ್ ೞನಾಗಿ; ಅದಂ ಉಚ್ಚರಿಸಲ್ಕೆ ಆಗಿರ್ದ ತೆಱದಿಂ ಅಂತು ಅದು ಶುದ್ಧಂ.

ಟೀಕು.—ಪಿರಿಯರ್ = ಶ್ರೇಷ್ಠರಾದ ವಿದ್ವಾಂಸರ್; ದಡ್ಡಕ್ಕರದ = ಒತ್ತಿನಕ್ಷರದ; ೞಕ್ಕೆ = ೞಪ್ರಾಸಿಗೆ; ಅಯ್ದೆ = ಚನ್ನಾಗಿ; ರೇಫೆವೆರಸಿದ ದಡ್ಡಕ್ಕರಮಂ = ರೇಫೆಯೊಡನೆ ಕೂಡಿದ ದ್ವಿತ್ವಾಕ್ಷರಮಂ; ಸಲಿಪರ್ = ಪ್ರಾಸಿಂಗೆ ಸಲಿಸುವರ್; ೞನಾಗಿ = ೞಪ್ರಾಸವಾಗಿ; ಅದಂ = ಆ ರೇಫೆವೆರಸಿದ ದ್ವಿತ್ವಾಕ್ಷರಮಂ; ಉಚ್ಚರಿಸಲ್ಕೆ = ಓದುವುದರ್ಕೆ; ಆಗಿರ್ದ ತೆಱದಿಂ = ಸಲುವಳಿಯಾಗಿರ್ದ ರೀತಿಯಿಂದೆ; ಅಂತು = ಹಾಗೆ; ಅದು = ಅದು ತಾಂ; ಶುದ್ಧಂ = ಶುದ್ಧವಪ್ಪುದು.

ವೃತ್ತಿ.—ದಡ್ಡಕ್ಕರದ ೞಕ್ಕೆ ಪ್ರತಿಯಾಗಿ ರೇಫೆವೆರಸಿದ ದಡ್ಡಕ್ಕರಮಂ ಪ್ರಾಸಕ್ಕೆ ಪಿರಿಯರ್ ಪೇೞ್ದ ಪ್ರಯೋಗವೊಳವು; ಆ ದಡ್ಡಕ್ಕರದ ರೇಫಮಂ ೞನಾಗುಚ್ಚರಿಸಲಾಗದು, ನಿಸರ್ಗದಿನದು ಶುದ್ಧಂ.

ಪ್ರಯೋಗಂ. ಬೞ್ದುದು ಬಳ್ಳವಾಡಿ, ನೆೞ್ ನಂ
ಬಿರ್ದ್ದ ದಾರುಹತಂ, ಜಿನೇಂದ್ರನಂ
ತಿರ್ದ್ದ ಮಹಾನುಭಾವರ್ ||
ಚುರ್ಚಿದ ವೋಲ್ ಬಿಸಿಲಳುರೆ

ಮುೞ್ಚಿದ ತಳಿರಂತೆ ಸೊಂದು, ಗುಣನಂದಿ || ಕಂದಭಾಗಂ ||
ಒರ್ಕ್ಕಡಿತೆನೀರ್ಗೆ ಪಱಿ ಪ
ಟ್ಟೆರ್ಕ್ಕೆಯ ಪಂಣೆಲೆಯ ಮುಱಿಗೆ ದೇಸಿಗರಂ ದೇ |
ವರ್ಕ್ಕಳ್ಗೊಡೆಯರ್ ಮಾೞ್ಪಿರೆ?
ನೀೞ್ಕಿರಿಸದೆ ನಿಮ್ಮ ದೊರೆಗೆ ಬೊೞಿತಿಯರೊಳರೇ? || ಕಂದಂ ||

## ಸೂತ್ರಂ.

Words in which ಳ is preferred to ೞ.

ಝುಳಕಂ ಝುಳಿಪಿಸಿದಂ ಜೊಂ
ಗುಳಿ ಬೊಂಬುಳಿಯಾಳವಾಳಮಂತೆ ತಮಾಳಂ |
ವಳಿಗೆ ನೆಗೞ್ದೊಂದುಳಿ ಜಂ
ಗುಳಿ ಪುತ್ತಳಿ ಗೋಳಿ ಫೇಳಿ ಬಿೞಿಸಂದೇಹಂ || 25 ||

ಪದಚ್ಛೇದಂ.—ಝುಳಕಂ ಝುಳಿಪಿಸಿದಂ ಜೊಂಗುಳಿ ಬೊಂಬುಳಿ ಆಳವಾಳಂ, ಅಂತೆ ತಮಾಳಂ ವಳಿಗೆ ನೆಗೞ್ದ ಒಂದುಳಿ ಜಂಗುಳಿ ಪುತ್ತಳಿ ಗೋಳಿ ಫೇಳಿ ಬಿೞಿಸಂದೇಹಂ.

ಯಥಾನ್ವಯಂ. ಟೀಕು.—ಝುಳಕಂ = ಝುಳಕವೆಂಬ ಶಬ್ದಂ; ಝುಳಿಪಿಸಿದಂ = ಝುಳಿಪಿಸಿದನೆಂಬ ಶಬ್ದಂ; ಜೊಂಗುಳಿ = ಜೊಂಗುಳಿಯೆಂಬ ಶಬ್ದಂ; ಬೊಂಬುಳಿ = ಬೊಂಬುಳಿಯೆಂಬ ಶಬ್ದಂ; ಆಳವಾಳಂ = ಆಳವಾಳವೆಂಬ ಶಬ್ದಂ; ಅಂತೆ = ಹಾಗೆ; ತಮಾಳಂ = ತಮಾಳವೆಂಬ ಶಬ್ದಂ; ವಳಿಗೆ = ವಳಿಗೆಯೆಂಬ ಶಬ್ದಂ; ನೆಗೞ್ದ = ಪ್ರಸಿದ್ಧಿವಡೆದ; ಒಂದುಳಿ = ಒಂದುಳಿಯೆಂಬ ಶಬ್ದಂ; ಬಂಗುಳಿ = ಜಂಗುಳಿಯೆಂಬ ಶಬ್ದಂ; ಪುತ್ತಳಿ = ಪುತ್ತಳಿಯೆಂಬ ಶಬ್ದಂ; ಗೋಳಿ = ಗೋಳಿಯೆಂಬ ಶಬ್ದಂ; ಫೇಳಿ = ಫೇಳಿಯೆಂಬ ಶಬ್ದಂ; ಬಿೞಿಸಂದೇಹಂ = ಬಿೞಿಕ್ಕೆ ಸಂದೇಹಂ, ಕುಳವೆ ಅಪ್ಪುವೆಂಬುದರ್ಥಂ.

ವೃತ್ತಿ.—ಈ ಪೇೞ್ದ ಶಬ್ದಂಗಳ್ ಬಿೞಿಕ್ಕೆ ಸಂದೇಹಗಳಿವಂ ಪ್ರಯೋಗಮಂ ಕಂಡು ಪೇೞ್ವುದು.

## ಸೂತ್ರಂ.

Canarese words in which ಳ is required.

ಇಳಿದಳಿಯನೇಳಿದಂ ಸೂ
ಕುಳಿಯೋಕುಳಿ ಕಳಱು ಪೆಳಱು ಮಱುಕುಳಿಯಳಿಯಂ।
ಕುಳಿಯಂ ಮೂಳಿಗೆ ಜಾಳಿಗೆ
ತಳಿಗೆಯೊಳಿರ್ಬಳಸು ಬಳಸಿಗಂ ಮೊಳೆ ತಾಳಂ ॥ 26 ॥

ಆಳಿಸಿದಂ ಪೇಳಿಸಿದಂ
ಕೇಳಂ ಜೂದಾಳಿಯಳಿಲೆ ಕಳವಳಮಾ ಮೆ ।
ಯ್ಮೇಳಂ ಮಾಳಂ ತಾಳಿಗೆ
ಯೀಳಿಗೆಯಿಱುಕುಳಿಯಿವಾದಿಯಾಗಱಿ ಕುಳನಂ ॥27॥

ಪದಚ್ಛೇದಂ.—ಇಳಿದಳಿಯಂ, ಏಳಿದಂ, ಸೂಕುಳಿ, ಓಕುಳಿ, ಕಳಱು, ಪೆಳಱು, ಮಱುಕುಳಿ, ಅಳಿಯಂ, ಕುಳಿಯಂ, ಮೂಳಿಗೆ, ಜಾಳಿಗೆ, ತಳಿಗೆಯೊಳಿರ್, ಬಳಸು, ಬಳಸಿಗಂ, ಮೊಳೆ, ತಾಳಂ, ಆಳಿಸಿದಂ, ಪೇಳಿಸಿದಂ, ಕೇಳಂ, ಜೂದಾಳಿ, ಅಳಿಲೆ, ಕಳವಳಂ, ಆ ಮೆಯ್ಮೇಳಂ, ಮಾಳಂ, ತಾಳಿಗೆ, ಈಳಿಗೆ, ಇಱುಕುಳಿ, ಇವು ಆದಿ ಆಗಿ ಅಱಿ ಕುಳನಂ!

ಅನ್ವಯಂ.—ಇವಾದಿಯಾಗಿ ಕುಳನಂ ಅಱಿ! ಉಳಿದುದು ಯಥಾನ್ವಯಂ.

ಟೀಕು.—ಇಳಿದಳಿಯಂ = ಇಳಿದಳಿಯನೆಂದು; ಏಳಿದಂ = ಏಳಿದನೆಂದು; ಸೂಕುಳಿ = ಸೂಕುಳಿಯೆಂದು; ಓಕುಳಿ = ಓಕುಳಿಯೆಂದು; ಕಳಱು = ಕಳಱೆಂದು; ಪೆಳಱು = ಪೆಳಱೆಂದು; ಮಱುಕುಳಿ = ಮಱುಕುಳಿಯೆಂದು; ಅಳಿಯಂ = ಅಳಿಯನೆಂದು; ಕುಳಿಯಂ = ಕುಳಿಯನೆಂದು; ಮಾಳಿಗೆ = ಮಾಳಿಗೆಯೆಂದು; ಜಾಳಿಗೆ = ಜಾಳಿಗೆಯೆಂದು; ತಳಿಗೆಯೊಳಿರ್ = ತಳಿಗೆಯೊಳಿರೆಂದು; ಬಳಸು = ಬಳಸೆಂದು; ಬಳಸಿಗಂ = ಬಳಸಿಗನೆಂದು; ಮೊಳೆ = ಮೊಳೆಯೆಂದು; ತಾಳಂ = ತಾಳಮೆಂದು; ಆಳಿಸಿದಂ = ಆಳಿಸಿದನೆಂದು; ಪೇಳಿಸಿದಂ = ಪೇಳಿಸಿದನೆಂದು; ಕೇಳಂ = ಕೇಳನೆಂದು; ಜೂದಾಳಿ = ಜೂದಾಳಿಯೆಂದು; ಅಳಿಲೆ = ಅಳಿಲೆಯೆಂದು; ಕಳವಳಂ = ಕಳವಳಮೆಂದು; ಆ ಮೆಯ್ಮೇಳಂ = ಆ ಮೆಯ್ಮೇಳಮೆಂದು; ಮಾಳಂ = ಮಾಳಮೆಂದು; ತಾಳಿಗೆ = ತಾಳಿಗೆಯೆಂದು; ಈಳಿಗೆ = ಈಳಿಗೆಯೆಂದು; ಇಱುಕುಳಿ = ಇಱುಕುಳಿಯೆಂದು; ಇವಾದಿಯಾಗಿ = ಇವು ಮೊದಲಾಗಿ; ಕುಳನಂ = ಕುಳಳಕಾರವಂ; ಅಱಿ = ತಿಳಿ.

ವೃತ್ತಿ.—ಈ ಪೇಳ್ದ ಶಬ್ದಂಗಳ್ ಕುಳಂಗಳ್.

## ಸೂತ್ರಂ.

Canarese words in which ಲ is preferred to ಳ.

ಬೆರಲೆರಲೊರಲ್ಕೊರಲ್ಸರ
ಲರಲ್ಪರಲ್ಮರಲುಮಂತೆ ನರಲುಂ ಮುಂಗೈ ।
ಯ್ಸರಲುಂ ಲಾಂತಮಿವಂ ಗ್ರಾ
ಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ ॥28॥

ಪದಚ್ಛೇದಂ.—ಬೆರಲ್ ಎರಲ್ ಒರಲ್ ಕೊರಲ್ ಸರಲ್ ಅರಲ್ ಪರಲ್ ಮರಲುಂ, ಅಂತೆ ನರಲುಂ ಮುಂಗೈಯ್ಸರಲುಂ ಲಾಂತಂ; ಇವಂ ಗ್ರಾಮ್ಯರ್, ಅಱಿಯದೆ, ಉಚ್ಚರಿಸುವರ್ ಕುಳಾಂತಭ್ರಮೆಯಿಂ.

ಅನ್ವಯಂ.—ಇವಂ ಗ್ರಾಮ್ಯರ್, ಅಱಿಯದೆ, ಕುಳಾಂತಭ್ರಮೆಯಿಂ ಉಚ್ಚರಿಸುವರ್.

ಟೀಕು.—ಬೆರಲ್ = ಬೆರಲೆಂಬ ಶಬ್ದಂ; ಎರಲ್ = ಎರಲೆಂಬ ಶಬ್ದಂ; ಒರಲ್ = ಒರಲೆಂಬ ಶಬ್ದಂ; ಕೊರಲ್ = ಕೊರಲೆಂಬ ಶಬ್ದಂ; ಸರಲ್ = ಸರಲೆಂಬ ಶಬ್ದಂ; ಅರಲ್ = ಅರಲೆಂಬ ಶಬ್ದಂ; ಪರಲ್ = ಪರಲೆಂಬ ಶಬ್ದಂ; ಮರಲುಂ = ಮರಲೆಂಬ ಶಬ್ದಮುಂ; ಅಂತೆ = ಹಾಂಗೆ; ನರಲುಂ = ನರಲೆಂಬ ಶಬ್ದಮುಂ; ಮುಂಗೈಯ್ಸರಲುಂ = ಮುಂಗೈಯ್ಸರಲೆಂಬ ಶಬ್ದಮುಂ; ಲಾಂತ = ಲಕಾರಾಂತಂ; ಇವಂ = ಈ ಲಕಾರಾಂತಶಬ್ದಂಗಳಂ; ಗ್ರಾಮ್ಯರ್ = ಮೂಢರ್; ಅಱಿಯದೆ = ತಿಳಿಯದೆ; ಕುಳಾಂತಭ್ರಮೆಯಿಂ = ಕುಳಾಂತಭ್ರಮೆಯಿಂದೆ; ಉಚ್ಚರಿಸುವರ್ = ಓದುವರ್.

ವೃತ್ತಿ.—ಬೆರಲ್ ಮೊದಲಾದ ಈ ಶಬ್ದಂಗಳ್ ನಿತ್ಯಮಾಗಿ ಲಾಂತಂಗಳ್; ಇವಂ ಬೆರಳು ಕೊರಳೆಂಬಂತೆ ಕುಳನಾಗುಚ್ಚರಿಸ ಬಾರದು.

## ಸೂತ್ರಂ.

Transposition and interchange of (ಲ) and (ರ) and change of ರ(ಱ) into ೞ in some Canarese words.

ಮರಲರಲೆರಲೆಂಬಿವಱಿಂ
ತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ ।
ಪಿರಿದುಂ ಮುಲರಲರೆಲರೆಂ
ದೊರೆವುದು ಕೃತಿಯೊಳ್ವಿಕಲ್ಪವಿಧಿಯಿಂದಮಿವಂ ॥29॥

ಪದಚ್ಛೇದಂ.— ಮರಲ್ ಅರಲ್ ಎರಲ್ ಎಂಬಿವಱ ಅಂತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ; ಪಿರಿದುಂ, ಮಲರ್ ಅಲರ್ ಎಲರ್ ಎಂದು, ಒರೆವುದು ಕೃತಿಯೊಳ್ ವಿಕಲ್ಪವಿಧಿಯಿಂದಂ ಇವಂ.

ಅನ್ವಯಂ.—ಮರಲ್ ಅರಲ್ ಎರಲ್, ಎಂಬಿವಱ ಅಂತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ; ಪಿರಿದುಂ ಕೃತಿಯೊಳ್ ಇವಂ, ಮಲರ್ ಅಲರ್ ಎಲರ್ ಎಂದು, ವಿಕಲ್ಪವಿಧಿಯಿಂದಂ ಒರೆವುದು.

ಟೀಕು.— ಮರಲ್ = ಮರಲೆಂದು; ಅರಲ್ = ಅರಲೆಂದು; ಎರಲ್ = ಎರಲೆಂದು; ಎಂಬಿವಱ = ಎಂಬೀ ಮೂರು ಶಬ್ದಂಗಳ; ಅಂತರಾಳ = ನಡುವಣ; ರೇಫಕ್ಕೆ = ರೇಫೆಗೆ; ಲತ್ವಮುಂ = ಲಕಾರವುಂ; ದೊರೆಕೊಳ್ಗುಂ = ಪ್ರಾಪ್ತಿಸುವುದು, ಉಂ ಎಂಬ ಸಮುಚ್ಚಯದಿಂದೆ ಅಂತ್ಯದ ಲತ್ವಕ್ಕೆ ರೇಫೆಯುಂ ದೊರೆಕೊಳ್ವುದು; ಪಿರಿದುಂ = ಬಹುಳವಾಗಿಯುಂ; ಕೃತಿಯೊಳ್ = ಕಾವ್ಯದಲ್ಲಿ; ಇವಂ = ಈ ಮೂಱು ಶಬ್ದಂಗಳಂ; ಮಲರ್ = ಮಲರೆಂದು; ಅಲರ್ = ಅಲರೆಂದು; ಎಲರ್ = ಎಲರೆಂದು; ವಿಕಲ್ಪವಿಧಿಯಿಂದಂ = ವಿಕಲ್ಪವಿಧಾನದಿಂದ; ಒರೆವುದು = ಪೇೞ್ವುದು.

ವಿಚಾರಂ. — ವಿಕಲ್ಪಮೆಂದೊಡೆ ಎರಡು ತೆಱನುಂಟೆಂಬರ್ಥಂ. ಪಿರಿದುಮೆಂಬ ಬಹುಳಗ್ರಹಣದಿಂ ಮರಲೆಂಬುದಱ ರೇಫೆಗೆ ಣತ್ವಮುಮಾಗಿ, ಮಣಲೆಂದುಮುಂಟು.

ವೃತ್ತಿ.—ಮರಲ್ ಅರಲ್ ಎರಲ್ ಎಂಬಿವಱ ಮಧ್ಯರೇಫೆಗೆ ಲತ್ವಮುಂ ಸಮುಚ್ಚಯುವಶದಿಂದಂತ್ಯಲತ್ವಕ್ಕೆ ರೇಫಮುಮಾಗಿ, ಮಲರ್ ಅಲರ್ ಎಲರ್ ಎಂದು, ವಿಕಲ್ಪದಿ ನಕ್ಕುಂ; ಪಿರಿದೆಂಬುದಱಿಂ ಮರಲೆಂಬುದಱ ರೇಫೆಗೆ ಣತ್ವಮುಮಾಗಿ, ಮಣಲೆಂದುಮುಂಟು.

ಇದು ಱ ೞ ಕುಳ ಲಂಗಳ ಸಮಾಪ್ತಿ.

## 5. Words construed by the letters, and peculiarities of some letters.

### ಸೂತ್ರಂ.

The 8 places where (the sounds of) the letters originate, are enumerated.

ಕೊರಲುಂ ಜಿಹ್ವಾಮೂಲಮು
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ।
ಶಿರಮುಂ ದಂತಮುಮೆಂದ
ಕ್ಕರಮುದಯಿಪ ತಾಣಮಾದುವೀ ಪೇೞ್ದೆಂಟುಂ ‖ 30 ‖

ಪದಚ್ಛೇದಂ.-ಕೊರಲುಂ ಜಿಹ್ವಾಮೂಲಮುಂ ಉರಮುಂ ತಾಲುಗೆಯುಂ ಓಷ್ಠಮುಂ ನಾಸಿಕೆಯುಂ ಶಿರಮುಂ ದಂತಮುಂ ಎಂದು, ಅಕ್ಕರಂ ಉದಯಿಪ ತಾಣಂ ಆದುವು ಈ ಪೇೞ್ದೆಂಟುಂ.

ಅನ್ವಯಂ.—ಈ ಪೇೞ್ದಿಂಟುಂ ಅಕ್ಕರಂ ಉದಯಿಪ ತಾಣಂ ಆದುವು ಎಂಬುದನ್ವಯಂ.

ಟೀಕು.—ಕೊರಲುಂ = ಕಂಠಮುಂ; ಜಿಹ್ವಾಮೂಲಮುಂ = ನಾಲಿಗೆಯ ಬುಡನುಂ; ಉರಮುಂ = ಎದೆಯುಂ; ತಾಲುಗೆಯುಂ = ಗಲ್ಲಮುಂ; ಓಷ್ಠಮುಂ = ತುಟಿಯುಂ; ನಾಸಿಕೆಯುಂ = ನಾಸಿಕೆಯುಂ; ಶಿರಮುಂ = ಮಸ್ತಕಮುಂ; ದಂತಮುಂ = ಪಲ್ಗಳುಂ; ಎಂದು = ಹೀಗೆಂದು; ಈ ಪೇೞ್ದಿಂಟುಂ = ಈ ಪೇೞ್ದಿಂಟು ತಾಣಂಗಳುಂ; ಅಕ್ಕರಂ = ಅಕ್ಷರಂಗಳ್; ಉದಯಿಪ ತಾಣಂ = ಹುಟ್ಟುವ ಸ್ಥಾನಂಗಳ್; ಆದುವು = ಸಲುವಳಿ ಆದುವು.

ವೃತ್ತಿ.—ಈ ಪೇೞ್ದಿಂಟಱೊಳ್ ಅಕ್ಕರಂಗಳ್ ಪುಟ್ಟುಗುಂ; ಅವಱೊಳೇಕಸ್ಥಾನಿಗಳನಱಿದು, ವರ್ಣಾವೃತ್ತಿಯಂ ಮಾೞ್ಪುದು.

## ಸೂತ್ರಂ.

All letters divided into 5 kinds, viz. vowels, classified letters, unclassified letters, dependent letters, letters peculiar to Canarese (ದೇಶೀಯಂಗಳ್).

ಕವಿಗಳ್ಸ್ವರದಿಂ ವರ್ಗದಿ
ನವರ್ಗದಿಂ ಯೋಗವಾಹದಿಂ ದೇಶಿಯೊಳು |
ದ್ಭವಮಪ್ಪ ವರ್ಣದಿಂ ಪಂ
ಚವಿಧಂತಾನೆಂದು ತಿಳಿಪುವರ್ಶುದ್ಧಗೆಯಂ || 31 ||

ಪದಚ್ಛೇದಂ.—ಕವಿಗಳ್ ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶಿಯೊಳ್ ಉದ್ಭವಂ ಅಪ್ಪ ವರ್ಣದಿಂ ಪಂಚವಿಧಂ ತಾಂ ಎಂದು ತಿಳಿಪುವರ್ ಶುದ್ಧಗೆಯಂ.

ಅನ್ವಯಂ.—ಕವಿಗಳ್ ತಾಂ, ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶಿಯೊಳ್ ಉದ್ಭವಂ ಅಪ್ಪ ವರ್ಣದಿಂ ಪಂಚವಿಧಂ ಎಂದು, ಶುದ್ಧಗೆಯಂ ತಿಳಿಪುವರ್.

ಟೀಕು.—ಕವಿಗಳ್ = ವಿದ್ವಾಂಸರ್; ತಾಂ = ತಾವು; ಸ್ವರದಿಂ = (ಅ, ಆ ಇತ್ಯಾದಿ) ಸ್ವರಾಕ್ಷರಂಗಳಿಂದೆ; ವರ್ಗದಿಂ = (ಕ, ಖ ಇತ್ಯಾದಿ) ವರ್ಗಾಕ್ಷರಂಗಳಿಂದೆ; ಅವರ್ಗದಿಂ = (ಯ, ರ ಇತ್ಯಾದಿ) ಅವರ್ಗಾಕ್ಷರಂಗಳಿಂದೆ; ಯೋಗವಾಹದಿಂ = (ಂ, ಃ ಇತ್ಯಾದಿ) ಯೋಗವಾಹಾಕ್ಷರಂಗಳಿಂದೆ; ದೇಶಿಯೊಳ್ = ಕನ್ನಡದ ದೇಶಿಯಲ್ಲಿ; ಉದ್ಭವಮಪ್ಪ ವರ್ಣದಿಂ = ಹುಟ್ಟಿದ (ಎ, ಒ ಇತ್ಯಾದಿ) ಅಕ್ಷರಂಗಳಿಂದೆ; ಪಂಚವಿಧಂ = ಐದು ಪ್ರಕಾರವೆಂದು; ಶುದ್ಧಗೆಯಂ = ಶುದ್ಧಾಕ್ಷರಂಗಳಂ; ತಿಳಿಪುವರ್ = ತಿಳಿಸುವರ್.

ವೃತ್ತಿ.—ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶೀಯಂಗಳಿಂ, ಇಂತು, ಶುದ್ಧಾಕ್ಷರಂಗಳ್ ಕನ್ನಡದೊಳ್ ಪಂಚವಿಧಮೆಂದು, ಕವಿಗಳ್ಬಾಲಶಿಕ್ಷೆಯಂ ಮಾಳ್ಪಿರ್.

ಸೂತ್ರಂ.

There are 14 vowels, 25 classified letters, 9 unclassified ones, and 4 dependent letters (*cf.* S. 17) in the Saṁskṛita-Canarese Alphabet, *i. e.* altogether 52.

ತರದಿಂದಂ ಪದಿನಾಲ್ಕುಂ
ಸ್ವರಮಿರ್ಪತ್ತೈದು ವರ್ಣಮವು ವರ್ಗಂ ತ |
ತ್ಪರದೊಂಬತ್ತುಮವರ್ಗಂ
ಪರಿಭಾವಿಸೆ ಯೋಗವಾಹಮವು ನಾಲ್ಕೆ ವಲಂ ||32||

ಪದಚ್ಛೇದಂ.—ತರದಿಂದಂ ಪದಿನಾಲ್ಕುಂ ಸ್ವರಂ; ಇರ್ಪತ್ತೈದು ವರ್ಣಂ, ಅವು ವರ್ಗಂ; ತತ್ಪರದ ಒಂಬತ್ತುಂ ಅವರ್ಗಂ; ಪರಿಭಾವಿಸೆ, ಯೋಗವಾಹಂ ಅವು ನಾಲ್ಕೆ, ವಲಂ!

ಯಥಾನ್ವಯಂ. ಟೀಕು.—ತರದಿಂದಂ = ಕ್ರಮದಿಂದಂ; ಪದಿನಾಲ್ಕುಂ = ಹದಿನಾಲ್ಕಕ್ಷರಂಗಳುಂ; ಸ್ವರಂ = ಸ್ವರಾಕ್ಷರಂಗಳ್; ಇರ್ಪತ್ತೈದು ವರ್ಣಂ = ಇಪ್ಪತ್ತೈದಕ್ಷರಂಗಳ್; ಅವು = ಅವು; ವರ್ಗಂ = ವರ್ಗಾಕ್ಷರಂಗಳ್; ತತ್ಪರದ = ಆ ವರ್ಗಾಕ್ಷರಂಗಳ ಮುಂದಣ; ಒಂಬತ್ತು = ಒಂಬತ್ತಕ್ಷರಂಗಳ್; ಅವರ್ಗಂ = ಅವರ್ಗಾಕ್ಷರಂಗಳ್; ಪರಿಭಾವಿಸೆ = ವಿಚಾರಿಸೆ; ಯೋಗವಾಹಂ = ಯೋಗವಾಹಾಕ್ಷರಂಗಳ್; ಅವು = ಅವು; ನಾಲ್ಕೆ = ನಾಲ್ಕಕ್ಷರಂಗಳೆ; ವಲಂ = ನಿಶ್ಚಯಂ.

ವೃತ್ತಿ.—ಕ್ರಮದಿಂ ಸ್ವರಂ ಪದಿನಾಲ್ಕಕ್ಕರಂಗಳ್, ವರ್ಗಮಿರ್ಪತ್ತೈದಕ್ಕರಂಗಳ್, ಅವರ್ಗಮೊಂಬತ್ತಕ್ಕರಂಗಳ್, ಯೋಗವಾಹಂ ನಾಲ್ಕಕ್ಕರಂಗಳ್; ಅಂತು ಸಂಸ್ಕೃತದೊಳ್ ಶುದ್ಧಗೆಯ್ವೈವತ್ತೆರಡುಂ.

ಸೂತ್ರಂ.

But pure Canarese has only 47 letters.

ತಿಳಿ ದೇಶೀಯುವ[illegible]ವ್ಡೈದಂ
ಕಳೆ ನೀಂ ಋುಌ ವರ್ಣ ಶ ಷ ವಿಸರ್ಗ ೱ ೲ |
ಕ್ಷಳಸಂ ನಾಲ್ವತ್ತೇೞಾ
ಯ್ತುಳೆ ಶುದ್ಧಗೆಯಚ್ಚಗಂನಡಕ್ಕೀ ಕ್ರಮದಿಂ || 33 ||

ಪದಚ್ಛೇದಂ.—ತಿಳಿ ದೇಶೀಯಮುಂ ಐದಂ! ಕಳೆ ನೀಂ ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ! ನಾಲ್ವತ್ತೇೞಾಯ್ತು, ಅಳೆ, ಶುದ್ಧಗೆ ಅಚ್ಚಗನ್ನಡಕ್ಕೆ ಈ ಕ್ರಮದಿಂ.

ಅನ್ವಯಂ.—ದೇಶೀಯಮುಂ ಐದಂ ನೀಂ ತಿಳಿ! ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ ಕಳೆ! ಈ ಕ್ರಮದಿಂ ಅಚ್ಚಗನ್ನಡಕ್ಕೆ ಶುದ್ಧಗೆ ನಾಲ್ವತ್ತೇೞಾಯ್ತು; ಅಳೆ!

ಟೀಕು.—ದೇಶೀಯಮುಂ = ದೇಶೀಯಾಕ್ಷರಂಗಳುಂ; ಐದಂ = (ಱ, ೞ, ಳ, ಎ, ಒ ಎಂಬಿವು) ಐದಂ; ನೀಂ = ನೀಂ; ತಿಳಿ = ಅಱಿ; ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ = ಋವರ್ಣ, ಌವರ್ಣ, ಶಕಾರ, ಷಕಾರ, ವಿಸರ್ಗ, ಜಿಹ್ವಾಮೂಲೀಯ ಉಪಧ್ಮಾನೀಯ, ಕ್ಷಳಂಗಳೆಂಬಕ್ಕರಂಗಳಂ; ಕಳೆ = ಕರ್ಣಾಟಭಾಷೆಯೊಳಿಲ್ಲೆಂದು, ಬಿಡು; ಈ ಕ್ರಮದಿಂ = ಈ ರೀತಿಯಿಂದೆ; ಅಚ್ಚಗನ್ನಡಕ್ಕೆ = ಸಂಸ್ಕೃತಂ ಬೆರೆಯದ ಬಱಿಯ ಕನ್ನಡಕ್ಕೆ; ಶುದ್ಧಗೆ = ಶುದ್ಧಾಕ್ಷರಂಗಳ್; ನಾಲ್ವತ್ತೇೞಾಯ್ತು = ನಾಲ್ವತ್ತೇೞಕ್ಕರಂಗಳಾದವೆಂದು; ಅಳೆ = ಪ್ರಮಾಣಿಸು.

ವೃತ್ತಿ.—ಕನ್ನಡದೊಳ್ದೇಶೀಯಮೈದು ತೆಱಂ; ಪಿಂತಣ್ಣೈವತ್ತೆರಡಕ್ಕರಂಗಳ್ಕೂಡೆ ಐವತ್ತೇೞಕ್ಕರಂಗಳ್; ಅವಱೊಳಗೆ ಋ ೠ, ಌ ೡ, ಶ, ಷ, ವಿಸರ್ಗ, ೱಕ, ೲಪ, ಕ್ಷಳಂಗಳೆಂಬ ಪತ್ತಂ ಕಳೆಯಲಚ್ಚಗನ್ನಡದೊಳ್ಶುದ್ಧಗೆ ನಾಲ್ವತ್ತೇೞು ವಿಧಂ; ನಿಸರ್ಗಮಾಗಿ ವಿಸರ್ಗಮಿಲ್ಲ.

**The manner how, in the form of letters, articulate sound (ಶಬ್ದಂ), *i. e.* words, originates.**

ತನು ವಾದ್ಯಂ ನಾಲಗೆ ವಾ
ದನದಂಡಂ ಕರ್ತೃವಾತ್ಮನವನ ಮನೋವೃ ।
ತ್ತಿನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಳವರ್ಣಮಕ್ಷರರೂಪಂ ॥ 34 ॥

ಪದಚ್ಛೇದಂ.—ತನು ವಾದ್ಯಂ, ನಾಲಗೆ ವಾದನದಂಡಂ, ಕರ್ತೃವು ಆತ್ಮಂ; ಅವನ ಮನೋವೃತ್ತಿನಿಮಿತ್ತಂ ಆಗಿ ಶಬ್ದಂ ಜನಿಯಿಸುಗುಂ ಧವಳವರ್ಣಂ ಅಕ್ಷರರೂಪಂ.

ಅನ್ವಯಂ.—ಧವಳವರ್ಣಂ ಅಕ್ಷರರೂಪಂ ಶಬ್ದಂ ಜನಿಯಿಸುಗುಂ ಎಂಬುದನ್ವಯಂ.

ಟೀಕು.—ತನು = ಶರೀರಂ; ವಾದ್ಯಂ = ವಾದ್ಯವು; ನಾಲಗೆ = ಜಿಹ್ವೆಯು; ವಾದನ ದಂಡಂ = ವಾದ್ಯವಂ ನುಡಿಸುವ ಕುಡುಹು; ಆತ್ಮಂ = ಜೀವಾತ್ಮಂ; ಕರ್ತೃ = ವಾದ್ಯವಂ ನುಡಿಸುವ ಕರ್ತೃ; ಅವನ = ಆ ಜೀವಾತ್ಮನ; ಮನೋ = ಮನಸಿನ; ವೃತ್ತಿ = ವರ್ತನೆಗೆ; ನಿಮಿತ್ತಂ = ಕಾರಣಂ; ಆಗಿ = ಆಗಿ; ಧವಳವರ್ಣಂ = ಶ್ವೇತವರ್ಣವಾದ; ಅಕ್ಷರರೂಪಂ = ಅಕ್ಷರಾತ್ಮಕವಾದ; ಶಬ್ದಂ = ಧ್ವನಿ; ಜನಿಯಿಸುಗುಂ = ಹುಟ್ಟುವದು.

ವೃತ್ತಿ.—ಶರೀರಮೆ ವಾದ್ಯಂ, ನಾಲಗೆ ಬಾಜಿಸುವ ಕುಡುಹು, ವಾದಕನಾತ್ಮಂ; ಆತನ ಮನೋವೃತ್ತಿಯಿಂದೆ ಧವಳವರ್ಣಮಂತಪ್ಪಕ್ಷರರೂಪಮಪ್ಪ ಶಬ್ದಂ ಪುಟ್ಟುಗುಂ.

## ಸೂತ್ರಂ.

ಪದದರ್ಥಮಂ ವಿಭಾಗಿಸು
ವುದಱಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂ |
ಬುದು ತತ್ಪ್ರತ್ಯಯದಿಂ ಪೂ
ರ್ವದೊಳಿರ್ಕುಂ ಪ್ರಕೃತಿಯೆರಡುಮಮರ್ದೊದವೆ ಪದಂ[1] || 35 ||

(A word as) a Base (ಪ್ರಕೃತಿ) is either a nominal base (ಲಿಂಗಂ) or a verbal one (ಧಾತು). When it is augmented by suffixes (ಪ್ರತ್ಯಯಂ, ವಿಭಕ್ತಿ), which are either nominal (ನಾಮವಿಭಕ್ತಿ) or verbal ones (ಆಖ್ಯಾತವಿಭಕ್ತಿ), it becomes an inflected word (ಪದಂ). Also an Adverb (ಅವ್ಯಯಂ) and the nominal part of a compound may be inflected words.

ಪದಚ್ಛೇದಂ.—ಪದದ ಅರ್ಥಮಂ ವಿಭಾಗಿಸುವುದಱಿಂದೆ ವಿಭಕ್ತಿ, ಅಂತು ಅದಂ ಪ್ರತ್ಯಯಂ ಎಂಬುದು; ತತ್ಪ್ರತ್ಯಯದಿಂ ಪೂರ್ವದೊಳ್ ಇರ್ಕುಂ ಪ್ರಕೃತಿ; ಎರಡುಂ ಅಮರ್ದು ಒದವೆ, ಪದಂ.

ಅನ್ವಯಂ.—ತತ್ಪ್ರತ್ಯಯದಿಂ ಪೂರ್ವದೊಳ್ಪ್ರಕೃತಿ ಇರ್ಕುಂ.

ಟೀಕು.—ಪದದ = ಪದಂಗಳ; ಅರ್ಥಮಂ = ಪುರುಳಂ; ವಿಭಾಗಿಸುವುದಱಿಂದೆ = ವಿಭಾಗಿಸಿ ಕೊಡುವದಱಿಂದೆ; ವಿಭಕ್ತಿ = ವಿಭಕ್ತಿ ಎನಿಪುದು; ಅಂತು = ಹಾಂಗೆ; ಅದಂ = ಆ ವಿಭಕ್ತಿಯಂ; ಪ್ರತ್ಯಯಂ = ಪ್ರತ್ಯಯಮೆಂದು; ಎಂಬುದು = ಪೇೞ್ವುದು; ತತ್ಪ್ರತ್ಯಯದಿಂ = ಆ ವಿಭಕ್ತಿಯಿಂದೆ; ಪೂರ್ವದೊಳ್ = ಮೊದಲಲ್ಲಿ; ಪ್ರಕೃತಿ = ಪ್ರಕೃತಿ; ಇರ್ಕುಂ = ಇರ್ಪುದು; ಎರಡುಂ = ಪ್ರಕೃತಿ ಪ್ರತ್ಯಯಮೆಂಬೆರಡುಂ; ಅಮರ್ದು = ಪೊರ್ದುಗೆಯಾಗಿ; ಒದವೆ = ಪ್ರಾಪ್ತಿಸೆ; ಪದಂ = ಪದವೆನಿಸುವದು.

[1] The Sûtra gives two meanings of ಪದಂ: 'word' (= ಶಬ್ದ) in ಪದದರ್ಥಮಂ, and 'inflected word'.

ವೃತ್ತಿ.—ಶಬ್ದದೊಳಿರ್ದರ್ಥಮಂ ತಂತಂಮರ್ಥಾನುಗುಣಮಾಗಿ ವಿಭಾಗಿಸಿ ಕುಡುವದಱಿಂ ವಿಭಕ್ತಿಯೆನಿಸುಗುಂ, ಆ ವಿಭಕ್ತಿಯುಂ ಪ್ರತ್ಯಯಮೆನಲಕ್ಕುಂ ಅವಾವುವೆಂದೊಡೆ—ಮ್, ಅಮ್ ಮೊದಲಾದ ನಾಮಾಖ್ಯಾತವಿಭಕ್ತಿಗಳ್. ಅವಱಿಂ ಪಿಂದಿರ್ಪ ಲಿಂಗಮುಂ ಧಾತುಮುಂ ಪ್ರಕೃತಿಯೆನಲಕ್ಕುಂ; (ಪ್ರಕೃತಿಪ್ರತ್ಯಯಂಗಳೆರಡುಂ ಕೂಡೆ, ಪದಮಕ್ಕುಂ.) ಮರ ದೇವ ಎಂದು, (ನಾಮ)ಲಿಂಗಮನಿಱಿಸಿ ಮ್ ಎಂಬ ವಿಭಕ್ತಿಯುಂ ಕುಡೆ, ಮರಂ ದೇವಂ ಎಂದು, (ನಾಮ)ಪದಮಕ್ಕುಂ. ನುಡಿ ನೋಡು ಎಂಬ ಧಾತುಮನಿಱಿಸಿ, ಅಮ್ ಎಂಬ (ಆಖ್ಯಾತ)ವಿಭಕ್ತಿಯುಂ ಕುಡೆ, ನುಡಿದಂ ನೋಡಿದಂ ಎಂದು, (ಆಖ್ಯಾತ)ಪದಮಕ್ಕುಂ. (ಅವ್ಯಯಮುಂ ಸಮಾಸದೊಳಗಣ ನಾಮಭಾಗಮುಂ ವಿಭಕ್ತಿಯುಂ ಕೊಟ್ಟುಱಿವುದಱಿಂ ಪದಮೆಂದಱಿವುದು.

## ಸೂತ್ರಂ.

There ore Canarese words with obligatory and optional Anusvâra, with true and slack double consonants (ಶಿಥಿಲದ್ವಿತ್ವಂಗಳ್) and with double consonants which may be treated either as true or as slack.

ಕೆಲವು ನಿಜ ಬಿಂದುಗಳ್ ಕೆಲ
ಕೆಲವು ವಿಕಲ್ಪಾರ್ಥಬಿಂದುಗಳ್ದ್ವಿತ್ವಂಗಳ್ ।
ಕೆಲವಾ ಶಿಥಿಲದ್ವಿತ್ವಂ
ಕೆಲಮುಭಯಮುಮಾಗಿಕೆಲವು ಪದನಱಿವುದವಂ॥36॥

ಪದಚ್ಛೇದಂ.—ಕೆಲವು ನಿಜ ಬಿಂದುಗಳ್, ಕೆಲಕೆಲವು ವಿಕಲ್ಪಾರ್ಥಬಿಂದುಗಳ್, ದ್ವಿತ್ವಂಗಳ್ ಕೆಲವು, ಆ ಶಿಥಿಲದ್ವಿತ್ವಂ ಕೆಲಂ, ಉಭಯಮುಂ ಆಗಿ ಕೆಲವು ಪದಂ, ಅಱಿವುದು ಅವಂ.

ಅನ್ವಯಂ.—ಕೆಲವು ನಿಜ ಬಿಂದುಗಳ್, ಕೆಲಕೆಲವು ವಿಕಲ್ಪಾರ್ಥಬಿಂದುಗಳ್, ಕೆಲವು ದ್ವಿತ್ವಂಗಳ್, ಕೆಲಂ ಆ ಶಿಥಿಲದ್ವಿತ್ವಂ, ಕೆಲವು ಪದಂ ಉಭಯಮುಂ ಆಗಿ, ಅವಂ ಅಱಿವುದು.

ಟೀಕು.—ಕೆಲವು = ಕೆಲವು ಶಬ್ದಂಗಳ್; ನಿಜ ಬಿಂದುಗಳ್ = ನಿತ್ಯಬಿಂದುಗಳೆನಿಸುವುವು; ಕೆಲಕೆಲವು = ಹಲವು ಕೆಲವು ಶಬ್ದಂಗಳ್; ವಿಕಲ್ಪಾರ್ಥಬಿಂದುಗಳ್ = ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು; ಕೆಲವು = ಕೆಲವು ಶಬ್ದಂಗಳ್; ದ್ವಿತ್ವಂಗಳ್ = ಒತ್ತಕ್ಕರಂಗಳಾಗಿರ್ಪುವು; ಕೆಲಂ = ಕೆಲವು ಶಬ್ದಂಗಳ್; ಆ = ಆ ಪ್ರಸಿದ್ಧಮಾದ; ಶಿಥಿಲದ್ವಿತ್ವಂ = ಶಿಥಿಲವಾದ ದ್ವಿತ್ವಂಗಳಾ

ಗಿರ್ಪುವು; ಕೆಲವು ಪದಂ = ಕೆಲವು ಪದಂಗಳ್; ಉಭಯಮುಂ = ದ್ವಿತ್ವ—ಶಿಥಿಲದ್ವಿತ್ವಮೆಂಬು ಭಯಮುಮಂ, ಆಗಿ = ಆಗಿರ್ಪುವು; ಅವಂ = ಆ ಪದಂಗಳಂ; ಅಱಿವುದು = ತಿಳಿವುದು.

ವೃತ್ತಿ.—ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳ್, ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು; ಕೆಲವು ಪದಂಗಳ್ನಿಯತದಿಂ ದ್ವಿತ್ವಂಗಳ್, ಕೆಲವು ಪದಂಗಳ್ ಶಿಥಿಲದ್ವಿತ್ವಂಗಳ್, ಕೆಲವು ಪದಂಗಳ್ಶಿಥಿಲಮುಂ ದ್ವಿತ್ವಮುಮಾಗಿರ್ಪುವು.

ಪ್ರಯೋಗಂ.—ನಿತ್ಯಬಿಂದುಗೆ—ಬೆಡಂಗು, ಕಡಂಗು, ಅಡಂಗು. ತೊಡಂಬೆ, ತೊಡಂಕು, ಕೊಡಂತಿ, ಪಡಂಗು, ಸಿಡುಂಬು, ಸೆಱಂಗು, ಎಱಂಕೆ, ತುಱುಂಬು ತಱುಂಬು, ಕುಱುಂಬು, ಒಱಂತೆ, ಕೊಱಂತೆ, ಪಳುಂಕಿದಂ, ಜೊಂಕಿದಂ, ತೂಂಕಿದಂ, ಅವುಂಕಿದಂ, ಕವುಂಕುೞ್, ಪೇಂಕುಳಿ, ಚಲಂಕು, ತೆಂಕು, ಕುಸುಂಬೆ, ಹಸುಂಬೆ, ಮುಸುಂಬು, ಕಲುಂಬು, ದಾಂಟು, ದೂಂಟು, ಗೆಂಟು, ಗೋಂಟು, ಗೆಂಟುಗೆ, ಗಂಟಿಗೆ, ಬ್ಯೆಂಟೆ, ಸುಕಟಗೆ, ದ್ರೋಂಟೆ, ಮೇಂಟೆ, ಪೊಂಟು, ಮಿಂಟಿದಂ, ಈಂಟು, ಕೂಂಟು, ಕುಂಟಣಿ, ಸೊರಂಟು, ಒರಂಟು, ತೆರಂಟು, ಸೀಂಟು, ತೋಂಟಂ, ತೋಂಟಿಗಂ, ಪೊಸಂತಿಲ್, ಗಳಂತಿಗೆ, ಪಳಂಚಿದಂ, ಸಾಂದು, ಸೇಂದು, ನಾಂದು, ಕಲುಂಬು, ಕೆಡಂದುಱು, ಕೊಡಂಬೆ, ಬಣ್ಣಂಬೆ, ಬಣಂಜಿಗಂ, ಬೆಂದುಱು, ಬೆದಂಡೆ, ಚಲುಂಕಿದಂ, ಪಲುಂಬಿದಂ, ನಿಲುಂಬಿದಂ, ಅಸುಂಬಿದಂ, ಕರಂಡಗೆ, ತೆಂಧಲ್; ಇವು ಮೊದಲಾದುವು.

ವಿಕಲ್ಪಬಿಂದುಗೆ—ಕದಂಪು, ಕದಪು; ಕೊಡಂಕೆ, ಕೊಡಕೆ; ಇಱುಂಪೆ, ಇಱುಪೆ; ಸೊರಂಜು, ಸೊರಜು; ಜಿನುಂಗು, ಜಿನುಗು; ಬೆಳಂತಿಗೆ, ಬೆಳತಿಗೆ; ಕರಿಂಕು, ಕರಿಕು; ತೊಳಂಕು, ತೊಳಕು; ಕಣಂಜು, ಕಣಜು; ಅಱಂಬೆ, ಅಱಬೆ; ಕಱುಂಕೆ ಕಱುಕೆ, ಕುಱುಂಕಿದಂ, ಕುಱುಕಿದಂ; ಇಱುಂಕಿದಂ, ಇಱುಕಿದಂ; ಕರ್ದುಂಕಿದಂ, ಕರ್ದುಕಿದಂ; ದುಘುಂಮಿಱಿದಂ, ದುಘುಮಿಱಿದಂ; ತುಳುಂಕಿದಂ, ತುಳುಕಿದಂ; ಪೊಳಂಕಿದಂ, ಪೊಳಕಿದಂ; ಮುಸುಂಕಿದಂ, ಮುಸುಕಿದಂ; ಇವು ಮೊದಲಾದುವು.

ಇನ್ನು ನಿಯತದಿತಕೆ—ಷಪು, ಕಪ್ಪು, (ಕಪ್ಪಡಿ) ಬಪ್ಪಂಡಂ, (ಉಪ್ಪಂಡಂ) ತಿಪ್ಪುೞ್, ಸೂಪ್ಪುಗಳ್, ರಾಪ್ಪಲ್, ಕೂಪ್ಪಂ, ಕೂಪು, ಚಪ್ಪರಂ, ಒಪ್ಪಂ, ನೆಪ್ಪು, (ಕಪ್ಪಳಿ) (ತಪ್ಪಡಿ) ಱುೊಪ್ಪಂ, ತೆಪ್ಪಂ, ಟಿಪ್ಪರಂ) ದುಪ್ಪಡಿ, (ಉಪ್ಪಡಂ)

ಹಪ್ಪಳಿಕೆ, ಹಿಪ್ಪಲಿ,( ಸಿಪ್ಪು) ಸಕ್ಕರೆ, ಕಕ್ಕಸಂ, ಮೊಕ್ಕಳಂ, ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕಱಸೆ, ಬಕ್ಕುಡಿದಂ, ಮೊಗ್ಗರಂ, ಮೊಗ್ಗು, ಬಗ್ಗಂ, ಬಗ್ಗಣೆ, ಎಗ್ಗಂ, ಲಗ್ಗಿಗಂ, ಅಗ್ಗಳಂ, ವೆಗ್ಗಳಂ, ಸುಗ್ಗಂ, ಸುಗ್ಗಿ, ಉಗ್ಗಂ, ಉಗ್ಗಿ, ತೊೞಿಲ್ದಂ, ಬೞಿಲ್ದಂ, ಕೞಿಲ್ದಂ, ಬೞ್ದಿಂ, ಬಿೞ್ದಿಂ, ಆೞ್ದಿಂ, ಎೞ್ದಿಂ, ಸುರುಳ್ದಂ, ಅೞ್ತಿ, ಕೞ್ತೆ, ಕೞ್ತಿಲೆ, ತೊೞ್ತು; ಇವು ಮೊದಲಾದುವು.

ಇನ್ನು ಶಿಥಿಲದ್ವಿತ್ವಕ್ಕೆ-ಮಗುೞ್ದಿಂ, ಅಗುೞ್ದಿಂ, ಜಗುೞ್ದಿಂ, ಪೊಗೞ್ದಿಂ, ತುಮುೞ್ದಿಂ, ನುಸುಳ್ದಂ, ಮಸುಳ್ದಂ, ಮುಗುಳ್ದಂ, ತೆಗೞ್ದಿಂ, ನೆಗೞ್ದಿಂ, ತಿಮಿರ್ದಂ.

ಇನ್ನು ದ್ವಿತ್ವಮುಂ ಶಿಥಿಲಮುಂ ಆದುವರ್ಕೆ—ತಗುಳ್ದಂ, ಮೊರಳ್ದಂ ಎಂಬಂತೆ.

Compare Sûtras 42. 43. 44. 45.

## ಸೂತ್ರಂ.

Words having a short vowel of the penultimate with Rêpha.

ಉರ್ದುಂ ಬಿರ್ದುಂ ತರ್ದುಂ
ಮುರ್ದುಂ ಗುರ್ದುಂ ಸಮಂತು ತಿರ್ದುಂ ಪರ್ದುಂ ।
ಗರ್ದುಱಿಮುರ್ದಿದುದೆನೆಯುಂ
ಗರ್ದೆಯುಮಾ ಗುರ್ದೆಯುಂ ಸರೇಫಪದಂಗಳ್ ॥37॥

ಪದಚ್ಛೇದಂ.—ಉರ್ದುಂ, ಬಿರ್ದುಂ, ತರ್ದುಂ, ಮುರ್ದುಂ, ಗುರ್ದುಂ; ಸಮಂತು ತಿರ್ದುಂ, ಪರ್ದುಂ, ಗರ್ದುಱಿಂ, ಉರ್ದಿಸುದು ಎನೆಯುಂ, ಗರ್ದೆಯುಂ, ಆ ಗುರ್ದೆಯುಂ ಸರೇಫಪದಂಗಳ್.

ಯಥಾನ್ವಯಂ. ಟೀಕು.—ಉರ್ದುಂ=ಉರ್ದೆಂದುಂ; ಬಿರ್ದುಂ=ಬಿರ್ದೆಂದುಂ; ತರ್ದುಂ=ತರ್ದೆಂದುಂ; ಮುರ್ದುಂ=ಮುರ್ದೆಂದುಂ; ಗುರ್ದುಂ=ಗುರ್ದೆಂದುಂ; ಸಮಂತು=ಹಾಂಗೆ; ತಿರ್ದುಂ=ತಿರ್ದೆಂದುಂ; ಪರ್ದುಂ=ಪರ್ದೆಂದುಂ; ಗರ್ದುಱಿಂ=ಗರ್ದುಱೆಂದುಂ; ಉರ್ದಿದುದೆನೆಯುಂ=ಉರ್ದಿದುದು ಎಂದೊಡೆಯುಂ; ಗರ್ದೆಯುಂ=ಗರ್ದೆ ಎಂದುಂ; ಆ ಗುರ್ದೆಯುಂ=ಆ ಪ್ರಸಿದ್ಧವಾದ ಗುರ್ದೆ ಎಂದುಂ; ಸರೇಫಪದಂಗಳ್=ರೇಫೆಯೊಡನೆ ಕೂಡಿದ ಪದಂಗಳೆನಿಸುವುವು.

## ಸೂತ್ರಂ.

Further words of the same character.

ನುರ್ಗಿದುದೆನೆ ತರ್ಗಿದುದೆನೆ
ಕಿರ್ಗಿದುದೆನೆ ಜರ್ಗುವಿಬ್ಬಿದೆನೆ ಪೆರ್ಗತ್ತಾ |
ವೊರ್ಗಾದರ್ಪೆರ್ಗಳವೆನೆ
ಕುರ್ಗಿದುದೆನೆ ಮಾರ್ಗದೊಳ್ಸರೇಫಪದಂಗಳ್ ||38||

ಪದಚ್ಛೇದಂ.—ನುರ್ಗಿದುದು ಎನೆ, ತರ್ಗಿದುದು ಎನೆ, ಕಿರ್ಗಿದುದು ಎನೆ, ಜರ್ಗುವಿಬ್ಬಿದು ಎನೆ, ಪೆರ್ಗತ್ತು, ಆ ಒರ್ಗಾದರ್, ಪೆರ್ಗಳವು ಎನೆ, ಕುರ್ಗಿದುದು ಎನೆ, ಮಾರ್ಗದೊಳ್ ಸರೇಫಪದಂಗಳ್.

ಯಥಾನ್ವಯಂ. ಟೀಕು.—ಇವೆಲ್ಲಂ ಮಾರ್ಗದೊಳ್ ಸರೇಫಪದಂಗಳೆಂಬುದರ್ಥಂ.

## ಸೂತ್ರಂ.

Further words of a similar character including, however, three terms with a long penultimate.

ಇರ್ಪುಂ ತೋರ್ಪುಂ ಕೆರ್ಪುಂ
ನೆರ್ಪು ಪೆರ್ಪಿಯುಮಡರ್ಪುಮಾರ್ಪುಂ ಕೂರ್ಪುಂ |
ಪರ್ಪರಿಕೆಯುಮೆರ್ಪುಂ ವ್ಯೈ
ಯ್ಗರ್ಪುಂ ಮೊದಲಾಗಿ ರೇಫಸಂಯೋಗಂಗಳ್ ||39||

ಪದಚ್ಛೇದಂ.—ಇರ್ಪುಂ, ತೋರ್ಪುಂ, ಕೆರ್ಪುಂ, ನೆರ್ಪುಂ, ಪೆರ್ಪಿಯುಂ, ಅಡರ್ಪುಂ, ಆರ್ಪುಂ, ಕೂರ್ಪುಂ, ಪರ್ಪರಿಕೆಯುಂ, ಎರ್ಪುಂ, ವ್ಯೈಯ್ಗರ್ಪುಂ ಮೊದಲ್ ಆಗಿ ರೇಫಸಂಯೋಗಂಗಳ್.

ಯಥಾನ್ವಯಂ. ಟೀಕು.—ಇರ್ಪು ಮೊದಲಾದ ಶಬ್ದಂಗಳ್ ರೇಫೆಯೊಡನೆ ಕೂಡಿದ ಪದಂಗಳೆಂಬುದರ್ಥಂ.

## ಸೂತ್ರಂ.

Words having a long penultimate-vowel with Rêpha.

ಆರ್ದಂ ಸಾರ್ದಂ ಪೋರ್ದಂ
ತೀರ್ದಂ ಪಾರ್ದಂ ಸಮಂತು ಪೇರ್ದಂ ಕಾರ್ದಂ |
ನೇರ್ದಂ ಬಾರ್ದಂ ಗೋರ್ದಂ
ಸೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ ||40||

ಪದಚ್ಛೇದಂ.— ಆರ್ದಱಂ, ಸಾರ್ದಱಂ, ಪೋರ್ದಱಂ, ತೀರ್ದಱಂ, ಪಾರ್ದಱಂ; ಸಮಂತು ಪೀರ್ದಱಂ, ಕಾರ್ದಱಂ, ನೇರ್ದಱಂ, ಬಾರ್ದಱಂ, ಗೋರ್ದಱಂ, ಸೋರ್ದಱಂ ತಾಂ ಎಂದೊಂದಂ ಗುರೂಪಧೆ ಇನಿತುಂ.

ಅನ್ವಯಂ.— ಸೋರ್ದಱಂ ಎಂದೊಡಂ ತಾಂ ಇನಿತುಂ ಗುರೂಪಧೆ. ಉೞಿದವು ಯಥಾನ್ವಯಂ.

ಟೀಕು.— ಸೋರ್ದಱಂ ಎಂದೊಡಂ ತಾಂ ಇನಿತು ಶಬ್ದಂಗಳುಂ ಗುರೂಪಧೆ, = ಗುರುವಾದುಪಧೆ, ಎಂಬುದರ್ಥಂ.

ವಿಚಾರಂ.— ಉಪಧೆಯೆಂದೊಡೆ ವ್ಯಾಕರಣಂಗಳಲ್ಲಿ — ‖ ಅಂತ್ಯಾತ್ ಪೂರ್ವಮ್ ಉಪಧಾ ‖ ಎಂಬ ಸಂಜ್ಞಾಸೂತ್ರದಿಂ[1] — ಅಂತ್ಯದತ್ತಣಿಂ ಮೊದಲುಪಧೆಯು ಎಂದಱಿ!

## ಸೂತ್ರಂ.

Further words of such a character.

ಊರ್ಗೞ್ಕೇರ್ಗೞ್ಬೇರ್ಗ
ೞ್ನಾರ್ಗೞ್ತೇರ್ಗೞ್ನೆಗೞ್ತೆಯಾರ್ಗೞ್ಕೂರ್ಗ |
ೞ್ಸೇರ್ಗೞ್ಪೀರ್ಗೞ್ತಾರ್ಗ
ೞ್ಸೂರ್ಗೞ್ಕಾರ್ಗೞ್ಗುರೂಪಧಾರ್ಥಮೆನಿಕ್ಕುಂ ‖ 41 ‖

ಪದಚ್ಛೇದಂ.— ಊರ್ಗೞ್, ಕೇರ್ಗೞ್, ಬೇರ್ಗೞ್, ನಾರ್ಗೞ್, ತೇರ್ಗೞ್, ನೆಗೞ್ತೆಯ ಆರ್ಗೞ್, ಕೂರ್ಗೞ್, ಸೇರ್ಗೞ್, ಪೀರ್ಗೞ್, ತಾರ್ಗೞ್, ಸೂರ್ಗೞ್, ಕಾರ್ಗೞ್ ಗುರೂಪಧಾರ್ಥಂ ಎನಿಕ್ಕುಂ.

ಟೀಕು.— ಇವೆಲ್ಲಂ ಗುರೂಪಧಾರ್ಥಂಗಳೆಂಬುದರ್ಥಂ.

## ಸೂತ್ರಂ.

Slack double consonants (ಶಿಥಿಲದ್ವಿತ್ವಂಗಳ್) often occur in the (Nominative) Plural

ಪಿಂತಮರ್ದಿರೆ ೞಟಿಕುಳರೇ
ಫಾಂತಂ ಹ್ರಸ್ವಾದಿಲಿಂಗಮಂತವು ಗಳ್ಮೇ |
ಣಂತೆ ಚತುರ್ಥಿಯ ಗೆಯೆ ಮೇ
ಣ್ಮಂತಮರ್ದಿರೆ ಪಿರಿದುಮೊದವುಗುಂ ಶಿಥಿಲತ್ವಂ ‖42‖

formed with ಗಳ್ and Dative Singular formed with ಗೆ (which is also the case-affix for the Dative Plural) of nominal bases with short penultimate which end either in ೞ್ or ಳ್ or ಱ. This ಱ may also be a substitute (ಆದೇಶಂ) for ೞ್.

1) ಅಂತ್ಯಾದ್ ವರ್ಣಾತ್ ಪೂರ್ವ ಉಪಧಾ ಎಂತ, ವಾಜಸನೇಯಿಪ್ರಾತಿಶಾಖ್ಯದೊಳುಂಟು (1, 35), also Pâṇini I, 1, 65.

ಪದಚ್ಛೇದಂ.—ಪಿಂತೆ ಅಮರ್ದು ಇರೆ ಱಱಕುಳರೇಫಾಂತಂ ಹ್ರಸ್ವಾದಿಲಿಂಗಂ ಅಂತು ಅವು, ಗಳ್ ಮೇಣ್ ಅಂತೆ ಚತುರ್ಥಿಯ ಗೆಯೆ ಮೇಣ್ ಮುಂತೆ ಅಮರ್ದು ಇರೆ ಪಿರಿದುಂ ಒದಗುವುಂ ಶಿಥಿಲತ್ವಂ.

ಅನ್ವಯಂ.—ಹ್ರಸ್ವಾದಿಲಿಂಗಂ ಱಱಕುಳರೇಫಾಂತಂ ಪಿಂತೆ ಅಂತು ಅವು ಅಮರ್ದಿರೆ, ಮೇಣ್ ಗಳ್ ಅಂತೆ ಮೇಣ್ ಚತುರ್ಥಿಯ ಗೆಯೆ ಮುಂತೆ ಅಮರ್ದಿರೆ, ಪಿರಿದುಂ ಶಿಥಿಲತ್ವಂ ಒದವುಗುಂ.

ಟೀಕು.—ಹ್ರಸ್ವಾದಿಲಿಂಗಂ = ಹ್ರಸ್ವಾದಿಲಿಂಗಂಗಳಾದ; ಱಱಕುಳರೇಫಾಂತಂ = ಱಱಾಂತ ಕುಳಾಂತ ರೇಫಾಂತಂಗಳಾದ ಶಬ್ದಂಗಳ್; ಪಿಂತೆ = ಹಿಂದುಗಡೆಯಲ್ಲಿ; ಅಂತು = ಹಾಂಗೆ; ಅವು = ಆ ಶಬ್ದಂಗಳ್; ಅಮರ್ದಿರೆ = ಪೊರ್ದುಗೆಯಾಗಿ ಇರೆ; ಮೇಣ್ = ವಿಕಲ್ಪದಿಂದೆ; ಗಳ್ = ಬಹುವಚನದಗಳಾಗಮಂ; ಅಂತೆ = ಹಾಂಗೆ; ಮೇಣ್ = ಅದಲ್ಲದೆ; ಚತುರ್ಥಿಯ = ಚತುರ್ಥೀವಿಭಕ್ತಿಯ; ಗೆಯೆ = ಗೆಕಾರಂ; ಮುಂತೆ = ಮುಂದುಗಡೆಯಲ್ಲಿ; ಅಮರ್ದಿರೆ = ಪೊರ್ದುಗೆಯಾಗಿರೆ; ಪಿರಿದುಂ = ಬಹುಳಮಾಗಿಯುಂ; ಶಿಥಿಲತ್ವಂ = ಶಿಥಿಲಮಪ್ಪತನಂ; ಒದವುಗುಂ = ಪ್ರಾಪ್ತಿಸುವುದು.

ವೃತ್ತಿ.—ಪೆಱಗಣ ಮೈಯೊಳ್ ಲಘು ಮೊದಲಾಗಿರ್ದ ಱಱಕುಳರೇಫಾಂತಂಗಳಪ್ಪಲಿಂಗಂಗಳಿರೆ, ಮುಂದೆ ಗಳ್ ಅಕ್ಕೆ, ಮೇಣ್ ಚತುರ್ಥಿಗಾದ ಗೆಕಾರಮಕ್ಕೆ, ಶೈಥಿಲ್ಯಮಕ್ಕುಂ.

ಪ್ರಯೋಗಂ.—ಱಱಾಂತಕ್ಕೆ—ಅಗಱ್ಗಳ್, ಎಸಱ್ಗಳ್, ನೆಗಱ್ಗಳ್ ಎಂದೊಡೆ ಜಲಚರಂಗಳ್, ಉಗುಱ್ಗಳ್; ಅಗಱ್ಗೆ, ಎಸಱ್ಗೆ, ನೆಗಱ್ಗೆ ಉಗುಱ್ಗೆ.

ಆದಿ ದೀರ್ಘಮಾದೊಡಂ ಗುರುವಾದೊಡಂ ಶಿಥಿಲಮಿಲ್ಲ—ಬಾಸುಱ್ಗಳ್, ಇಕ್ಕುಱ್ಗಳ್, ಪೊಕ್ಕುಱ್ಗಳ್; ಬಾಸುಱ್ಗೆ, ಇಕ್ಕುಱ್ಗೆ, ಪೊಕ್ಕುಱ್ಗೆ.

ಕುಳಾಂತಕ್ಕೆ—ಮುಗುಳ್ಗಳ್, ಪುಗುಳ್ಗಳ್, ಅಮುಳ್ಗಳ್, ಸಯುಗುಣವಿಕ್ರಮದಮುಳ್ಗಳ್, ಎಸಳ್ಗಳ್ ಎಂದೊಡೆ ಪೂವಿಸವು; ಮುಗುಳ್ಗೆ, ಪುಗುಳ್ಗೆ, ಅಮುಳ್ಗೆ, ಎಸಳ್ಗೆ.

ಪಿರಿದುಂ ಎಂಬುದಱಿಂ ಕೆಲವೆಡೆಯೊಳ್ ಶಿಥಿಲಮಿಲ್ಲದುದರ್ಕೆ—ಕುರುಳ್ಗಳ್, ಪುರುಳ್ಗಳ್, ಮರುಳ್ಗಳ್; ಕುರುಳ್ಗೆ ಇತ್ಯಾದಿ.

ರೇಫಾಂತಕ್ಕೆ—ಕನರ್ಗಳ್, ಕೊನರ್ಗಳ್, ತಳಿರ್ಗಳ್, ಕುಳಿರ್ಗಳ್, ಲರ್ಗಳ್, ಎಲರ್ಗಳ್, ಉಗುರ್ಗಳ್, ಪೊಗರ್ಗಳ್, ಒಗರ್ಗಳ್, ಚಿಗುರ್ಗಳ್ ಬಿದಿರ್ಗಳ್, ಕದಿರ್ಗಳ್, ಕುದಿರ್ಗಳ್, ತಮರ್ಗಳ್, ತಿಮಿರ್ಗಳ್, ತೆಮರ್ಗಳ್, ಬೆಮರ್ಗಳ್, ಬೆಮರ್ಗಳನೂದಿ ನುಣ್ಣೊಡೆಗಳಂ ಪಿಡಿ ಕೆಯ್ಸಿ, ಎಸರ್ಗಳ್.

ವೊಸರ್ಗೞ್, ಒಸರ್ಗೞ್, ಉಸಿರ್ಗೞ್, ಪಸುರ್ಗೞ್, ನವಿರ್ಗೞ್; ಕಸರ್ಗೆ, ನವಿರ್ಗೆ, ನಡೆದುದು ತಲೆನವಿರ್ಗೂಟಂ, ಇತ್ಯಾದಿ.

ಱಕಾರಾದೇಶರೇಫೆಗಂ ಶಿಥಿಲತ್ವಂ—ಅಳಿರ್ಗೞ್, ಕೆಸರ್ಗೞ್, ಬಸಿರ್ಗೞ್, ಪೆಸರ್ಗೞ್, ಹಗರ್ಗೞ್, ಎಡರ್ಗೞ್ ಆವೆಡರ್ಗೞುಮಂ ತಿರ್ದುವೊಂದು ಕೋಡುಂ, ಪೆಂಪುಂ, ಅಳಿರ್ಗೆ ಇತ್ಯಾದಿ[1]. ಪಿರಿದುಮೆಂಬುದಱಿಂದೆ ಕಾದಲರ್ಗೞೆಂಬ ಪದನ ಆದಿ ದೀರ್ಘಮಾಗಿಯುಂ ಶಿಥಿಲಮಾಯ್ತು.

## ಸೂತ್ರಂ.

Also in Compounds (ಸಮಾಸಂ) slack double consonants occur when ಗ, ದ, ವ, ಜ are preceded by words with short penultimate which terminate either in ರ್ or ಳ್.

ಗದವಜಕಾರಮವಿದಿರಿರೆ
ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ।
ಪುದಿಯೆ ಲಘೂಪಧೆಕೆಲಕೆಲ
ವೊದವಿರ್ಕುಂ ರಾಂತಳಾಂತಮವು ಶಿಥಿಲತೆಯುಂ ॥ 43 ॥

ಪದಚ್ಛೇದಂ.—ಗದವಜಕಾರಂ ಅವು ಇದಿರ್ ಇರೆ, ಪದಮಧ್ಯಂ ವಿಷಯಂ ಆಗೆ ಅನೇಕಾಕ್ಷರದೊಳ್ ಪುದಿಯೆ, ಲಘೂಪಧೆ ಕೆಲ ಕೆಲವು ಒದವಿ ಇರ್ಕುಂ ರಾಂತಳಾಂತಂ ಅವು ಶಿಥಿಲತೆಯುಂ.

ಅನ್ವಯಂ.—ಪದಮಧ್ಯಂ ವಿಷಯಂ ಆಗೆ, ಗದವಜಕಾರಂ ಅವು ಇದಿರಿರೆ, ಅನೇಕಾಕ್ಷರದೊಳ್ ಪುದಿಯೆ, ಲಘೂಪಧೆ ಕೆಲ ಕೆಲವು ರಾಂತಳಾಂತಂ ಅವು ಶಿಥಿಲತೆಯುಂ ಒದವಿರ್ಕುಂ.

ಟೀಕು.—ಪದಮಧ್ಯಂ = ಸಮಾಸಮಧ್ಯಂ; ವಿಷಯಂ = ಪ್ರಯೋಜನಂ; ಆಗೆ = ಆಗೆ; ಗದವಜಕಾರಂ = ಗಕಾರ, ದಕಾರ, ವಕಾರ, ಜಕಾರಂಗಳ್; ಅವು = ಅವು; ಇದಿರಿರೆ = ಮುಂದಿರೆ; ಅನೇಕಾಕ್ಷರದೊಳ್ = ಅನೇಕಾಕ್ಷರದಲ್ಲಿ; ಪುದಿಯೆ = ಪ್ರವೇಶವಾಗೆ; ಲಘೂಪಧೆ = ಲಘುವೆ ಉಪಧೆಯಾದ; ಕೆಲ ಕೆಲವು = ಹಲವು ಕೆಲವು; ರಾಂತಳಾಂತಂ = ರೇಫಾಂತಳಕಾರಾಂತಶಬ್ದಂಗಳ್; ಅವು = ಅವು ಶಿಥಿಲತೆಯಂ = ಶಿಥಿಲತ್ವಮಂ; ಒದವಿರ್ಕುಂ = ಪ್ರಾಪ್ತಿಯಾಗಿರ್ಪುವು.

ವೃತ್ತಿ.—ಮುಂತೆ ಗದವಜಕಾರಂಗಳಿರೆ, ಪೆಱಗಣ ಮೈಯೊಳು ರಾಂತಳಾಂತಗಳ್, ಸಮಾಸಮಧ್ಯವೆ ವಿಷಯಮಾಗಿ, ಪಲವಕ್ಕರಂಗಳೊಳ್ಕೂಡಿ ಲಘೂಪಧೆಯಾಗಿ ನಿಲೆ, ಆ ರಾಂತ ಳಾಂತಂಗಳ್ಗೆ ಶಿಥಿಲತ್ವಮಕ್ಕುಂ.

1) The bases of these words in the Singular are: ಅಳಿಱ್, ಕೆಸಱ್, ಬಸಿಱ್, ಪೆಸಱ್, ಹಗಱ್, ಪೆಡಱ್.

ಪ್ರಯೋಗಂ.—ರಾಂತಕ್ಕೆ—ಕುಳಿರ್ಗಾಳಿ; ಬೆಳರ್ಗೆಂಪು; ತಳಿರ್ದೋರಣಂ; ಅಲರ್ದೋರಣಂ; ಅಲರ್ದೋಟಂ; ಬಿದಿರ್ದಟ್ಟಿ, ಪೊಗರ್ವಟ್ಟೆ; ಬೆಮರ್ವನಿ; ಅಲರ್ಜೊಂಪಂ; ಕದಿರ್ಜೊನ್ನಂ.

ಳಾಂತಕ್ಕೆ—ಮುಗುಳ್ಗಾಯ್; ಅನುಳ್ದೊಂಗಲ್; ಎಸಳ್ವಸೆ; ಅಮಳ್ಜಂತ್ರಂ.

## ಸೂತ್ರಂ.

Further in conjugating verbs which end in ೞ್, ಳ್, ಱ್ or ರ್ and the first syllable of which is short, slack double consonants occur viz. before the affixes ದ, ದಪ, ವ, ಗೆ, ಗುಂ.

ಪುಗೆ ದದಪವಕಾರಂ ವಿಧಿ
ಯ ಗೆಕಾರಂ ವರ್ತಮಾನಕಾಲದ ಗುಂ ಧಾ
ತುಗೆ ೞಳಱರೇಫಾಂತ
ಕ್ಕೊಗೆಗುಂ ಶಿಥಿಲತ್ವಮಗುರುಪೂರ್ವಸ್ಥಿತಿಯಿಂ || 44 ||

ಪದಚ್ಛೇದಂ.—ಪುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನಕಾಲದ ಗುಂ ಧಾತುಗೆ, ೞಳಱರೇಫಾಂತಕ್ಕೆ ಒಗೆಗುಂ ಶಿಥಿಲತ್ವಂ ಅಗುರುಪೂರ್ವಸ್ಥಿತಿಯಿಂ.

ಅನ್ವಯಂ.—ಅಗುರುಪೂರ್ವಸ್ಥಿತಿಯಿಂ ೞಳಱರೇಫಾಂತಕ್ಕೆ, ಧಾತುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನಕಾಲದ ಗುಂ ಪುಗೆ, ಶಿಥಿಲತ್ವಂ ಒಗೆಗುಂ.

ಟೀಕು.—ಅಗುರುಪೂರ್ವಸ್ಥಿತಿಯಿಂ = ಲಘು ಮೊದಲಾಗಿರ್ಪುದಱಿಂದೆ; ೞಳಱರೇಫಾಂತಕ್ಕೆ = ೞಕಾರಾಂತ ಳಕಾರಾಂತ ರೇಫಾಂತಗಳಾದ; ಧಾತುಗೆ = ಧಾತುಗಳ್ಗೆ; ದದಪವಕಾರಂ = ದಕಾರ ದಪಕಾರ ವಕಾರಂಗಳ್; ವಿಧಿಯ = ವಿಧ್ಯರ್ಥದ; ಗೆಕಾರಂ = ಗೆ ಎಂಬಕ್ಷರಂ; ವರ್ತಮಾನಕಾಲದ = ವರ್ತಮಾನಕಾಲಾರ್ಥದ; ಗುಂ = ಗುಂಕಾರಂ; ಪುಗೆ = ಪ್ರವೇಶಮಾಗೆ; ಶಿಥಿಲತ್ವಂ = ಶಿಥಿಲಮಪ್ಪತನಂ; ಒಗೆಗುಂ = ಪುಟ್ಟುಗುಂ.

ವೃತ್ತಿ.—ಹ್ರಸ್ವಾದಿಗಳಪ್ಪ ೞಳಱರೇಫಾಂತಂಗಳಪ್ಪನೇಕಾಕ್ಷರಧಾತುಗಳ್ಗೆ ಭೂತವರ್ತಮಾನಭವಿಷ್ಯಂತಿಗಾದ || ದ || || ದಪ || || ವ || ಎಂಬಿವು ಪರಮಾದೊಡಂ, ಪ್ರಥಮಪುರುಷದ ವಿಧ್ಯರ್ಥದೊಳಾದ || ಗೆ || ಎಂಬುದು ಪರಮಾದೊಡಂ, ಪ್ರಥಮಪುರುಷದ ವರ್ತಮಾನಭವಿಷ್ಯಂತಿಗಾದ || ಗುಂ || ಎಂಬುದು ಪರಮಾದೊಡಂ, ಕ್ರಿಯಾಪದದೊಳ್ ಶಿಥಿಲತ್ವಮು ನೈದುವ್ರವು.

ಪ್ರಯೋಗಂ.—ಱಿಱಾಂತಂಗಳದ ದಪ ವಂಗಳ್ಗೆ—ಜಗುೞ್ದಿಂ, ಅಗುೞ್ದಿಂ, ಪೊಗೞ್ದಿಂ, ತೆಗೞ್ದಿಂ, ನೆಗೞ್ದಿಂ, ತುಮುೞ್ದಿಂ; ಜುಗುೞ್ದಿಪಂ ಇತ್ಯಾದಿ; ಜಗುೞ್ವಿಂ ಇತ್ಯಾದಿ.

ಗೆಕಾರಕ್ಕೆ—ತೆಗೞ್ಗೆ, ನೆಗೞ್ಗೆ, ಪೊಗೞ್ಗೆ ಎಂಬಂತಱಿವುದು.

ಗುಂ ಎಂಬುದರ್ಕೆ—ತೆಗೞ್ಗುಂ, ನೆಗೞ್ಗುಂ, ಪೊಗೞ್ಗುಂ ಎಂಬಂತುೞಿದುವರ್ಕೆಲ್ಲಂ ಪತ್ತಿಸುಗುಂ.—

ಕುಳಾಂತಕ್ಕೆ—ಸುಸುಳ್ದಂ, ಮಸುಳ್ದಂ, ಸುಗುಳ್ದಂ; ಮಸುಳ್ದಪಂ ಇತ್ಯಾದಿ; ಮಸುಳ್ವಂ ಇತ್ಯಾದಿ.

ಗೆಕಾರಕ್ಕೆ—ನುಸುಳ್ಗೆ, ಮಸುಳ್ಗೆ ಎಂಬಂತೆ.

ಗುಂ ಎಂಬುದರ್ಕೆ—ನುಸುಳ್ಗುಂ, ಮಸುಳ್ಗುಂ ಎಂಬಂತೆ ಮಾೞ್ಪುದು.—

ತೆರಳ್ದಂ, ಪೊರಳ್ದಂ ಎಂಬಂತೆ ಕೆಲಕೆಲವೆಡೆಯೊಳ್ ಶಿಥಿಲತ್ವಮುಂ ದ್ವಿತ್ವಮುಮುಂಟು.—

ರೇಫಾಂತಕ್ಕೆ—ತೊಡರ್ದಂ, ತಳರ್ದಂ, ಕೆಳರ್ದಂ, ಎಡರ್ದಂ, ಅಳರ್ದಂ, ಅದಿರ್ದ, ಬಿದಿರ್ದಂ, ಅಮರ್ದಂ, ನಿಮಿರ್ದಂ; ನಿಮಿರ್ದಪಂ; ನಿಮಿರ್ವನೆಂಬಂತೆಲ್ಲಕ್ಕಂ ಪತ್ತಿಸುವುದು.

ಗೆಕಾರಕ್ಕೆ—ತೊಡರ್ಗೆ, ಅದಿರ್ಗೆ, ಬಿದಿರ್ಗೆ, ಎಡರ್ಗೆ ಎಂಬಂತೆ.

ಗುಂ ಎಂಬುದರ್ಕೆ—ಅಮರ್ಗುಂ, ನಿಮಿರ್ಗುಂ ಎಂಬಂತೆ.—

ದೀರ್ಘಾದಿಗೆ ಶಿಥಿಲತ್ವಮಿಲ್ಲ—ಆರ್ದಂ, ಸಾರ್ದಂ, ಪಾರ್ದಂ, ಸೋರ್ದಂ, ನೇರ್ದವೆಂಬಂತೆ.—

ಸೂತ್ರಂ.

Slack double consonants also inherent in some few words.

ಬರ್ದಿಲಂ ಸಗ್ಗಕ್ಕೆ ಪೆಸ
ರ್ಗದಗೆಸೆವಮುರ್ದುವಳ್ಳಿ ಕಂಪಲರ್ದುದೆನ |
ಲ್ಕೆರ್ದೆವಾಯದಿವರ್ುತ್ತೆ ಪೊದ
ೞ್ದಿರ್ದೆಯೆಂಬವು ಸಹಜಶಿಥಿಲವೃತ್ತಿಯನಾಳ್ಗುಂ ||45||[1]

[1] The Mûḍabidar M. S. and another one read ಕಂಪಲರ್ದುದೆನಲ್ ಗೆರ್ದೆವಾಯ್.

ಪದಚ್ಛೇದಂ.—ಬರ್ದಿಲಂ ಸಗ್ಗಕ್ಕೆ ಪೆಸಱ್, ಗರ್ದುಗು, ಎಸೆವ ಅಮರ್ದುವಳ್ಳಿ ಕಂಪಲದುರ್ದು ಎನಲ್ಕೆ, ಎರ್ದೆವಾಯ್, ಅದಿಮುತ್ತೆ, ಪೊದಟ್ಟಿ ಎರ್ದೆ ಎಂಬಿವು ಸಹಜಶಿಥಿಲವೃತ್ತಿಯಂ ಆಳ್ಗುಂ.

ಯಥಾನ್ವಯಂ. ಟೀಕು.—ಬರ್ದಿಲಂ=ಬರ್ದಿಲವೆಂದು; ಸಗ್ಗಕ್ಕೆ=ಸ್ವರ್ಗಕ್ಕೆ; ಪೆಸರ್=ಹೆಸರ್; ಗರ್ದುಗು=ಗರ್ದುಗು ಎಂದು; ಎಸೆವ=ಒಪ್ಪುವ; ಅಮರ್ದುವಳ್ಳಿ=ಅಮರ್ದುವಳ್ಳಿಯೆಂಗು; ಕಂಪಲದುರ್ದು=ಕಂಪಲದುರ್ದು ಎಂದು; ಎನಲ್ಕೆ=ಪೇಟಿಲ್ಕೆ; ಎರ್ದೆವಾಯ್=ಎರ್ದೆವಾಯೆಂದು; ಅದಿಮುರ್ತ್ತೆ=ಅದಿಮುರ್ತ್ತೆಯೆಂದು; ಪೊದಟ್ಟಿ=ಪ್ರಸಿದ್ಧಿವಡೆದ; ಎರ್ದೆ=ಎರ್ದೆಯೆಂದು; ಎಂಬಿವು=ಎಂಬೀ ಶಬ್ದಂಗಳ್; ಸಹಜಶಿಥಿಲವೃತ್ತಿಯಂ=ಸಹಜವಾದ ಶಿಥಿಲದ ವೃತ್ತಿಯಂ; ಆಳ್ಗುಂ=ತಾಳ್ವುವು.

ವೃತ್ತಿ.—ಇದರ್ಕಿದೆ ವೃತ್ತಿ.

## ಸೂತ್ರಂ.

Elision (ಲೋಪಂ) of the last letter (ವು) in certain nouns.

ಸರವುಂ ನೆರವುಂ ದೇವರ
ಬರವುಂ ತೆರವುಂ ನೆಗೞ್ತೆಯೆೞ್ತಿರವುಂ ಸಂ |
ಚರಿಸುವ ನೊಳವುಂ ತಾಮರೆ
ಬರ ಮತದಿಂದಂತ್ಯವರ್ಣಲೋಪಮನಾಳ್ಗುಂ ‖ 46 ‖

ಪದಚ್ಛೇದಂ.—ಸರವುಂ, ನೆರವುಂ, ದೇವರ ಬರವುಂ, ತೆರವುಂ, ನೆಗೞ್ತೆಯ ಎೞ್ತಿರವುಂ, ಸಂಚರಿಸುವ ನೊಳವುಂ ತಾಂ ಅರೆಬರ ಮತದಿಂದೆ ಅಂತ್ಯವರ್ಣಲೋಪಮಂ ಆಳ್ಗುಂ.

ಯಥಾನ್ವಯಂ. ಟೀಕು.—ಸರವುಂ=ಸರವು ಎಂಬ ಶಬ್ದಮುಂ; ನೆರವುಂ=ನೆರವು ಎಂಬ ಶಬ್ದಮುಂ; ದೇವರ ಬರವುಂ=ದೇವರ ಬರವು ಎಂಬ ಶಬ್ದಮುಂ; ತೆರವುಂ=ತೆರವು ಎಂಬ ಶಬ್ದಮುಂ; ನೆಗೞ್ತೆಯ=ಪ್ರಸಿದ್ಧಿಯ; ಎೞ್ತಿರವುಂ=ಎೞ್ತಿರವು ಎಂಬ ಶಬ್ದಮುಂ; ಸಂಚರಿಸುವ ನೊಳವುಂ=ಸಂಚಾರವ ಮಾಡ್ಪ ನೊಳವು ಎಂಬ ಶಬ್ದಮುಂ; ತಾಂ=ತಾಂ; ಅರೆಬರ=ಕೆಲಂಬರ; ಮತದಿಂದೆ=ಮತದಿಂದೆ; ಅಂತ್ಯ=ಕಡೆಯಣ; ವರ್ಣ=ಅಕ್ಷರದ; ಲೋಪಮಂ=ಅದರ್ಶನಮಂ; ಆಳುಂ=ತಾಳ್ಗುಂ.

ವೃತ್ತಿ.—ಈ ಪದಂಗಳ ಕಡೆಯ ವಕಾರಕ್ಕೆ ವಿಕಲ್ಪದಿಂ ಲೋಪಮುಂಟು.

ಪ್ರಯೋಗಂ.—ಸರವು=ಸರಂ; ನೆರಂ, ಬರಂ, ಎೞ್ತಿರಂ, ನೊಳಂ ಎಂದಱಿವುದು.

## ಸೂತ್ರಂ.

Elision of the last letter in ಅಲ್ಲದೆ when it is emphasizing, and its non-elision in ಅಲ್ಲದು (ಅಲ್ತು) when it is denying (or, with ಎ, questioning).

ಪುದಿಗುಂ ನಿರ್ಧಾರಣದ
ಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪಂ |
ಪುದಿಯದು ಲೋಪಂ ಪ್ರತಿಷೇ
ಧದೊಳಲ್ಲದುವೆಂಬ ಪದಮನಲ್ತೆನಲಕ್ಕುಂ || 47 ||

ಪದಚ್ಛೇದಂ.—ಪುದಿಗುಂ ನಿರ್ಧಾರಣದ ಅಲ್ಲದೆ ಎಂಬ ದೆಕಾರದ ಎಡೆಗೆ ಪಿರಿದುಂ ಲೋಪಂ; ಪುದಿಯದು ಲೋಪಂ ಪ್ರತಿಷೇಧದೊಳ್; ಅಲ್ಲದು ಎಂಬ ಪದಮಂ ಅಲ್ತು ಎನಲ್ ಅಕ್ಕುಂ.

ಅನ್ವಯಂ.—ನಿರ್ಧಾರಣದ ಅಲ್ಲದೆ ಎಂಬ ದೆಕಾರದ ಎಡೆಗೆ ಪಿರಿದುಂ ಲೋಪಂ ಪುದಿಗುಂ; ಪ್ರತಿಷೇಧದೊಳ್ ಲೋಪಂ ಪುದಿಯದು; ಅಲ್ಲದು ಎಂಬ ಪದಮಂ ಅಲ್ತು ಎನಲ್ ಅಕ್ಕುಂ.

ಟೀಕು.—ನಿರ್ಧಾರಣದ = ನಿರ್ಧಾರಣಾರ್ಥದ; ಅಲ್ಲದೆಯೆಂಬ ದೆಕಾರದ = ಅಲ್ಲದೆ ಎಂದು ಪೇೞ್ವ ದೆಕಾರದ; ಎಡೆಗೆ = ಸ್ಥಾನಕ್ಕೆ; ಪಿರಿದುಂ = ವಿಶೇಷವಾಗಿಯುಂ; ಲೋಪಂ = ಅದರ್ಶನಂ; ಪುದಿಗುಂ = ಪ್ರವೇಶವಾಗುವುದು; ಪ್ರತಿಷೇಧದೊಳ್ = ಪ್ರತಿಷೇಧದಲ್ಲಿ; ಲೋಪಂ = ಅದರ್ಶನಂ; ಪುದಿಯದು = ಪ್ರವೇಶವಾಗದು; ಅಲ್ಲದುವೆಂಬ ಪದಮಂ = ಅಲ್ಲದು ಎಂದು ಪೇೞ್ವ ಪದವಂ; ಅಲ್ತೆನಲ್ = ಅಲ್ತು ಎಂದು ಹೇೞಲ್; ಅಕ್ಕುಂ = ಅಪ್ಪುದು.

ವೃತ್ತಿ.—ನಿರ್ಧಾರಣಾರ್ಥಮಂ ಪೇೞ್ವ ಅಲ್ಲದೆಯೆಂಬ ಶಬ್ದದ ದೆಕಾರಕ್ಕೆ ವಿಕಲ್ಪದಿಂ ಲೋಪಮುಂಟು; ಅಲ್ಲದುವೆಂಬ ಪ್ರತಿಷೇಧದೊಳ್ ದುಕಾರಕ್ಕೆ ಲೋಪಮಾಗಲ್ಲೆನಲಾಗದು. ಅಲ್ಲದು ಎಂಬುದನಲ್ತೆಂದು ವಿಕಲ್ಪದಿನೆನಲಕ್ಕುಂ, ಅದರ್ಕೆ ಲಿಂಗವಚನವ್ಯವಸ್ಥೆಯಿಲ್ಲ.

ಪ್ರಯೋಗಂ.—ದೆಕಾರಲೋಪಕ್ಕೆ—ಗೊರವನಲ್ಲದೆ ಪೊಗೞೆನೆಂಬಲ್ಲಿ ಗೊರವನಲ್ಲ ಪೊಗೞೆನೆಂದುಂಟು.

ಪ್ರತಿಷೇಧದೊಳ್ ಲಿಂಗತ್ರಯಕ್ಕೆ—ಅವನಲ್ತು! ಅವಳಲ್ತು! ಅದಲ್ತು!

ವಚನತ್ರಯಕ್ಕೆ—ಓರ್ವನೆ ಗಂಡನಲ್ತೆ ಜಗತೀತಳದೊಳ್? ಇರ್ಬರೆ ತೋಳ್ಗಳಲ್ತೆ ನೃಪತಿಗೆ ರಣದೊಳ್? ತೇಜೋನಿಧಿಕವಿನಿಳಯದೊಳ್ ಈಷತ್ಪ್ರಭರ್ ಮಹಾಪ್ರಭರಲ್ತೆ?

## ಸೂತ್ರಂ.

The letters ಯ, ರ, ಲ, ಣ, ಳ, ಱ, ೞ very often occur (without the vowel ಅ, as ಯ್, ರ್, etc.) at the end of words.

ಯರಲಣನಳಱೞವರ್ಣೋ
ತ್ಕರಮೆ ವಲಂ ಪದದ ಕಡೆಯೊಳಸ್ವರವಿಧಿಯಂ ।
ಪಿರಿದುಂ ತಾಳ್ದುಗುಮಿವನಱಿ
ವರೆ ಕನ್ನಡಗಬ್ಬದೊಳ್ತೊಡಂಕದೆ ಸಲ್ವರ್ ॥ 48 ॥

ಪದಚ್ಛೇದಂ.—ಯರಲಣನಳಱೞವರ್ಣೋತ್ಕರಮೆ ವಲಂ ಪದದ ಕಡೆಯೊಳ್ ಅಸ್ವರವಿಧಿಯಂ ಪಿರಿದುಂ ತಾಳ್ದುಗುಂ; ಇವಂ ಅಱಿವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್.

ಯಥಾನ್ವಯಂ. ಟೀಕು.—ಯ ॥ ರ ॥ ಲ ॥ ಣ ॥ ನ ॥ ಳ ॥ ಱ ॥ ೞ = ಯಕಾರ, ರೇಫ, ಲಕಾರ, ಣಕಾರ, ನಕಾರ, ಳಕಾರ, ಱಕಾರ, ೞಕಾರಂಗಳೆಂಬ; ವರ್ಣ = ಅಕ್ಷರಂಗಳ; ಉತ್ಕರಮೆ = ಹೆಚ್ಚಿಗೆಯೆ; ವಲಂ — ನಿಶ್ಚಯವಾಗಿ; ಪದದ = ಪದಂಗಳ; ಕಡೆಯೊಳ್ = ಅಂತ್ಯದಲ್ಲಿ; ಅಸ್ವರವಿಧಿಯಂ = ವ್ಯಂಜನವಿಧಿಯಂ; ಪಿರಿದುಂ = ಬಹುಳಮಾಗಿಯುಂ; ತಾಳ್ದುಗುಂ = ಧರಿಸುವುದು; ಇವಂ = ಈ ವ್ಯಂಜನಾಂತಶಬ್ದಂಗಳಂ; ಅಱಿವರೆ = ತಿಳಿವರೆ; ಕನ್ನಡಗಬ್ಬದೊಳ್ = ಟಕಕಾವ್ಯಂಗಳಲ್ಲಿ; ತೊಡಂಕದೆ = ತೊಡಕಿಲ್ಲದೆ; ಸಲ್ವರ್ = ಸಲುವಳಿಯಾಗಿರ್ಪರ್.

ವೃತ್ತಿ.—ಯಕಾರ ರೇಫ ಲಕಾರ ಣಕಾರ ನಕಾರ ಳಕಾರ ಱಕಾರ ೞಕಾರಂಗಳ್ ಕನ್ನಡದೊಳ್ ಪಿರಿದುಂ ವ್ಯಂಜನಾಂತಂಗಳಾಗಿ ಪದಂಗಳಾಗಿರ್ಪುವು; ಇವನಱಿದು ಪ್ರಯೋಗಿಸುವರ್ಗೆ ಕವಿತ್ವದೊಳ್ತೊಡಂಕಿಲ್ಲ.

ಪ್ರಯೋಗಂ.—ಯಕಾರಕ್ಕೆ—ಕೆಯ್, ಮೆಯ್, ನೆಯ್, ಕೊಯ್, ಪೊಯ್, ಪಾಯ್, ಸಾಯ್, ಬಾಯ್, ಬಯ್.

ರೇಫೆಗೆ—ನಾರ್, ಬೇರ್, ತೇರ್, ಒರ್, ತೆವರ್, ಬೆವರ್, ಉಸಿರ್, ಮೊಸರ್, ತಳಿರ್, ಕುಳಿರ್.

ಲಕಾರಕ್ಕೆ—ಪಾಲ್, ಕೇಲ್, ಕೋಲ್, ಸಾಲ್, ನೂಲ್, ಕಲ್, ನೆಲ್, ಬಿಲ್, ಕವಲ್, ಅವಲ್, ತಂದಲ್.

ಣಕಾರಕ್ಕೆ—ಪವಣ್, ನಾಣ್, ಜಾಣ್, ಮಾಣ್, ಗೇಣ್, ಕಣ್, ಮಣ್, ಪೂಣ್, ಪುಣ್.

ನಕಾರಕ್ಕೆ—ಪೊನ್, ಬೆನ್, ಏನ್, ಜೇನ್, ಸೀನ್, ಈನ್, ಬಾನ್, ಪೇನ್.

ಳಕಾರಕ್ಕೆ—ಒಳ್, ಬೆಳ್, ತಳ್, ಕಳ್, ಮಿದುಳ್, ಕರುಳ್, ಕುರುಳ್, ತಿರುಳ್, ಮುಗುಳ್.

ಱಕಾರಕ್ಕೆ—ಎಱ್, ಬಸಿಱ್, ಕೆಸಱ್, ಪೆಸಱ್, ನೇಸಱ್, ಎಚ್ಚಿಱ್, ಪೊಱವಾಱ್.

ೞಕಾರಕ್ಕೆ—ಪಾೞ್, ಪೋೞ್, ಬೀೞ್, ತೀೞ್, ಬಾೞ್, ಎಸೞ್, ಅಗೞ್, ನೆಗೞ್, ಪೊಗೞ್, ತೆಗೞ್.

ಪಿರಿದುಮೆಂಬುದಱಿಂ ಕೆಲವಱೊಳ್ವ್ಯಂಜನಮಿಲ್ಲ, ಅವಾವೆಂದೊಡೆ—ಕವು, ತಣು, ಅಸು, ಕಱು, ತುಱು, ಪಱು, ಪುೞು—ಇವು ಮೊದಲಾದುವು.

## ಸೂತ್ರಂ.

The joining of two or more letters to each other is called (euphonic) combination (ಸಂಧಿ). Consonants without a vowel enter the following letter.

ಎರಡುಂ ಪಲವುಂ ವರ್ಣಂ
ಪರಸ್ಪರಂ ಕೂಡುವಂದಮದು ಸಂಧಿ ವಲಂ ।
ಸ್ವರರಹಿತವ್ಯಂಜನಮವು
ಪರವರ್ಣಮನೈದುತಿರ್ಪುವಾ ಸಂಹಿತೆಯೊಳ್ ॥ 49 ॥

ಪದಚ್ಛೇದಂ.—ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವ ಅಂದಂ ಅದು ಸಂಧಿ, ವಲಂ! ಸ್ವರರಹಿತ ವ್ಯಂಜನಂ ಅವು ಪರವರ್ಣಮುಂ ಐದುತೆ ಇರ್ಪುವು ಆ ಸಂಹಿತೆಯೊಳ್.

ಅನ್ವಯಂ.—ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವಂದಂ ಅದು ಸಂಧಿ, ವಲಂ! ಆ ಸಂಹಿತೆಯೊಳ್ ಸ್ವರರಹಿತವ್ಯಂಜನಂ ಅವು ಪರವರ್ಣಮುಂ ಐದುತೆ ಇರ್ಪುವು.

ಟೀಕು.—ಎರಡುಂ = ಎರಡಕ್ಷರಂಗಳುಂ; ಪಲವುಂ = ಹಲವಕ್ಷರಂಗಳುಂ; ಪರಸ್ಪರಂ = ಅನ್ಯೋನ್ಯವಾಗಿ; ಕೂಡುವಂದಂ = ಸಂಯೋಗವಾಗುವಂದಂ; ಅದು = ಅದು; ಸಂಧಿ = ಸಂಧಿಯೆನಿಪುದು; ವಲಂ = ನಿಶ್ಚಯಂ; ಆ ಸಂಹಿತಯೊಳ್ = ಆ ಸಂಧಿಯಲ್ಲಿ; ಸ್ವರರಹಿತ = ಸ್ವರಹೀನವಾದ; ವ್ಯಂಜನಂ = ವ್ಯಂಜನಾಕ್ಷರಂ; ಅವು = ಅವು; ಪರವರ್ಣಮುಂ = ಮುಂದಣಕ್ಷರವಂ; ಅಯ್ದುತೆ ಇರ್ಪುವು = ಕೂಡುತ್ತಿರ್ಪುವು.

ವೃತ್ತಿ.—ಎರಡಕ್ಕರಂ ಮೇಣ್ಪಲವಕ್ಕರಂ ತಮ್ಮೊಳನ್ಯೋನ್ಯವಾಗಿ ಕೂಡುವುದು ಸಂಧಿಯೆನಿಸುಗುಂ. ಆ ಸಂಧಿಯಲ್ಲಿ ಸ್ವರರಹಿತವ್ಯಂಜನಂಗಳ್ಮುಂದಣಕ್ಕರಮನೈದುವುವು.

ಪ್ರಯೋಗಂ.—ಸ್ವರಯುಕ್ತವ್ಯಂಜನಕ್ಕೆ—ಕೂರ್ತು ಈವಂ = ಕೂರ್ತೀವಂ; ಎನ್ನ ಅರಸಂ = ಎನ್ನರಸಂ; ಮುಂನೆ ಇಱಿವಂ = ಮುಂನಿಱಿವಂ.

ಸ್ವರರಹಿತವ್ಯಂಜನಕ್ಕೆ—ಜಾಣ್ ಉಂಟು = ಜಾಣುಂಟು; ಕುರುಳ್ ಕೊಂಕಾಯ್ತು = ಕುರುಳ್ಕೊಂಕಾಯ್ತು.

## ಸೂತ್ರಂ.

The two kinds of euphonic combination, viz. Internal (the joining of a nominal base or verbal theme and suffixes) and Final (the joining of a word to the end of another).

ಪದಮಧ್ಯಂ ಪದದಂತ್ಯಂ
ವಿದಗ್ಧರಿಂ ಸಂಧಿವಿಷಯಮೆರಡಕ್ಕುಮಿಳಾ ।
ವಿದಿತಪ್ರಕೃತಿಪ್ರತ್ಯಯ
ಮೊದವಿದ ಪದಯುಗದ ಬೆರಕೆ ಬೇಡಿರ್ದುದಱಿಂ ॥ 50 ॥

ಪದಚ್ಛೇದಂ.— ಪದಮಧ್ಯಂ ಪದದ ಅಂತ್ಯಂ ವಿದಗ್ಧರಿಂ ಸಂಧಿವಿಷಯಂ ಎರಡು ಅಕ್ಕುಂ; ಇಳಾವಿದಿತಪ್ರಕೃತಿಪ್ರತ್ಯಯಂ, ಒದವಿದ ಪದಯುಗದ ಬೆರಕೆ ಬೇಡಿ ಇರ್ದುದಱಿಂ.

ಅನ್ವಯಂ.—ಇಳಾವಿದಿತಕೃತಿಪ್ರತ್ಯಯಂ ಒದವಿದ ಪದಯುಗದ ಬೆರಕೆ ಬೇಡಿರ್ದುದಱಿಂ ಪದಮಧ್ಯಂ ಪದದಂತ್ಯಂ ವಿದಗ್ಧರಿಂ ಸಂಧಿವಿಷಯಂ ಎರಡು ಅಕ್ಕುಂ.

ಟೀಕು.—ಇಳಾವಿದಿತಪ್ರಕೃತಿಪ್ರತ್ಯಯಂ = ಭೂಮಿಯಲ್ಲಿ ಪ್ರಸಿದ್ಧವಾದ ಪ್ರಕೃತಿ ಪ್ರತ್ಯಯಂಗಳ್; ಒದವಿದ ಪದಯುಗದ = ಪ್ರಾಪ್ತಿಸಿದ ಪದಂಗಳೆರಡಱ; ಬೆರಕೆ = ಸಂಯೋಗಂ; ಬೇಡಿರ್ದುದಱಿಂ = ಬೇಕಾಗಿರ್ದುದಱಿಂದೆ; ಪದಮಧ್ಯಂ = ಪದಮಧ್ಯಸಂಧಿಯೆಂದು; ಪದದಂತ್ಯಂ = ಪದಾಂತ್ಯಸಂಧಿಯೆಂದು; ವಿದಗ್ಧರಿಂ = ವಿದ್ವಾಂಸರಿಂದೆ; ಸಂಧಿವಿಷಯಂ = ಸಂಧಿಪ್ರಯೋಜನಂ; ಎರಡು = ಎರಡು ತೆಱಂ; ಅಕ್ಕುಂ = ಅಪ್ಪುದು.

ವಿಚಾರಂ.—ಪ್ರಕೃತಿ ಪ್ರತ್ಯಯಂಗಳ್ಕೂಡುವುದು ಪದಮಧ್ಯಸಂಧಿಯೆನಿಪುದು; ಪದಂಗಳೆರಡು ಕೂಡುವಲ್ಲಿ ಮೊದಲ ಪದದ ಕಡೆಯೊಳಪ್ಪುದು ಪದಾಂತ್ಯಸಂಧಿಯೆನಿಪುದು.

ವೃತ್ತಿ.—ಪ್ರಕೃತಿ ಪ್ರತ್ಯಯಂಗಳ ಮಧ್ಯಮುಂ ಪೂರ್ವಪದದ ಕಡೆಯುಂ ಪರಪದದ ಮೊದಲುಂ ಕೂಡೆ, ಪದಮಧ್ಯಸಂಧಿ ಪದ್ಯಾಂತಸಂಧಿ ಎಂದು, ಸಂಧಿವಿಷಯಮಿರ್ತೆಱಂ.

ಪ್ರಯೋಗಂ.— ಪದಮಧ್ಯಸಂಧಿಗೆ ನಾಮವಿಭಕ್ತಿಯಲ್ಲಿ — ಮಾತು + ಅಮ್ = ಮಾತಂ; ಮಾತು + ಇಮ್ = ಮಾತಿಂ; ಮಾತು + ಇಂಗೆ = ಮಾತಿಂಗೆ; ಮಾತಿನ + ಅತ್ತಣಿಂ = ಮಾತಿನತ್ತಣಿಂ; ಮಾತು + ಇನ = ಮಾತಿನ; ಮಾತಿನ + ಒಳ್ = ಮಾತಿನೊಳ್; —

ಧಾತುವಿಭಕ್ತಿಯಲ್ಲಿ (ಆಖ್ಯಾತ-) — ನುಡಿದ + ಅಮ್ = ನುಡಿದಂ; ನುಡಿದ + ಅರ್ = ನುಡಿದರ್; ನುಡಿದ + ಅಯ್ = ನುಡಿದಯ್; ನುಡಿದ + ಇರ್ = ನುಡಿದಿರ್; ನುಡಿದ + ಎನ್ = ನುಡಿದೆನ್; ನುಡಿದ + ಎವು = ನುಡಿದೆವು.

ಪದಾಂತ್ಯಸಂಧಿಗೆ ನಾಮಪದಂಗಳಲ್ಲಿ — ಅವನ + ಆಳ್ತನಂ = ಅವನಾಳ್ತನಂ; ಕಾಮನ + ಅಂಡಲೆ = ಕಾಮನಂಡಲೆ; —

ಕ್ರಿಯಾಪದಂ ಬೆರಕೆಯಾದಲ್ಲಿ — ನುಡಿದರ್ + ಅವರ್ = ನುಡಿದರವರ್; ಬೆಸಸಿದೆವು + ಒಳ್ಪಂ = ಬೆಸಸಿದೆವೊಳ್ಪಂ. ಇಂತಱಿವುದು.

## ಸೂತ್ರಂ.

The section on Letters finished.

ಇದು ಪೂರ್ವಪ್ರಕರಣಮಿಂ
ತಿದಱೊಳ್ಸಾಕಲ್ಯಸಂಜ್ಞೆ ಪೇಟಿವೆನಲ್ಬೇ ।
ಡುದಿತಪ್ರಕರಣಗಣಸೂ
ತ್ರದಿಷ್ಟದಿಂ ಸಂಜ್ಞೆಯೊಡನೆ ಪೇಟಿಲ್ಪಡೆಗುಂ ॥ 51 ॥

**ಪದಚ್ಛೇದಂ.**— ಇದು ಪೂರ್ವಪ್ರಕರಣಂ. ಇಂತು ಇದಱೊಳ್ ಸಾಕಲ್ಯಸಂಜ್ಞೆ ಪೇಟಿವು ಎನಲ್ ಬೇಡ! ಉದಿತಪ್ರಕರಣಗಣಸೂತ್ರದ ಇಷ್ಟದಿಂ ಸಂಜ್ಞೆಯೊಡನೆ ಪೇಟಿಲ್ ಪಡೆಗುಂ.

ಯಥಾನ್ವಯಂ. ಟೀಕು.— ಇದು = ಇದು; ಪೂರ್ವಪ್ರಕರಣಂ = ಮೊದಲ ಪ್ರಕರಣಂ; ಇಂತು = ಹೀಂಗೆ; ಇದಱೊಳ್ = ಈ ಪ್ರಕರಣದಲ್ಲಿ; ಸಾಕಲ್ಯಸಂಜ್ಞೆ = ಸಮಸ್ತಸಂಜ್ಞೆಗಳ್; ಪೇಟಿವೆನಲ್ಬೇಡ = ಹೇಟಿತಿಲ್ಲೆನ ಬೇಡ; ಉದಿತಪ್ರಕರಣಗಣಸೂತ್ರದ = ಉಂಟಾಗಲ್ಪಟ್ಟ ಪ್ರಕರಣದ ಸಮೂಹದ ಸೂತ್ರಂಗಳ; ಇಷ್ಟದಿಂ = ಇಷ್ಟದಿಂದೆ; ಸಂಜ್ಞೆಯೊಡನೆ = ಸಂಜ್ಞೆಯ ಕೂಡೆ; ಪೇಟಿಲ್ಪಡೆಗುಂ = ಹೇಳಲ್ಪಟ್ಟುವು.

ವೃತ್ತಿ.— ಸಂಜ್ಞಾಪ್ರಕರಣಂ ಸಂಪೂರ್ಣಂ.

॥ ಸಂಜ್ಞಾಪ್ರಕರಣಂ ಸಮಾಪ್ತಂ. ॥

## 2. ಸಂಧಿಪ್ರಕರಣಂ. Second Section: Particularities of Euphonic Combination.

### 1. Combination of Vowels.

ಸೂತ್ರಂ.

Elision of vowels (ಅ, ಇ, ಉ, ಎ) at the end of inflected and uninflected words (whether Saṁskṛit or Canarese) etc. before vowels is very frequent, but ought not to occur when the meaning would become uncertain.

ಸ್ವರಮಿದಿರೊಳಿರೆ ವಿಭಕ್ತಿ
ಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ ।
ವರಸಂಸ್ಕೃತಕರ್ಣಾಟಕ
ಮೆರಡಱೊಳಂ ನಾಮರೂಢಿಯಱಿಯದ ಪಕ್ಷಂ ॥52॥

ಪದಚ್ಛೇದಂ.—ಸ್ವರಂ ಇದಿರೊಳ್ ಇರೆ, ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಂ ಅಕ್ಕುಂ ಲೋಪಂ, ವರಸಂಸ್ಕೃತ ಕರ್ಣಾಟಕಂ ಎರಡಱೊಳಂ, ನಾಮರೂಢಿ ಅಱಿಯದ ಪಕ್ಷಂ.

ಅನ್ವಯಂ.—ವರಸಂಸ್ಕೃತಕರ್ಣಾಟಕಂ ಎರಡಱೊಳಂ—ನಾಮರೂಢಿ ಅಱಿಯದ ಪಕ್ಷಂ—ಸ್ವರಂ ಇದಿರೊಳ್ ಇರೆ, ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಂ ಲೋಪಂ ಅಕ್ಕುಂ.

ಟೀಕು.—ವರ = ಶ್ರೇಷ್ಠವಾದ; ಸಂಸ್ಕೃತಕರ್ಣಾಟಕಂ = ಸಂಸ್ಕೃತಕರ್ಣಾಟಕಂಗಳೆಂಬ; ಎರಡಱೊಳಂ = ಎರಡು ಶಬ್ದದಲ್ಲಿಯುಂ; ನಾಮರೂಢಿ = ನಾಮಪ್ರಸಿದ್ಧಿಯು; ಅಱಿಯದ ಪಕ್ಷಂ = ಕೆಡದ ಪಕ್ಷದಲ್ಲಿ; ಸ್ವರಂ = ಸ್ವರಾಕ್ಷರಂ; ಇದಿರೊಳ್ = ಮುಂದುಗಡೆಯಲ್ಲಿ; ಇರೆ= ಇರೆ; ವಿಭಕ್ತಿಸ್ವರಕಂ= ವಿಭಕ್ತಿಸ್ವರಕ್ಕೆಯುಂ; ಪ್ರಕೃತಿಸ್ವರಕ್ಕಂ = ಪ್ರಕೃತಿಸ್ವರಕ್ಕೆಯುಂ; ಲೋಪಂ = ಅದರ್ಶನಂ; ಅಕ್ಕುಂ = ಅಪ್ಪುದು.

ವೃತ್ತಿ.—ಸ್ವರಂ ಪರಮಾಗೆ, ಸಂಸ್ಕೃತದ ಕನ್ನಡದ ವಿಭಕ್ತಿಸ್ವರಕ್ಕಂ ಪ್ರಕೃತಿಯ ಸಹಜಸ್ವರಕ್ಕಂ, ನಾಮಪ್ರಸಿದ್ಧಿ ಕೆಡದ ಪಕ್ಷಂ, ಲೋಪಮಕ್ಕುಂ.

ಪ್ರಯೋಗಂ.—ಸಂಸ್ಕೃತಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ಕ್ರಮದೆ+ ಆಯ್ತು=ಕ್ರಮದಾಯ್ತು; ಇಂದ್ರಂಗೆ+ ಐರಾವತಂ= ಇಂದ್ರಂಗೈರಾವತಂ; ಗಿರಿಯತ್ತಣಿಂದೆ+ ಇೞಿದಂ=ಗಿರಿಯತ್ತಣಿಂದಿೞಿದಂ; ಗೃಹದಲ್ಲಿ + ಇರ್ದಂ= ಗೃಹದಲ್ಲಿರ್ದಂ; ಈಶ್ವರನ+ ಒಲವು= ಈಶ್ವರನೊಲವು.

ವಿಭಕ್ತ್ಯಾದಿ ಕೂಡುವೆಡೆ ಸಂಸ್ಕೃತಪ್ರಕೃತಿಸ್ವರಲೋಪಕ್ಕೆ—ಬುಧ+ ಅರ್= ಬುಧರ್; ಉದ್ಧತ+ ಅರ್= ಉದ್ಧತರ್; ದೇವ+ ಎಂಬರ್= ದೇವೆಂ

ಬರ್; ರಾಗ+ಇಸು=ರಾಗಿಸು; ಭಂಗ+ಇಸು=ಭಂಗಿಸು; ಭಾವ+ಇಸು= ಭಾವಿಸು. ಇಂತುಱಿದುವನಱಿವುದು.—

ಕರ್ಣಾಟಕಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ನೆಲದಿಂದೆ+ಉಣ್ಬಂ= ನೆಲದಿಂದುಣ್ಬಂ; ಲೇಸಿಂಗೆ+ಒಡೆಯಂ=ಲೇಸಿಂಗೊಡೆಯಂ; ಮರದತ್ತಣಿಂದೆ+ಇೞಿದಂ=ಮರದತ್ತಣಿಂದಿೞಿದಂ; ಚಲದ+ಆಣ್ಮಂ=ಚಲದಾಣ್ಮಂ; ಪೊಲದಲ್ಲಿ+ಇರ್ದಂ=ಪೊಲದಲ್ಲಿರ್ದಂ; ನೆಲದೆ+ಎೞ್ತಿಂದಂ=ನೆಲದೆೞ್ತಿಂದಂ.—

ಆಖ್ಯಾತವಿಭಕ್ತಿಸ್ವರಲೋಪಕ್ಕೆ—ಮಾಡಿದೆವು+ಒಳ್ವಂ=ಮಾಡಿದೆವೊಳ್ವಂ;—

ಕ್ರಿಯಾವಿಭಕ್ತಿಯಾದೇಶಮಾದ ಸ್ವರದ ಲೋಪಕ್ಕೆ—ಕೂಡಿ+ಇರ್ದಂ= ಕೂಡಿರ್ದಂ; ಪಸಿದು+ಉಣ್ಡಂ=ಪಸಿದುಣ್ಡಂ.—

ಕರ್ನಾಟಕ ಪ್ರಕೃತಿಸ್ವರಲೋಪಕ್ಕೆ 1) ಅಕಾರಕ್ಕೆ—ಅರಸ+ಆಳ್=ಅರಸಾಳ್; ಅಚ್ಚ+ಆನೆ=ಅಚ್ಚಾನೆ; ಜೀಯ+ಎಂಬಂ=ಜೀಯೆಂಬಂ; ಬಡಬಡ+ ಆದಂ=ಬಡಬಡಾದಂ; ಸಾಮಂತ+ಓಲಗಂ=ಸಾಮಂತೋಲಗಂ. 2) ಇಕಾರಕ್ಕೆ—ದಾೞಿಟ್ಟಂ, ಹಂದಿಟ್ಟಂ, ಸ್ನವಡಿಟ್ಟಂ. 3) ಎಕಾರಕ್ಕೆ—ಸೇಸಿಕ್ಕಿದಂ, ಮುಡಿಗಿಕ್ಕಿದಂ, ಮತ್ತೆಲ್ಲಂ, ಮುನ್ನೞಿವಂ. 4) ಉಕಾರಕ್ಕೆ—ಸುತ್ತೋಲೆ, ಹತ್ತೆಂಟು, ಲೇಸೆಲ್ಲಂ, ಸೊವಡೊಂದು.

ನಾಮಂ ಕಿಡುವೊಡೆ ಸಂಸ್ಕೃತಕರ್ಣಾಟಕದ ಪ್ರಕೃತಿಸ್ವರಕ್ಕೆ ಲೋಪಮಿಲ್ಲ—ಪಟು+ಏಕವಾಕ್ಯಂ=ಪಟುವೇಕವಾಕ್ಯಂ; ವಿಧು+ಇದು=ವಿಧುವಿದು; ಮಡು+ಇದು=ಮಡುವಿದು; ಕುಡು+ಇಲ್ಲ=ಕುಡುವಿಲ್ಲ.

## ಸೂತ್ರಂ.

Insertion of ಯ after ಅ, ಇ, ಈ, ಓ, ಐ, ಎ, ಏ and after ಅ when it is the affix of the Genitive and followed by the emphasizing ಎ. (*cf.* S. 47; 56).

ಅತ್ವದಿನಿವರ್ಣದಿಂ ಮ
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ ।
ಯತ್ವಮದವಧಾರಣೆ ಪರ
ಮತ್ವಂ ಪಿಂತಾಗೆ ಷಷ್ಠಿನಿಯಮದೆ ಯತ್ವಂ ॥ 53 ॥

ಪದಚ್ಛೇದಂ.—ಅತ್ವದಿಂ ಇವರ್ಣದಿಂ ಮತ್ತೆ ಓತ್ವದಿಂ ಐತ್ವದಿಂ ಎವರ್ಣದಿಂ ಮುಂದೆ ಅಕ್ಕುಂ ಯತ್ವಂ ಅದು; ಅವಧಾರಣೆ ಪರಂ, ಅತ್ವಂ ಪಿಂತು ಆಗೆ ಷಷ್ಠಿನಿಯಮದೆ, ಯತ್ವಂ.

ಟೀಕು.—ಆ ಸಂಹಿತೆಯೊಳೆಂಬುದನುವರ್ತನೆ— ಅತ್ವದಿಂ = ಅಕಾರದಿಂದೆ; ಇವರ್ಣದಿಂ = ಇ ಈ ಎಂಬ ಸವರ್ಣದಿಂದೆ; ಮತ್ತೆ = ಬಳಿಕಂ; ಓತ್ವದಿಂ = ಓಕಾರದಿಂದೆ; ಐತ್ವದಿಂ = ಐಕಾರದಿಂದೆ; ಎವರ್ಣದಿಂ = ಎ ಏ ಎಂಬ ಸವರ್ಣದಿಂ; ಮುಂದೆ = ಮುಂದುಗಡೆಯಲ್ಲಿ; ಯತ್ವಂ = ಯಕಾರಂ; ಅದು = ಅದು; ಅಕ್ಕುಂ = ಅಪ್ಪದು; ಅವಧಾರಣೆ = ನಿರ್ಧಾರಣೆಯ ಎಕಾರಂ; ಪರಂ = ಮುಂದಣದು; ಆತ್ವಂ = ಅಕಾರಂ; ಪಿಂತು = ಹಿಂದು; ಆಗೆ = ಆಗೆ; ಷಷ್ಠಿ = ಷಷ್ಠಿಯೆಂಬ ವಿಭಕ್ತಿಯ; ನಿಯಮದೆ = ಕಟ್ಟಿನಿಂದೆ; ಯತ್ವಂ = ಯಕಾರಂ ಅಪ್ಪುದು.

ವೃತ್ತಿ.— || ಅ || ಇ || ಈ || ಓ || ಐ || ಎ || ಏ || ಎಂಬಿವರ್ಕೆ ಸ್ವರಂ ಪರಮಾಗೆ, ನಡುವೆ ಯತ್ವಮಕ್ಕುಂ; ಷಷ್ಠಿಯಕಾರಂ ಪೆಱಗಿರೆ, ಅವಧಾರಣೆಯೆಕಾರಂ ಪರ್ದ್ದೊಳಿರೆ, ನಿಯಮದಿಂ ಯತ್ವಮಕ್ಕುಂ.

ಪ್ರಯೋಗಂ.—ಅಕಾರಕ್ಕೆ—ಆಯಿರ್ದ ಮಾಱ್ಕೆಯಿಂ ಪರಮಾಯು ಷ್ಯಾಂತಮ್ ಬರಂ. ಕಾಯಲುಂ ಬಲಗರ್ವದಿಂ ನೆಲವೆಲ್ಲಮಂ. ಸಾಯಲೆ ವೇಡಿ ತಾನೀಯನೆ ಧರೆಯಂ; ಗಾಂಗೇಯ; ಕೇಳ್.

ಇತ್ವಕ್ಕೆ—ಕವಿಯಾರ್. ನಿಷ್ಕಾಮಿಯಾವಳ್. ಬಳಿಯಂ ಬೇಡುಗುಮೆಂಧು ಕಟ್ಟಿದಲಗಂ ಕಿಱುತ್ತಿರ್ದ. ಪಿಡಿಯೆಂಸಿತಾಳಪತ್ರಮಂ ಜತಿಯಿತ್ತಂ.

ಈಕಾರಕ್ಕೆ—ಈಯಲ್ಬಂದತ್ತು ಕಲ್ಪಾಂಘ್ರಿಪಯಭಿಮತಮಂ. ಶ್ರೀಯಂ ಪೂರ್ವಾರ್ಜಿತಪುಣ್ಯಾಯತ್ತದಿನಱಿಸಿ ಕಾಣ್ಬ ವೊಲ್ ಕಂಡಂ. ಸ್ತ್ರೀಯೆಂಬ ನಾಡೆಯೆಂಬನ್ಯಾಯದ ಕೊಲೆಯೆಂಬ.

ಓಕಾರಕ್ಕೆ—ಅಮರಾಂಗನೆಯರ್ ಜೋಯೆಂದು ಪಾಡಿದರ್ ಜೋಗಳ ಮಂ. ಅಬ್ರಮ್ಮಣ್ಯಾಂ ಭೋಯೆನಲುಂ ಬ್ರಾಹ್ಮಣರ ವಿಧೋಯೆನಲುಂ. ನೋಯಿಸಿದಂ ತೋಯಲುಂ ಹಿಂಡಲುಂ.

ಐಕಾರಕ್ಕೆ—ದೈಯೆಂದಂ. ರೈಯೊದವಿತ್ತು. ಒದೆದದ್ರಿಕ್ಷಿತಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಿಱ್ತು.

ಎಕಾರಕ್ಕೆ—ತೊಱೆಯಂ ಪಾಯ್ದೆತ್ತಿ ಬಂದಂ ಗಡ ಮಸಗಿ ಜರಾಸಂಧ ಭೂಪಂ. ಪಸೆಯಿರ್ದಂ ಗರುಡವೇಗನೃಪನಂದನೆಯೊಳ್. ನಡೆ ನಡೆಯೆಂದೇ ನಡೆದುದೊ.

ಏಕಾರಕ್ಕೆ—ತೇಯಿಸಿದಂ. ಮೇಯಿಸಿದಂ. ಏಯೆಂದಂ. ಭೋಂಕನೆ ದೇವಸ್ತ್ರೀಯರ್ ಅಂದಾರತಿಯನುಘೆಯೆನ್ದು ತಂದೆತ್ತುತ್ತಿರ್ದರ್. ಉಘೇಯೆಂದು.

ಅವಧಾರಣೆಗೆ—ಆತನಯೆ ತೋರದೊಡೆಸಳ್. ಅವಳಯೆ, ಅದಱಯೆ.

## ಸೂತ್ರಂ.

Further insertion of ಯ between Samskrita or Canarese themes with final ಅ and the affix ಇಸು and after imitative souuds with final (ಅ).

ಸದಮಳಸಂಸ್ಕೃತಕರ್ಣಾ
ಟದದಂತಪ್ರಕೃತಿಗಳ್ಗಿಸುಪ್ರತ್ಯಯಮಿಂ ।
ತಿದಿರಾಗೆ ಯತ್ವಮನುಕೃತಿ
ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ॥ 54 ॥

ಪದಚ್ಛೇದಂ.— ಸದಮಳಸಂಸ್ಕೃತಕರ್ಣಾಟದ ಅದಂತ ಪ್ರಕೃತಿಗಳ್ಗೆ ಇಸುಪ್ರತ್ಯಯಂ ಇಂತು ಇದಿರ್ ಆಗೆ, ಯತ್ವಂ; ಅನುಕೃತಿಪದಕಂ ಮುಂದೆ ಅನುಕೃತಿಸ್ವರಂ ನಿಲೆ, ಯತ್ವಂ.

ಯಥಾನ್ವಯಂ. ಟೀಕು.—ಸತ್ = ಲೇಸಾದ; ಅಮಳ = ನಿರ್ಮಲವಾದ; ಸಂಸ್ಕೃತ = ಸಂಸ್ಕೃತದ; ಕರ್ಣಾಟದ = ಕನ್ನಡದ; ಅದಂತಪ್ರಕೃತಿಗಳ್ಗೆ = ಅಕಾರಾಂತವಾದ ಪ್ರಕೃತಿಗಳ್ಗೆ; ಇಸುಪ್ರತ್ಯಯಂ = ಇಸು ಎಂಬ ಪ್ರತ್ಯಯಂ; ಇಂತು = ಹೀಂಗೆ; ಇದಿರಾಗೆ = ಪರಮಾಗೆ; ಯತ್ವಂ = ಯಕಾರವಪ್ಪುದು; ಅನುಕೃತಿಪದಕಂ = ಅನುಕರಣಪದಕ್ಕೆಯುಂ; ಮುಂದೆ = ಮುಂದುಗಡೆಯಲ್ಲಿ; ಅನುಕೃತಿಸ್ವರಂ = ಅನುಕರಣವಂ ಪೇೞ್ವ ಸ್ವರಂ; ನಿಲೆ = ನೆಲಸೆ; ಯತ್ವಂ = ಯಕಾರವಪ್ಪುದು.

ವೃತ್ತಿ.— ಅಮಳತರ(ಸಂಸ್ಕೃತಕರ್ಣಾಟದ)ಕಾರಾಂತಪ್ರಕೃತಿಗಳ್ಗೆ ಇಸು ಪ್ರತ್ಯಯಂ ಪರಮಾಗೆ, ನಡುವೆಯತ್ವಮಕ್ಕುಂ) ಅದಂತಮಪ್ಪ(ನುಕೃತಿಪದಕ್ಕೆ ಅನುಕೃತಿಸ್ವರಂ ಪರಮಾಗೆ, ಯತ್ವಂ.)

ಪ್ರಯೋಗಂ.— ಸಂಸ್ಕೃತಶಬ್ದದಲ್ಲಿ — ಶುದ್ಧ + ಇಸಿದಂ = ಶುದ್ಧಯಿಸಿದಂ; ತಾರ + ಇಸಿದಂ = ತಾರಯಿಸಿದಂ; ನಿರ್ಣ + ಇಸಿದಂ = ನಿರ್ಣಯಿಸಿದಂ; ಪೂರ + ಇಸಿದಂ = ಪೂರಯಿಸಿದಂ.

ಕನ್ನಡಶಬ್ದದಲ್ಲಿ — ಬಿಆ + ಇಸಿದಂ = ಬಿಆಯಿಸಿದಂ; ತೇರಯಿಸಿದಂ; ತೆಲ್ಲಯಿಸಿದಂ; ಮೇಳಯಿಸಿದಂ; ಓಲಯಿಸಿದಂ.

ಅನುಕೃತಿಸ್ವರಕ್ಕೆ—ಪಟಿಪಟಿಸಲ್ಬಿಟಿಯೆಂದಾಲಿಕಲ್ಗಳುದಿರ್ದುವು ನಭದಿಂ, ಗುಬಿಗುಬಿಗಬಿಗಬಿಯೆನುತುಂ ಪರಿವಪರಿವೊಸಲ್ ಸೊಗಯಿಸುಗುಂ.

## ಸೂತ್ರಂ.

Insertion of ವ after ಉ, ಊ, ಋ, ೠ, ಌ, ಔ (ಇ, ಈ) In Canarese words arbitrariness regarding the insertion of ಯ or ವ may happen, but not in Samskṛita words.

ಅವತರಿಸಿರ್ಕುಮುವರ್ಣದ
ಋವರ್ಣದೋತ್ವೌತ್ವದಗ್ರದೊಳ್ಸ್ವರಮಿರೆ ವ ।
ತ್ವವಿಧಾನಂ ಬಹುಳತೆ ಯ
ತ್ವವತ್ವದೊಳ್ಸಂಸ್ಕೃತಕ್ಕೆ ತಾನಿಲ್ಲೆಂದುಂ || 55 ||

ಪದಚ್ಛೇದಂ. — ಅವತರಿಸಿ ಇರ್ಕುಂ, ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವವಿಧಾನಂ, ಬಹುಳತೆ ಯತ್ವವತ್ವದೊಳ್ ಸಂಸ್ಕೃತಕ್ಕೆ ತಾಂ ಇಲ್ಲ ಎಂದುಂ.

ಅನ್ವಯಂ.—ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವವಿಧಾನಂ ಅವತರಿಸಿ ಇರ್ಕುಂ, ಸಂಸ್ಕೃತಕ್ಕೆ ಯತ್ವವತ್ವದೊಳ್ ಬಹುಳತೆ ತಾಂ ಎಂದುಂ ಇಲ್ಲ.

ಟೀಕು.—ಉವರ್ಣದ= ಉ ಊ ಎಂಬ ಸವರ್ಣದ; ಋವರ್ಣದ= ಋ ೠ ಎಂಬ ಸವರ್ಣದ; ಓತ್ವೌತ್ವದ= ಓಕಾರ ಔಕಾರದ; ಅಗ್ರದೊಳ್= ಮುಂದೆ; ಸ್ವರಂ= ಸ್ವರಾಕ್ಷರಂ; ಇರೆ= ಇರೆ; ವತ್ವವಿಧಾನಂ= ವಕಾರದ ವಿಧಾನಂ; ಅವತರಿಸಿರ್ಕುಂ= ಹುಟ್ಟಿರ್ಪುದು; ಸಂಸ್ಕೃತಕ್ಕೆ= ಸಂಸ್ಕೃತಶಬ್ದಕ್ಕೆ; ಯತ್ವವತ್ವದೊಳ್= ಯತ್ವಸಂಧಿ ವತ್ವಸಂಧಿಗಳಲ್ಲಿ; ಬಹುಳತೆ= ಬಹುಳತ್ವಂ; ತಾಂ= ತಾಂ; ಎಂದುಂ= ಆವಾಗಳುಂ; ಇಲ್ಲ = ಉಂಟಾಗದು.

ವಿಚಾರಂ.—ಕನ್ನಡದ ಶಬ್ದದಲ್ಲಿ ಯತ್ವವತ್ವಸಂಧಿಗಳಲ್ಲಿ ಬಹುಳವುಂಟೆಂಬುದರ್ಥಂ ಅತ್ವದಿನಿವರ್ಣದಿಂ ಮತ್ತೋತ್ವದಿನೈತ್ವದಿನೆವರ್ಣದಿಂ ಮುಂದುಕ್ಕುಂ ಯತ್ವಂ (S. 53); ಉವರ್ಣದ ಋವರ್ಣದೋತ್ವೌತ್ವದಗ್ರದೊಳ್ಸ್ವರಮಿರೆ ವತ್ವವಿಧಾನವೆಂಬ ಈ ಯತ್ವಸಂಧಿವತ್ವಸಂಧಿಗಳಲ್ಲಿ ವಿಚಾರಮುಂಟು; ಅದ್ವಾದೆಂತೆಂದೊಡೆ—ಶಬ್ದಾನುಶಾಸನದಲ್ಲಿ ಸೂತ್ರಂ (1ನೆಯ ಪಾದದ 38ನೆಯ ಸೂತ್ರಂ) ‖ ಅತ ಓಷ್ಠ್ಯೇ ಸ್ವರೇ ಪರೇ ಆಕಾರಸ್ಯ ವಗ್ಭವತಿ ‖ ಎಂದುದಾಗಿ ಅಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ, ವತ್ವಸಂಧಿಯಾಗುವುದು—ಅ + ಉದಕಂ = ಅವುದಕಂ, ಅ + ಊರ್= ಅವೂರ್, ಅವೂಟಂ. ಅವೊಲೆ, ಅವೋಲೆ ಎಂಬಂತೆ ಓಷ್ಠ್ಯಗ್ರಹಣದಿಂ ಕಂಠೌಷ್ಠ್ಯಮುಂ ಸಂಗ್ರಹಿಸಲ್ಪಟ್ಟುದು[1].

ವೃತ್ತಿ.— ಉ ಊ ಋ ೠ ಓ ಔ ಎಂಬಿವರ್ಕೆ ಸ್ವರಂ ಪರಮಾಗೆ, ನಡುವೆ ವತ್ವಂ; ಸಂಸ್ಕೃತದೊಳ್ ಯತ್ವವತ್ವಂಗಳ್ಗೆ ಬಹುಳಮಿಲ್ಲ.

## ನಿತ್ಯಕ್ರಮಪ್ರಯೋಗಂ

ಉಕಾರಕ್ಕೆ—ಕುಡುವುದು ಕೂರ್ಮೆಯಲ್ಲಿ. ಮನುವಿನ ಮಾರ್ಗಂ ಸುರಗುರುವಿನಱಿವು. ನೆಗೞ್ದಿನಾ ವಿಭುವಿಳೆಯೊಳ್.

ಊಕಾರಕ್ಕೆ—ಪೂವಿನ ಬಿಲ್ಲ ಕೊಪ್ಪನೊಡೆದೇೞಿಸಿ. ಲಲಿತಭ್ರೂವಂಗ ಜನಿಕ್ಷುಚಾಪಸಹಚರಮಕ್ಕುಂ.

ಋಕಾರಕ್ಕೆ—ಹೋತೃವೆಯಾನ್ ಅಧ್ವರಿಯ್ಯೆ ಭ್ರಾತೃವೆ ನೀನ್ ಉೞಿದ ಋತ್ವಿಜರ್. ಕರ್ತೃವಾದಂದಿನಿತತಿಶಯಮಂ ತಾಳ್ದುದೀ ಕನ್ನೆಯಂದಂ.

---

1) ಉ, ಊ = ಓಷ್ಠ್ಯಂಗಳ್; ಒ, ಓ, ಔ = ಕಂಠೌಷ್ಠ್ಯಂಗಳ್.

ಋೂಕಾರಕ್ಕೆ—ಋೂವೆಂದಂ. ಋೂವಿತ್ತಂ.

ಓಕಾರಕ್ಕೆ—ಗೋವಿನ ಹಿಂಡು, ಗೋವಂ (ಗೋ+ ಅಂ), ಗೋವಿನ್ದಂ (ಗೋ+ ಇಂದಂ).

ಔಕಾರಕ್ಕೆ—ನಾವೆಱೆಱಿದಂ; ಗ್ಲಾವಂ ನೋಡಿದಂ. ಚೌವಿವಂ (?).

ಈ ಎಂಬಕ್ಕರಂಗಳನುಕರಿಸಿ ತೋಱುವಲ್ಲಿಯುಂ ನಡುವೆ ವತ್ವಂ—ಈವಿವುಗ್ರಂಥಂಗಳ್, ಈವಿದು ಗ್ರಂಥಂ; ಈ+ ಇದು becomes also ಇವಿದು.

ಕನ್ನಡದೊಳ್ ಯತ್ವವತ್ವಂಗಳ ಬಹುಳತೆಯಿಂ ಲೋಪಮುಂಟು—ಒತ್ತೆ+ ಇಟ್ಟಂ= ಒತ್ತಿಟ್ಟಂ (ಅಥವಾ) ಒತ್ತೆಯಿಟ್ಟಂ; ಒತ್ತಿಟ್ಟಿರುಳೀಕೆಯ ಕೈತವಕಂಜಿ ಪೊಱಮಟ್ಟರ್ದಂ; ತಗವೆಯುಪ್ಪೊಡೆ, ತಗವಪ್ಪೊಡೆ: ಮಾತು+ ಎಲ್ಲಂ= ಮಾತುವೆಲ್ಲಂ, ಮಾತೆಲ್ಲಂ; ಪೊಲೆಸೂರುಳ್; ಸೊಪಡು+ ಒಂದು= ಸೊವಡುವೊಂದು, ಸೊವಡೊಂದು.

ಸಂಸ್ಕೃತದ ನಿತ್ಯಕ್ಕೆ—ನದಿಯೆಲ್ಲಂ, ಸುರಸಿಂಧುವೆ, ವಿಧುವಿಲ್ಲದಿರುಳ್.

ವಿಧುವಿಲ್ಲದಿರುಳ್ ತನ್ನಯ
ವಧುವಿಲ್ಲದ ಲೀಲೆ ಮಧುರಮಧುವಿಲ್ಲದ ಪೂ ।
ದಧಿಯಿಲ್ಲದುಣಿಸದೆವುದೋ
ಬುಧರಿಲ್ಲದ ಸಭೆ ಸರಸ್ವತೀಮುಖತಿಲಕಾ ॥ ಕಂದಂ ॥

ಇಂತಱಿವುದು.

## ಸೂತ್ರಂ.

No insertion of letters is allowed after the ಎ, ಏ or ಒ, ಓ in certain particles, strict emphasises, or suspicious questions, and after a syllable lengthened to three moras (ಪ್ಲುತಂ). (Exception to S. 53).

ಅವಿಕೃತಿಗಳೆವರ್ಣವೊವ
ರ್ಣವಂತ್ಯವೆನಿಸಿದ ನಿಪಾತಮವಧಾರಣೆ ತ ।
ಳ್ತ ವಿಶಂಕೆಗಳೆಂಬಿವಱೊಳ್
ವ್ಯವಹರಿಸದು ಸಂಧಿಯಾ ಪ್ಲುತಕ್ಕಮಭಾವಂ ॥ 56 ॥

ಪದಚ್ಛೇದಂ.—ಅವಿಕೃತಿಗಳ್ ಎವರ್ಣಂ ಒವರ್ಣಂ ಅಂತ್ಯಂ ಎನಿಸಿದ ನಿಪಾತಂ, ಅವಧಾರಣೆ, ತಳ್ತ ವಿಶಂಕೆಗಳ್ ಎಂಬಿವಱೊಳ್ ವ್ಯವಹರಿಸದು ಸಂಧಿ; ಆ ಪ್ಲುತಕ್ಕಂ ಅಭಾವಂ.

ಅನ್ವಯಂ.—ಎಂಬಿವಱೊಳ್ ಸಂಧಿ ವ್ಯವಹರಿಸದು; ಆ ಪ್ಲುತಕ್ಕಂ ಅಭಾವಂ ಎಂಬುದನ್ವಯಂ.

ಟೀಕು.—ಅವಿಕೃತಿಗಳ್ = ನಿರ್ವಿಕಾರಿಗಳಾದ; ಎವರ್ಣಂ = ಎ ಏ ಎಂಬ ಸವರ್ಣಂ; ಒವರ್ಣಂ = ಒ ಓ ಎಂಬ ಸವರ್ಣಂ; ಅಂತ್ಯಂ = ಕಡೆ; ಎನಿಸಿದ ನಿಪಾತಂ = ಎನಿಸಿದವ್ಯಯಂ; ಅವಧಾರಣೆ = ನಿರ್ಧಾರಣೆಯ ಎಕಾರಂ; ತಳ್ತ = ಪೊರ್ದುಗೆಯಾದ; ವಿಶಂಕೆಗಳ್ = ವಿಶಂಕೆಗಳ್; ಎಂಬಿವಱೊಳ್ = ಎಂಬಿವಱಲ್ಲಿ; ಸಂಧಿ = ಸಂಹಿತೆ; ವ್ಯವಹರಿಸದು = ಜಾರದು; ಆ ಪ್ಲುತಕ್ಕಂ = ಆ ಮೂಱು ಮಾತ್ರೆಯನುಳ್ಳ ಪ್ಲುತಕ್ಕಂ; ಅಭಾವಂ = ಸಂಧಿಯಿಲ್ಲ.

ವೃತ್ತಿ.—ನಿರ್ವಿಕಾರಿಗಳಪ್ಪ ಎ ಏ, ಒ ಓ ಎಂಬಿವು ಕಡೆಯಾದ ನಿಪಾತಮುಮ್ ಅವಧಾರಣೆಯುಂ, ವಿಶಂಕೆಯುಮ್ ಎಂಬಿವರ್ಕೆ ಸ್ವರಂ ಪರಮಾಗೆ, ಸಂಧಿಯಿಲ್ಲ; ಪ್ಲುತಕ್ಕಮಂತೆ ಸಂಧಿಯಿಲ್ಲ.

ಪ್ರಯೋಗಂ.—ನಿಪಾತಕ್ಕೆ -ಅರವೆ ಅರಲ್ದ ಬಯಲ್ದಾವರೆಗಳ; ಎಲೆ ಇವಳ್ತೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳೊದರೆ ಅಶ್ವಶಿಕ್ಷೆಯಿಂ: ಅರೆ ಎಡೆ ಹಸ್ತಿಶಿಕ್ಷಣವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂ; ಒಹೋ ಇರಲಿಂ ಪೆಱುವಱಿ ಮಾಹಾತ್ಮ್ಯಮುಂ.

ಅವಧಾರಣೆಗೆ—ನುಡಿದನೆ ಕಾವುದನೇ? ಎರ್ದೆ
ಗಿಡದಿರ್ ಜವನಿಟ್ಟರಕ್ಕೆ! ನಿನಗೀವುದನೇಂ ।
ನುಡಿದನೊ? ಅದು ಕಯ್ಯದು. ಮೇ
ಣ್ನುಡಿದುದು ತಪ್ಪುಗುಮೆ, ಗಂಗಚೂಡಾಮಣಿಯಾ
|| ಕಂದಂ ||

ಇಂದ್ರನಾತನೆ ಗುಣೋನ್ನತನಾತನೆ ಅಂಬುಜೋದರಂ.

ವಿಶಂಕೆಗೆ—ಇನಿಯನೆ? ಬೆಲ್ಲದಿಂದಿನಿಯನೀವನೆ? ಅಃ ಪಿರಿದೀವನಿತ್ತುದಂ ನೆನೆವನೆ? ಚಿಃ ಅದಂ ನೆನೆಯಂ. ಆನೆಯೊ ಅದ್ರಿಯೊ? ಗುರುವಿಲ್ಲ ಕರ್ಣನಿಲ್ಲ ಗುರುವಿನ ಮಗನಿಲ್ಲವೆನ್ನರೆ ಎನ್ನನಿನಿಯುಂ ಕವಿರಾಜಕುಂಜರಂ.

ಪ್ಲುತಕ್ಕೆ—ಕು ಕೂ ಕೂ಼ ಎಂದು, ಕೋಟಿ ಕೂಗಿತ್ತಾಗಳ್: ಹಾ ರಾಮಾ಼ ಎಂದು, ಸೀತೆ ಬಾಯಟಿದಟ್ಟಿಳ್.

## ಸೂತ್ರಂ.

Further, insertion of letters is not allowed after the ಓ in approvals or reproaches, after ಎಮ in consent, after the ಆ in surprise, and after particles of lamentation.

ಮೆಚ್ಚಿನೊಳಾಕ್ಷೇಪಕದೊ
ಳ್ಬಿಚ್ಚೋವಭ್ಯುಪಗಮಾರ್ಥದೆಮಶಬ್ದಂ ಕ |
ಟ್ಟಚ್ಚರಿಯ ಗಡಾರ್ಥಾತ್ವಂ
ಬಿಚ್ಚಿರ್ಕುಂ ಸ್ವರಮವಿದಿರೊಳಿರೆ ಖೇದದೊಳಂ ||57||

ಪದಚ್ಛೇದಂ.—ಮೆಚ್ಚಿನೊಳ್ ಆಕ್ಷೇಪಕದೊಳ್ ಬಿಚ್ಚ ಓ, ಅಭ್ಯುಪಗಮಾರ್ಥದ ಎಮ ಶಬ್ದಂ, ಕಟ್ಟಚ್ಚರಿಯ ಗಡಾರ್ಥಾತ್ವಂ ಬಿಚ್ಚಿರ್ಕುಂ, ಸ್ವರಂ ಅವು ಇದಿರೊಳ್ ಇರೆ; ಖೇದದೊಳಂ.

ಅನ್ವಯಂ.—ಮೆಚ್ಚಿನೊಳ್ ಆಕ್ಷೇಪಕದೊಳ್ ಬಿಚ್ಚ ಓ, ಅಭ್ಯುಪಗಮಾರ್ಥದ ಎಮ ಶಬ್ದಂ, ಕಟ್ಟಚ್ಚರಿಯ ಗಡಾರ್ಥಾತ್ವಂ—ಸ್ವರಂ ಅವು ಇದಿರೊಳ್ ಇರೆ—ಖೇದದೊಳಂ ಬಿಚ್ಚಿರ್ಕುಂ.

ಟೀಕು.—ಮೆಚ್ಚಿನೊಳ್ = ಮೆಚ್ಚಿನಲ್ಲಿ; ಆಕ್ಷೇಪಕದೊಳ್ = ಆಕ್ಷೇಪಕದಲ್ಲಿ; ಬಿಚ್ಚೋ = ಬಿಚ್ಚುಬಿಸುಗೆಯಾದ ಓಕಾರಂ; ಅಭ್ಯುಪಗಮಾರ್ಥದ = ಅಂಗೀಕಾರಾರ್ಥದ; ಎಮಶಬ್ದಂ = ಎಮ ಎಂಬ ಶಬ್ದಂ; ಕಟ್ಟಚ್ಚರಿಯ = ಕಡಿದಾದಾಶ್ಚರ್ಯದ; ಗಡಾರ್ಥಾತ್ವಂ = ಗಡಾರ್ಥದ ಆಕಾರಂ; ಸ್ವರಂ = ಸ್ವರಾಕ್ಷರಂ; ಅವು = ಅವು; ಇದಿರೊಳ್ = ಮುಂದೆ: ಇರೆ = ಇರೆ; ಖೇದದೊಳಂ = ದುಃಖದಲ್ಲಿಯುಂ; ಬಿಚ್ಚಿರ್ಕುಂ = ಸಂಧಿ ಬಿಚ್ಚಿರ್ಪುದು.

ವೃತ್ತಿ.—ಮೆಚ್ಚಿನೊಳ್ ಆಕ್ಷೇಪಕದೊಳ್ ನೆಲಸಿರ್ದ ಓಕಾರಕ್ಕಂ, ಅಂಗೀಕಾರಾರ್ಥದ ಎಮಶಬ್ದಕ್ಕಂ, ಗಡಾರ್ಥಕ್ಕಾದೇಶಮಾದಾಕಾರಕ್ಕಂ—ಸ್ವರಂ ಪರಮಾಗೆ—ಸಂಧಿಯಿಲ್ಲ; ಖೇದದೊಳಮಂತೆ ಸಂಧಿಯಿಲ್ಲ.

ಪ್ರಯೋಗಂ.—ಮೆಚ್ಚಿಂಗೆ—ಎಂತೆಂತೋ ಅಃ ಕಬ್ಬವೊಳ್ಳಿತ್ತಾಯ್ತು; ಏನೇನೋ ಓದಿನ ಪರಿ ಲೇಸು ಲೇಸು.

ಆಕ್ಷೇಪಕ್ಕೆ—ಎಡಱಿದನೋ ಅವನ ನೊಸಲಕ್ಕರವಂ ತೊಡೆದುದಕ್ಕುಂ; ಮುತ್ತಿದನೋ ಇಂದೆ ಕೋಂಟೆ ಧೂಳಿಪಟಂ.

ಎಮಶಬ್ದಕ್ಕೆ—ನಿಮಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ; ಸಿಂಗಮಕ್ಕೆಮ ಅಂಜೆಂ;

ಗಡಾರ್ಥದಾಕಾರಕ್ಕೆ—ಪಾಲಾ ಅಮರ್ದಾ ಇನ್ನಿದು ಗಡಾ ಆನಾಇಮ್ಮಡಿಯಾ ಎರಟ್ಕಿದುರೆಯಾ ಇರ್ಬರ್ಗೆರಟ್ಕೈದುವಾ!

ಖೇದಕ್ಕೆ—ಅಯ್ಯೋ ಅಕ್ಕಟಾ ಇಂದ್ರಂಗೆ ಕೇಡಾಯ್ತೆ?

### ಸೂತ್ರಂ.

It is also not used after ಪೊಱ, ಒಳ, ಪೊಸ, ಪೞ and ಎಳ.

ಪೊಱಗೊಳಗು ಪೊಸತು ಪೞಿದೆಳ
ದಱಿಕೆಯದಂತತೆಯುಮಾ ಸಮಾಸಾಂತರದೊಳ್ ।
ನೆಱೆ ತಾಳ್ದು ಸಂಧಿಯಾಗವು
ತಱಿಸಂದಿದಿರೊಳ್ಸ್ವರಂಗಳಾವುವು ಸಿಲೆಯುಂ ॥ ೫೮ ॥

ಪದಚ್ಛೇದಂ.—ಪೊಱಗು ಒಳಗು ಪೊಸತು ಪೞಿದು ಎಳದು ಅಱಿಕೆಯ ಅದಂತತೆಯುಂ ಆ ಸಮಾಸಾಂತರದೊಳ್ ನೆಱೆ ತಾಳ್ದು, ಇದಿರೊಳ್ ತಱಿಸಂದು ಸ್ವರಂಗಳ್ ಆವುವು ಸಿಲೆಯುಂ, ಸಂಧಿ ಆಗವು.

ಅನ್ವಯಂ.—ಪೊಱಗು ಒಳಗು ಪೊಸತು ಪೞಿದು ಎಳದು ಅಱಿಕೆಯ ಅದಂತತೆಯುಂ ಆ ಸಮಾಸಾಂತರದೊಳ್ ನೆಱೆ ತಾಳ್ದು, ಇದಿರೊಳ್ ತಱಿಸಂದು ಸ್ವರಂಗಳ್ ಆವುವು ಸಿಲೆಯುಂ ಸಂಧಿ ಆಗವು.

ಟೀಕು.—ಪೊಱಗು = ಪೊಱಗೆಂಬ ಶಬ್ದಂ; ಒಳಗು = ಒಳಗೆಂಬ ಶಬ್ದಂ; ಪೊಸತು = ಪೊಸತೆಂಬ ಶಬ್ದಂ; ಪೞಿದು = ಪೞಿದೆಂಬ ಶಬ್ದಂ; ಎಳದು = ಎಳದೆಂಬ ಶಬ್ದಂ; ಅಱಿಕೆಯ = ಉಪಾಂತದ ಅಕ್ಷರಕ್ಕೆ ಲೋಪವಾಗಿ ಅಕಾರವಂ ಪಡೆವುದೆಂಬ ಅಱಿಕೆಯ; ಅದಂತತೆಯುಂ = ಅಕಾರಾಂತತ್ವವಂ; ಆ ಸಮಾಸಾಂತರದೊಳ್ = ಆ ಸಮಾಸಮಧ್ಯದಲ್ಲಿ; ನೆಱೆ = ಚನ್ನಾಗಿ; ತಾಳ್ದು = ಧರಿಸಿ; ಇದಿರೊಳ್ = ಮುಂದುಗಡೆಯಲ್ಲಿ; ತಱಿಸಂದು = ಚನ್ನಾಗಿ ಸಂದು; ಸ್ವರಂಗಳ್ = ಸ್ವರಾಕ್ಷರಂಗಳ್; ಆವುವು = ಆವುವು; ಸಿಲೆಯುಂ = ನೆಲೆಗೊಂಡಿರೆಯುಂ; ಸಂಧಿ = ಸಂಹಿತೆ; ಆಗವು = ಆಗವು.

ವೃತ್ತಿ.—ಪೊಱಗು ಒಳಗು ಪೊಸತು ಪೞಿದು ಎಳದು ಎಂಬಿವರ್ಕೆ ಸಮಾಸವಿಷಯದೊಳುಪಾಂತಾಕ್ಷರಕ್ಕೆ ಲೋಪವಾಗಿ, ಅಕಾರಾಂತತೆಯುನೈದಿ, ನಿಪಾತದಂತೆ, ಪರದೊಳ್ಸ್ವರಮಾವುದಿರ್ದೊಡಂ, ಸಂಧಿ ಇಲ್ಲ.

ಪ್ರಯೋಗಂ.—ಪೊಱ ಅಡಿ, ಒಳ ಅಟ್ಟಂ, ಪೊಸ ಅಡಕೆ, ಪೞ ಅಲಗು, ಎಳ ಅಂಚೆ.

## ಸೂತ್ರಂ.

ಪರಪದಪೂರ್ವಂ ದ್ವಿತ್ವಾ
ಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾ ।
ಕ್ಷರಮಾಗೆ ಸಂಧಿ ದೋಷಂ
ಸರೇಫಮಿದಿರಾಗೆ ಶಿಥಿಲಮೆಂದನುಕರಿಪರ್ ॥ 59 ॥

(In writing Canarese) combination of letters is not to occur when the final letter of the first word is short and the initial letter of the second word is a double consonant.—This double consonant, when a compound with Rêpha, is, sometimes, considered as slack.

ಪದಚ್ಛೇದಂ.—ಪರಪದಪೂರ್ವಂ ದ್ವಿತ್ವಾಕ್ಷರಂ ಆಗಿ ಇರೆ, ಪೂರ್ವಪದದ ಚರಮಂ ಹ್ರಸ್ವಾಕ್ಷರಂ ಆಗೆ, ಸಂಧಿ ದೋಷಂ. ಸರೇಫಂ ಇದಿರ್ ಆಗೆ, ಶಿಥಿಲಂ ಎಂದು, ಅನುಕರಿಪರ್.

ಯಥಾನ್ವಯಂ. ಟೀಕು.—ಪರಪದ = ಮುಂದಣ ಪದದ; ಪೂರ್ವಂ = ಮೊದಲಕ್ಷರಂ; ದ್ವಿತ್ವಾಕ್ಷರಂ = ಒತ್ತಿನಕ್ಷರಂ; ಆಗಿ = ಆಗಿ; ಇರೆ = ಇರೆ; ಪೂರ್ವಪದದ = ಮೊದಲ ಪದದ; ಚರಮಂ = ಅಂತ್ಯಂ; ಹ್ರಸ್ವಾಕ್ಷರಂ = ಹ್ರಸ್ವವಾದಕ್ಷರಂ; ಆಗೆ = ಆಗೆ; ಸಂಧಿ ದೋಷಂ = ಸಂಧಿ ದೋಷವಪ್ಪುದು; ಸರೇಫಂ = ರೇಫೆಯೊಡನೆ ಕೂಡಿದಕ್ಷರಂ; ಇದಿರಾಗೆ = ಮುಂದಾಗೆ; ಶಿಥಿಲವೆಂದು = ಶಿಥಿಲವಾಗುವುದೆಂದು; ಅನುಕರಿಪರ್ = ಅಂಗೀಕರಿಸುವರ್.

ವೃತ್ತಿ.—ಪರಪದದ ಮೊದಲಕ್ಕರಂ ದ್ವಿತ್ವಮಾಗಿರೆ, ಪೂರ್ವಪದದ ಕಡೆಯಕ್ಕರಂ ಲಘುವಾಗಿರೆ, ಸಂಧಿ ದೋಷಮಕ್ಕುಂ. ಛಂದೋವಿಷಯದೊಳ್ ಪರಪದದ ಪೂರ್ವಾಕ್ಷರಂ ರೇಫೆವೆರಸಿರ್ದೊಡಂ, ಶಿಥಿಲಮಾಗಲಾರ್ಪುದೆಂದು ಕೆಲಂಬರದನಂಗೀಕರಿಸುವರ್.

ಪ್ರಯೋಗಂ.—ಸಂಧಿದೋಷಕ್ಕೆ—ಬರಿಸಿಪ್ರಧಾನರಂ ಕು
ಳ್ಳಿರಿಸಿಪ್ರಿಯಕುಶಲವಾರ್ತೆಯಂ ನೆಱೆ ಕೇಳ್ದು ॥
ಸ್ಥಿರಮಿರ್ದುಪ್ರಭು ನುಡಿಯೆ
ಪ್ರರೂಢಮುದನಾದನಾತನೆಂಬುದಮಾರ್ಗಂ
॥ ಕಂದಂ ॥

ಸರೇಫಸಂಯೋಗಕ್ಕೆ—ಮಿಱುಗುತ್ತಿರ್ಪ ತ್ರಿಶೂಲದಿಂ ಪ್ರಣಯದೆ ತ್ರಿಪಥೆಗೆ ನಡೆತರೆ ತ್ರಿಣೇತ್ರನೊಲವಿಂದೆ ತಾಳ್ದಿದಂ ಮಸ್ತಕದೊಳ್.

## ಸೂತ್ರಂ.

But it ought not to be considered as slack.

ಬಗೆಯದೆ ಸತೃಣಾಭ್ಯವಹಾ
ರಿಗಳುಸಿರ್ವರ್ಗದ್ಯಕಾವ್ಯದೊಳ್ನಿರ್ಬಂಧಂ ।
ಪುಗದೆಂದರೋಚಿಗಳದಂ
ತೆಗಟಿಂದಾ ಗದ್ಯಪದ್ಯಕಾವ್ಯದೊಳಿರ್ಕರ್ ॥ 60 ॥

ಪದಚ್ಛೇದಂ—ಬಗೆಯದೆ, ಸತೃಣಾಭ್ಯವಹಾರಿಗಳ್ ಉಸಿರ್ವರ್, ಗದ್ಯಕಾವ್ಯದೊಳ್ ನಿರ್ಬಂಧಂ ಪುಗದು ಎಂದು; ಅರೋಚಿಗಳ್ ಅದಂ, ತೆಗಟ್ ಎಂದು, ಆ ಗದ್ಯಪದ್ಯಕಾವ್ಯದೊಳ್ ಇರ್ಕರ್.

ಅನ್ವಯಂ.—ಸತೃಣಾಭ್ಯವಹಾರಿಗಳ್, ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದು, ಬಗೆಯದೆ, ಉಸಿರ್ವರ್; ಅರೋಚಿಗಳ್ ಅದಂ, ತೆಗಟ್ ಎಂದು, ಆ ಗದ್ಯಪದ್ಯಕಾವ್ಯದೊಳ್ ಇರ್ಕರ್.

ಟೀಕು.—ಸತೃಣ = ತೃಣದೊಡನೆ ಕೂಡಿದ; ಅಭ್ಯವಹಾರಿಗಳ್ = ವ್ಯಾಪಾರವನುಳ್ಳ ಕವಿಗಳ್; ಗದ್ಯಕಾವ್ಯದೊಳ್ = ಗದ್ಯಕಾವ್ಯದಲ್ಲಿ; ನಿರ್ಬಂಧಂ = ಬಲಾತ್ಕಾರಂ; ಪುಗದೆಂದು = ಪ್ರವೇಶವಾಗದೆಂದು; ಬಗೆಯದೆ = ವಿಚಾರಿಸದೆ; ಅದಂ = ಆ ಸರೇಫಮಿದಿರಾಗೆ ಶಿಥಿಲಮಪ್ಪುದೆಂಬ ಸಂಧಿಯಂ; ಉಸಿರ್ವರ್ = ಪೇಳ್ವರ್; ಅರೋಚಿಗಳ್ = ಹೇಯವುಳ್ಳವರ್; ಅದಂ = ಆ ಸಂಧಿಯಂ; ತೆಗಟಿಂದು = ನಿಂದೆ ಬರ್ಪುದೆಂದು; ಆ ಗದ್ಯಪದ್ಯಕಾವ್ಯದೊಳ್ = ಆ ಗದ್ಯಕಾವ್ಯ ಪದ್ಯಕಾವ್ಯಂಗಳಲ್ಲಿ; ಇರ್ಕರ್ = ವೇಟಿರ್.

## ಸೂತ್ರಂ.

When ಅಲ್ is joined to ಕರೆ, and ಅದೆ to ಇರ, or at the end of a half verse or after quotations from Samskrita, or also after imitative sounds or before ಋ Combination of letters is optional.

ಕರೆಗತ್ವದಿರ್ಗೆಯಲ್ಲದೆ
ಪರಮಿರೆ ಪದ್ಯಾರ್ಧವಾಕ್ಯವೇಷ್ಟನದೆಡೆಗಂ ।
ಸ್ಫುರದನುಕೃತಿಗಂ ಸ್ವರಮವು
ಪರಮಿರೆ ಋತ್ವಕ್ಕಮಂತೆ ಸಂಧಿವಿಕಲ್ಪಂ ॥ 61 ॥

ಪದಚ್ಛೇದಂ.—ಕರೆಗೆ ಅತ್ವದ ಇರ್ಗೆ ಅಲ್ ಅದೆ ಪರಂ ಇರೆ, ಪದ್ಯಾರ್ಥವಾಕ್ಯವೇಪ್ಸನದ ಎಡೆಗಂ ಸ್ಫುರದನುಕೃತಿಗಂ ಸ್ವರಂ ಅವು ಪರಂ ಇರೆ, ಋತ್ವಕ್ಕಂ ಅಂತೆ ಸಂಧಿವಿಕಲ್ಪಂ.

ಯಥಾನ್ವಯಂ. ಟೀಕು.—ಕರೆಗೆ= ಕರೆಯೆಂಬ ಧಾತುವಿಂಗೆ; ಅತ್ವದ= ಅಕಾರದ; ಇರ್ಗೆ= ಇರೆಂಬ ಧಾತುವಿಂಗೆ; ಅಲ್= ಅಲ್ ಎಂದು; ಅದೆ= ಅದೆ ಎಂಬುದು; ಪರಮಿರೆ= ಪರಮಾಗಿರೆ; ಪದ್ಯ= ಪದ್ಯಂಗಳ; ಅರ್ಥ= ಅರ್ಥದ; ವಾಕ್ಯವೇಪ್ಸನದ= ಸಂಸ್ಕೃತದ ವಾಕ್ಯವೇಪ್ಸನದ; ಎಡೆಗಂ= ಸ್ಥಾನಕ್ಕೆಯುಂ; ಸ್ಫುರತ್= ಪ್ರಕಾಶಿಸುವ; ಅನುಕೃತಿಗಂ= ಅನುಕರಣಶಬ್ದಕ್ಕೆಯುಂ; ಸ್ವರಂ= ಸ್ವರಾಕ್ಷರಂಗಳ್; ಅವು= ಅವು; ಪರಮಿರೆ= ಪರದಲ್ಲಿರೆ; ಋತ್ವಕ್ಕಂ= ಋಕಾರಂ ಪರಮಾದುದರ್ಕೆಯುಂ; ಅಂತೆ= ಹಾಂಗೆ; ಸಂಧಿ= ಸಂಹಿತೆ; ವಿಕಲ್ಪಂ= ವಿಕಲ್ಪವಪ್ಪುದು.

ವೃತ್ತಿ.—ಕರೆಯೆಂಬ ಶಬ್ದಕ್ಕೆ ಅಲ್ ಪರಮಾದೊಡಂ, ಅದಂತಮಾದ ಇರ್ಗೆ ಅದೆ ಪರಮಾದೊಡಂ, ಪದ್ಯಾರ್ಥಕ್ಕಂ ವಾಕ್ಯವೇಪ್ಸನಕ್ಕಂ ಅನುಕರಣೆಗಂ ಸ್ವರಂ ಪರಮಾದೊಡಂ, ಸಂಧಿವಿಕಲ್ಪಂ; ಋಕಾರಂ ಪರಮಾದೊಡಮಂತೆ ಕ್ರಮಂ.

ಅಲ್ ಅದೆಗಳ ವಿಸಂಧಿಗೆ—ಕರೆ+ಅಲ್=ಕರೆಅಲ್; ಇರ+ಅದೆ= ಇರಅದೆ. ಬಗೆವೊಡಬುನಿಸಿರಅದೆ.

ಅವಱ ಸಂಧಿಗೆ—ಮೈಗರೆಯಲ್ ಪಾಂಡವರ್ಗೆ ನೆಱೆದುವು ಬರಿಸಂ ಇರದೆ ಗರ್ಜಿಸಿ ಬೊಪ್ಪಲಂ ತಳರ್ದಂ ಜವಂ ತಳರ್ವಂದದಿಂ.

ಪದ್ಯಾರ್ಥಕ್ಕೆ ವಿಸಂಧಿಯಾದುದರ್ಕೆ—

ಅಲ್ಲಿ ಇದುಂಟೆಂಬರ್ಥದೊ
ಳಿಲ್ಲಿಯುಮುಳ್ಳೊಡೆಯವಂತಶಬ್ದಮುಮಕ್ಕುಂ ।
ಎಲ್ಲಂದದೊಳಂ ಪೋಲಿಸು
ವಲ್ಲಿ ಗುಣಾಧಿಕರೊಳಂತೆವೋಲೆನಲಕ್ಕುಂ ॥ ಕಂದಂ ॥

ಪದ್ಯಾರ್ಥಸಂಧಿಗೆ—ಬನದೊಳಗೆ ಪೋಗಿ ಪೊಸಪೂ
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ ।
ನಿನಿತೊಂದು ಬೇಗದಿಂ ನಿಂ
ನಿನಿಯನ ಪೞಿಕ್ಕೆಯೊಳಿರೆಂದು ಸಖಿ ತೊಲಗುವುದುಂ ॥ಕಂದಂ॥

ವಾಕ್ಯವೇಪ್ಸನವಿಸಂಧಿಗೆ—ಕಃ? ಕೇನಾರ್ಥಿ? ಕೋ? ದರಿದ್ರ ಎನೆತುಮನೆತುಮಂ ಧರ್ಮಜಂ ಸೂಱೆಗೊಟ್ಟಂ.

ವಾಕ್ಯವೇಷ್ಟನಸಂಧಿಗೆ—ನ ದೇವಚರಿತಂ ಚರನೆನಿಸಿದಯ್, ತ್ರಿಲೋಕೇಶ್ವರಾ!

ಅನುಕರಣವಿಸಂಧಿಗೆ—ಕವಕ್ಕವ ಎಲೆ ಎಲೆ ಉ ಊ ಪುಗಲ್ ಪುಗಲೆಂದೊಚ್ಚತಲೂಳ್ವ ಕೋಗಿಲೆಯುಂ.

ಅನುಕರಣಸಂಧಿಗೆ—ಘಂಮೆಂಬ; ಘಟಘಟೆಂಬ.

ಋಕಾರವಿಸಂಧಿಗೆ—ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟಿರ್ದ ಋಜ್ವಾಗತಂ.

ಋಕಾರಸಂಧಿಗೆ—ಸರಸಪ್ರೃಜುವೀರನೆಂದಾ |
ತರುಣಿಯನೊಸೆದಿತ್ತಂ || ಕಂದಭಾಗಂ ||

ವಾಕ್ಯವೇಷ್ಟನಶಬ್ದಮುಂ ಅನುಕರಣಶಬ್ದಮುಮಿರ್ದಂತಿರ್ಪುವು, ಕನ್ನಡ ವಿಭಕ್ತಿಯಂ ಮಾಡಬೇಡ. ನವೋ ನವೋ ಭವತಿ ಜಾಯಮಾನೋಽಹ್ನಾ ಎಂಬ ಸಂಸ್ಕೃತವಾಕ್ಯಾಂತಮಂ, ಜಾಯಮಾನೋಽಹ್ನಮೆಂದು, ಉಪಸಂಹರಿಸಲಾಗದು; ಧಗಧಗ ಎಂಬುದುಂ ಧಗಧಗಂ ಎನಲಾಗದು.

## ಸೂತ್ರಂ.

Combinations of letters is to be used with much discretion, and obscenities are to be avoided by all means.

ಪದಯುಗದ ಸಂಧಿಯಂ ಬೇ
ಱದೊಂದಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾ |
ರ್ಗದೊಳುಳ್ಳ ಸಂಧಿಯಂ ಕೆಡಿ
ಪುದುಮಾಗದು ತಾಂ ಯಥೇಷ್ಟಮೆಂದಱಿವುಳ್ಳರ್ ||62||

ಪದಚ್ಛೇದಂ.—ಪದಯುಗದ ಸಂಧಿಯಂ ಬೇಱೆ ಅದು ಒಂದು ಅಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾರ್ಗದೊಳ್ ಉಳ್ಳ ಸಂಧಿಯಂ ಕೆಡಿಪುದುಂ ಆಗದು ತಾಂ, ಯಥೇಷ್ಟಂ ಎಂದು, ಅಱಿವುಳ್ಳರ್.

ಅನ್ವಯಂ.—ಅಱಿವುಳ್ಳರ್ ತಾಂ, ಯಥೇಷ್ಟಮೆಂದು, ಪದಯುಗದ ಸಂಧಿಯಂ ಬೇಱೆ ಅದೊಂದು ಅಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾರ್ಗದೊಳುಳ್ಳ ಸಂಧಿಯಂ ಕೆಡಿಪುದುಂ ಆಗದು.

ಟೀಕು.—ಅಱಿವುಳ್ಳರ್ = ವಿಚಾರವುಳ್ಳ ಕವಿಗಳ್; ತಾಂ = ತಾಂ; ಯಥೇಷ್ಟಮೆಂದು = ಸಂಧಿಯಥೇಷ್ಟಮೆಂದು, ಇಚ್ಛೆ ಬಂದ ಹಾಂಗೆ ಎಂಬರ್ಥಂ; ಪದಯುಗದ = ಪದವೆರಡಱ; ಸಂಧಿ

ಯಂ = ಸಂಹಿತೆಯಂ; ಬೇಱಿ = ಅನ್ಯವಾಗಿ; ಅದೊಂದು = ಅದು ತಾನೊಂದು; ಅಸಹ್ಯೋಕ್ತಿ = ಅಸಹ್ಯವಾದ ವಾಕ್ಯಂ; ಪುಟ್ಟೆ = ಹುಟ್ಟೆ; ಮಾಡುವುದುಂ = ಸಂಧಿ ಮಾಡುವುದುಂ; ಮಾರ್ಗದೊಳ್ = ಕವಿಮಾರ್ಗದಲ್ಲಿ; ಉಳ್ಳ ಸಂಧಿಯಂ = ರೂಢವಾಗಿ ಉಳ್ಳ ಸಂಧಿಯಂ: ಕೆಡಿಪುದುಂ = ಸ್ವರಲೋಪಸಂಧಿಯಂ ಮಾಡಿ ಕೆಡಿಸುವುದುಂ; ಅಗದು = ಸಲುವಳಿಯಾಗದು.

ವೃತ್ತಿ.—ಎರಡು ಪದಂಗಳ ನಡುವೆ, ಬೇಱೊಂದು ದುಃಪ್ರತೀತಿ ಪುಟ್ಟುವೊಡೆ, ಸಂಧಿಯಂ ಮಾಡಲಾಗದು; ಸಂಧಿ ಯಥೇಷ್ಟಮೆಂದು, ರೂಢಮಪ್ಪ ಸಂಧಿಯಂ ಕೆಡಿಸಿ (ಸ್ವರಲೋಪಸಂಧಿಯಂ ಮಾಡಲ್ಕಾಗದು.

ಪ್ರಯೋಗಂ.—(ಸಂಧಿದೋಷಪರಿಹಾರದ) ಲಕ್ಷ್ಯಂ :—

ಬನ್ನಿಯ ತರು ಡಕ್ಕೆಗೆ ಸುರ
ಹೊನ್ನೆಯ ತರು ಡಮರುಗಕ್ಕೆ ಕರುವಿಡಿದಿರ್ಪಾ ।
ಚೆನ್ನಂಗಿಯ ತರು ಡಾಣೆಗೆ
ಹೊನ್ನಂ ಕುಡುವೆಡೆಗೆ ಕಲ್ಪತರು ಡಾಕರಸಾ ॥ ಕಂದಂ ॥

(ಸಂಧಿದೋಷದ ,ಅಸಹ್ಯೋಕ್ತಿಗೆ)—(ಆಸೆಗಣಿತಾ. ಪೂಸಲೆಸೊಗಸು. ಹೇಲತಾಕೋಮಲಾಂಗ). ಪೂಱಿವಕೆಯನ್ತರವೇಱಿಸೇ. ಪೊಸ ತುಲ್ಲಾರಂ. ಮೆಚ್ಚುತುಣ್ಣಿ.

ವಿಸಂಧಿದೋಷಕ್ಕೆ—ಅಸಿಯ ಒಱೆ ಬೆಸೆದ ಪೆಟ್ಟಿಗೆ
ಮಿಸುಗುವ ಱಿಸೈದೆ ತೊಳಪ ಕನ್ನವುರಂ ಚೆ ।
ಲ್ವೆಸದಿರೆ ಬಲವರ್ಪ ಏಟರ್
ಕುಸುಮೇಷುವ ಮೇಳದವರ್ಗಳೆನಿಸಿದರದಱೊಳ್
॥ ಕಂದಂ ॥

ಪೊನ್ನ ಅಂದಳಂ ಎಂದಿಂತು ಸಂಧಿಯಂ ಕಿಡಿಸಲಾಗದು.

## ಸೂತ್ರಂ.

Also sounds disagreeable to the ear (for instance the joining of two Rêphas) are to be avoided.

ಎರಡುಂ ರೇಫೆಗಳಂ ತಂ
ದುರವಣೆಯಿಂ ಕೂಡಿದಂತೆವೋಲ್ಶ್ರುತಿಕಷ್ಟಂ ।
ಬರೆ ಸಂಧಿ ಮಾಡಲಾಗದು
ಕರಡೆಯ ಗಿರ್ಗಟದ ದನಿವೊಲಮರವವೆಂದುಂ ॥ 63 ॥

ಪದಚ್ಛೇದಂ.—ಎರಡುಂ ರೇಫೆಗಳಂ ತಂದು ಉರವಣೆಯಿಂ ಕೂಡಿದಂತೆವೋಲ್ ಶ್ರುತಿಕಷ್ಟಂ ಬರೆ, ಸಂಧಿ ಮಾಡಲ್ ಆಗದು; ಕರಡೆಯ ಗಿರ್ಗಟದ ದನಿವೋಲ್ ಅಮರವು ಅವು ಎಂದುಂ.

ಅನ್ವಯಂ.—ಅವು ಎಂದುಂ ಕರಡೆಯ ಗಿರ್ಗಟದ ದನಿವೋಲ್ ಅಮರವು.

ಟೀಕು.—ಎರಡುಂ ರೇಫೆಗಳಂ = ಪೂರ್ವಪದದ ಕಡೆಯಲ್ಲಿ ಪರಪದದ ಮೊದಲಲ್ಲಿ ಇರ್ದ ಎರಡು ರೇಫೆಗಳುಂ; ತಂದು = ತಂದು ಕೊಂಡು; ಉರವಣೆಯಿಂ = ಶೀಘ್ರದಿಂದೆ; ಕೂಡಿದಂತೆವೋಲ್ = ಕೂಡಿದ ಹಾಂಗೆ; ಶ್ರುತಿಕಷ್ಟಂ = ಶ್ರುತಿಕಷ್ಟವೆಂಬ ಕರ್ಣಕಠೋರಂ; ಬರೆ = ಬರೆ; ಸಂಧಿ ಮಾಡಲ್ = ಸಂಧಿಯಂ ಮಾಡಲ್ಕೆ; ಆಗದು = ಸಲುವಳಿಯಾಗದು; ಅವು = ಅವು; ಎಂದುಂ = ಆವಾಗಳುಂ; ಕರಡೆಯ = ಕರಡೆಯೆಂಬ ವಾದ್ಯದ; ಗಿರ್ಗಟದ = ಗಿರ್ಗಟಿಯೆಂಬ ವಾದ್ಯದ; ದನಿವೋಲ್ = ಧ್ವನಿಯ ಹಾಂಗೆ; ಅಮರವು = ಪೊರ್ದುಗೆಯಾಗವು.

ವೃತ್ತಿ.— ಪದಂಗಳೆರಡಱಂತರಾಳರೇಫೆಗಳಂ, ಕೂಡಿದಂತೆ ಶ್ರುತಿಕಷ್ಟಮಾಗೆ, ಸಂಧಿಯಂ ಮಾಡಲಾಗದು; ಕರಡೆಯ ಗಿರ್ಗಟದ ಧ್ವನಿಯಂತಿರವು ನೇರ್ಪಡವು.

ಪ್ರಯೋಗಂ.— ರೇಫದ್ವಿತೀಯಸಂಧಿದೋಷಕ್ಕೆ— ಬಂದರ್ರಾಮರ್; ದೇವರ್ರಕ್ಷಿಸುಗೆ; ಮೂವರ್ರಾಯರನೆ ಮಾಱುವಂತೆಸೆದಿರ್ಕುಂ.

ಶ್ರುತಿಕಷ್ಟಕ್ಕೆ— ಏದ್ವಿಟ್ಸ್ತ್ರಯರೆಂದು, ಮಾಡಲಾಗದು.

## ಸೂತ್ರಂ.

Combination of letters regarding the ಎ of strict emphasis and ಅರೆ, when their meaning is modified

ಅವಧಾರಣೆಯನಿಯೋಗ
ವ್ಯವಹೃತಿಯಿಂದಿರೆ ನಿಪಾತವಿಷಯದೊಳಲ್ಪಾ ।
ರ್ಥವನಾಳ್ದರೆ ವಸ್ತುವಿನ
ರ್ಥವನುಸಿರುತ್ತಿರೆ ತಗುಳ್ಚುವುದು ಸಂಹಿತೆಯಂ ॥64॥

ಪದಚ್ಛೇದಂ.—ಅವಧಾರಣೆ ಎ ಅನಿಯೋಗವ್ಯವಹೃತಿಯಿಂದೆ ಇರೆ, ನಿಪಾತವಿಷಯದೊಳ್ ಅಲ್ಪಾರ್ಥವಂ ಆಳ್ದ ಅರೆ ವಸ್ತುವಿನ ಅರ್ಥವಂ ಉಸಿರುತ್ತ ಇರೆ, ತಗುಳುವುದು ಸಂಹಿತೆಯಂ.

ಅನ್ವಯಂ.—ಸಂಹಿತೆಯುಂ ತಗುಳ್ಚುವುದು.

ಟೀಕು.—ಅವಧಾರಣೆ= ಅವಧಾರಣೆಯ ಎಕಾರಂ; ಅನಿಯೋಗವ್ಯವಹೃತಿಯಿಂದೆ= ತನ್ನ ನಿಯತಾರ್ಥವಂ ಬಿಟ್ಟು ಅನಿಯೋಗವ್ಯವಹಾರದಿಂದೆ; ಇರೆ= ಇರೆ; ನಿಪಾತವಿಷಯದೊಳ್= ಅವ್ಯಯವಿಷಯದಲ್ಲಿ; ಅಲ್ಪಾರ್ಥವಂ= ಕಿಱಿದೆಂಬಲ್ಪಾರ್ಥವಂ; ಅಳ್ದ= ತಾಳ್ದ; ಅರೆ= ಅರೆಯೆಂಬ ಶಬ್ದಂ; ವಸ್ತುವಿನ= ಒಂದು ವಸ್ತುವಿನ; ಅರ್ಧವಂ= ಸರಿ ಭಾಗವಂ; ಉಸಿರುತ್ತಿರೆ= ಹೇಳುತ್ತಿರೆ; ಸಂಹಿತೆಯುಂ= ಸಂಧಿಯುಂ; ತಗಳ್ಚುವುದು= ಎಯ್ದುವದು.

ವೃತ್ತಿ.—ಅವಧಾರಣೆಯ ಎಕಾರಂ ತನ್ನ ನಿಯತಾರ್ಥಮಂ ಬಿಟ್ಟು ಅನಿಯೋಗವಾದಲ್ಲಿಯುಂ ಕಿಱಿದೆಡೆಯುಂ ಪೇೞ್ವ ನಿಪಾತಾರ್ಥದರೆಯೆಂಬ ಶಬ್ದವೊಂದು ವಸ್ತುವಿನ ಭಾಗಮಂ ಪೇೞ್ವಲ್ಲಿಯುಂ ಸಂಧಿಯುಂಟು.

ಪ್ರಯೋಗಂ.— ಅನಿಯತನಿಯೋಗಸಂಧಿಗೆ—ಮೂವುರನಲ್ಲದಿಲ್ಲ; ತನಿಗಂಪಿನ ಮಲ್ಲಿಗೆಯಲ್ಲದಿಲ್ಲ. ಅರೆಯ ಸಂಧಿಗೆ—ಕುರುಪತಿಯುಂ ವಿಷು ಬೇಡಿದಂ ಧರೆಯರೆಯುಂ.

## 2. Combination of Consonants.

### ಸೂತ್ರಂ.

In combination ಕ, ತ, ಪ, when initials of the second word, are often changed into ಗ, ದ, ಬ.

ಇರೆ ವರ್ಗಪ್ರಥಮಂಗಳ್
ಪರದೊಳ್ಚಟವರ್ಗಮುಱಿಯೆ ತಮ್ಮ ತೃತೀಯಾ |
ಕ್ಷರಮಕ್ಕುಂ ಪದವಿಧಿಯೊಳ್
ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯಂ || 65 ||

ಪದಚ್ಛೇದಂ.—ಇರೆ ವರ್ಗಪ್ರಥಮಂಗಳ್ ಪರದೊಳ್—ಚಟವರ್ಗಂ ಉಱಿಯೆ—ತಮ್ಮ ತೃತೀಯಾಕ್ಷರಂ ಅಕ್ಕುಂ ಪದವಿಧಿಯೊಳ್; ಪರಿಹರಿಸಲ್ ಬಾರದು ಅಲ್ಲಿ ಬಹುಳಸ್ಥಿತಿಯಂ.

ಅನ್ವಯಂ.—ಪದವಿಧಿಯೊಳ್—ಚಟವರ್ಗಂ ಉಱಿಯೆ—ವರ್ಗಪ್ರಥಮಂಗಳ್ ಪರದೊಳ್ ಇರೆ, ತಮ್ಮ ತೃತೀಯಾಕ್ಷರಂ ಅಕ್ಕುಂ; ಅಲ್ಲಿ ಬಹುಳಸ್ಥಿತಿಯಂ ಪರಿಹರಿಸಲ್ ಬಾರದು.

ಟೀಕು.—ಪದವಿಧಿಯೊಳ್= ಸಮಾಸವಿಧಿಯಲ್ಲಿ; ಚಟವರ್ಗಂ= ಚವರ್ಗ ಟವರ್ಗಂಗಳ್; ಉಱಿಯೆ= ಹೊಱತಾಗೆ; ವರ್ಗ= ವರ್ಗಂಗಳ; ಪ್ರಥಮಂಗಳ್= || ಕ || ತ || ಪ || ಎಂಬ ಮೊದಲಕ್ಷರಂಗಳ್; ಪರದೊಳ್= ಪರಪದದಾದಿಯಲ್ಲಿ; ಇರೆ= ಇರೆ; ತಮ್ಮ= ತಮ್ಮ ತಮ್ಮ; ತೃತೀಯಾಕ್ಷರಂ= || ಗ || ದ || ಬ || ಎಂಬ ಮೂಱನೆಯಕ್ಷರಂಗಳ್; ಅಕ್ಕುಂ=

ಅಪ್ಪವು; ಅಲ್ಲಿ = ಆ ತೃತೀಯಾಕ್ಷರವಾಗುವಲ್ಲಿ; ಬಹುಳಸ್ಥಿತಿಯಂ = ಬಹುಳದ ಸ್ಥಿತಿಯಂ; ಪರಿಹರಿಸಲ್ಬಾರದು = ಬಿಡಬಾರದು.

ವೃತ್ತಿ.—ಚಟವರ್ಗದಿಂ ಪಿಂಗಿದ ಕ, ತ, ಪಂಗಳ್ಪರಪದದಾದಿಯೊಳಿರ್ದು, ಸಮಾಸವಿಷಯದೊಳ್ತಮ್ಮ ತಮ್ಮ ತೃತೀಯಾಕ್ಷರಂಗಳಂ ಬಹುಳತೆಯಿನೆಯ್ದುಗುಂ.

ಪ್ರಯೋಗಂ.—ಕಕಾರದ ತೃತೀಯತ್ವಕ್ಕೆ—ಪಱಿಗನ್ನಡದ ಪುದುಂಗೊಳೆ

ಕೊಱೆಸಕ್ಕದಮಂ ತಗುಳ್ಚಿ ಜಾಣೆಡೆಮುತ್ತುಂ ।
ಮೆಱಿಸ ಲ್ಗೋದಂತಿರೆ ಪೇ
ಳ್ವಿಱಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ ||ಕದಂ||

ಗಱೆಗೂಡಾಡುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮು
ನ್ನುಱಿವರ್ || ಇತ್ಯಾದಿ, ಮತ್ತೇಭವಿಕ್ರೀಡಿತವೃತ್ತಂ ||

ತಕಾರದ ತೃತೀಯತ್ವಕ್ಕೆ—ಕಣ್ದೆಱಿವು; ಮೆಯ್ಲ್ದುಡುಗೆ; ಮಣಿಯುಡಿದೊವಲುಂ ಪಿರಿಯ ಪಣೆಗಟ್ಟಿಂ; ನಿಱುದಲೆ ನೀಳ್ಪವೆತ್ತ ನಗೆಗಣ್; ಬೆಳರ್ಗೆಂಪಿನ ಸೊಂಪನಾಳ್ದ ಬಾಯ್ದೆಱೆ.

ಪಕಾರದ ತೃತೀಯತ್ವಕ್ಕೆ—ಕಣ್ಬನಿ; ತಣ್ಬೆಱಲ್; ತಳದೊಳ್ ರುದ್ರಂ ಕಂಡಲ್ಲಿ ಕಣ್ಬೊಲನಾಗೆ.

ಬಹುಳಮೆಂಬುದಱಿಂದೆ ಕಿಱಿದೆಡೆಯೊಳಿಲ್ಲ—ತಲೆಕಟ್ಟು; ಬೆಸೆಕೋಲ್; ಒಳಕಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು; ಏಡುಪಂಡಿ.

ಚಟವರ್ಗಕ್ಕೆ ತೃತೀಯತ್ವಮೆಂದುಮಿಲ್ಲದುದರ್ಕೆ—ಕಡುಚಾಗಿ; ಕಣ್ಚಾಲ್ಲಂ; ಚಿಕ್ಕಚೋಜಿಗಂ; ಬಱಿಚೆನ್ನಂ; ಕಡುಟಕ್ಕು; ಮಾಣಿಕಟಕ್ಕೆ; ಪೊಸಟೊಪ್ಪಿಗೆ; ಕಳ್ಳಟಿಪ್ಪಣಂ.

## ಸೂತ್ರಂ.

ಒಂದೆರಡರ್ಕೆ ಱಕಾರ
ಕ್ಕಂದಾದಾದೇಶರೇಫೆಗಂ ಡತ್ವಕ್ಕಂ ।
ಬಂದಾದೇಶಱಿಱಿಕ್ಕಂ
ಸಂಧಿಸದು ತೃತೀಯವೃತ್ತಿ ಕತಪಕ್ಕೆಂದುಂ || 66 ||

The foregoing rule is, for instance, not made use of when ಕ, ತ, ಪ occur after ಒರ್ and ಇರ್ after ೯ when substitute of ಱ್, and after ೞ್ when substitute of ಡ್.

ಪದಚ್ಛೇದಂ.—ಒಂದೆರಡರ್ಕೆ, ಱಕಾರಕ್ಕೆ ಅಂದು ಆದ ಆದೇಶರೇಫೆಗಂ, ಡತ್ವಕ್ಕಂ ಬಂದ ಆದೇಶೞೞಿಕ್ಕಂ ಸಂಧಿಸದು ತೃತೀಯವೃತ್ತಿ ಕತಪಕ್ಕೆ ಎಂದುಂ.

ಅನ್ವಯಂ.—ಒಂದೆರಡರ್ಕೆ, ಱಕಾರಕ್ಕೆ ಅಂದಾದಾದೇಶರೇಫೆಗಂ, ಡತ್ವಕ್ಕಂ ಬಂದಾದೇಶ ೞೞಿಕ್ಕಂ ಕತಪಕ್ಕೆ ತೃತೀಯವೃತ್ತಿ ಎಂದುಂ ಸಂಧಿಸದು.

ಟೀಕು.—ಇಲ್ಲಿ ಅನುವರ್ತನೆ—ಪದವಿಧಿಯೊಳ್ ವರ್ಗಪ್ರಥಮಂಗಳ್ ಪರದೊಳಿರೆ (ಸೂ. 65) ಒಂದೆರಡರ್ಕೆ = ಒಂದೆರಡೆಂಬಿವರ್ಕೆ; ಱಕಾರಕ್ಕೆ = ಱತ್ವಕ್ಕೆ; ಅಂದು = ಆ ಸಮಾಸ ಮಾಡು ವಂದು; ಆದಾದೇಶರೇಫೆಗಂ = ಆದ ಆದೇಶದ ರೇಫೆಗೆಯುಂ; ಡತ್ವಕ್ಕಂ = ಡಕಾರಕ್ಕೆಯುಂ; ಬಂದ ಆದೇಶೞೞಿಕ್ಕಂ = ಬಂದ ಆದೇಶದ ೞೞಿಕ್ಕೆಯುಂ; ಕತಪಕ್ಕೆ = ಪರಮಾದ ಕತಪಂಗಳ್ಗೆ; ತೃತೀಯವೃತ್ತಿ = ಮೂಱನೆಯಕ್ಷರದ ವೃತ್ತಿ; ಎಂದುಂ = ಆವಾಗಳುಂ; ಸಂಧಿಸದು = ಸಂಘಟನೆಯಾಗದು, ಬಾರದೆಂಬುದರ್ಥಂ.

ವೃತ್ತಿ.—ಒಂದೆರಡೆಂಬಿವರ್ಕಂ, ಱಕಾರಕ್ಕಾದೇಶಮಾದ ರೇಫೆಗಂ, ಡಕಾರಕ್ಕಾದೇಶಮಾದ ೞೞಿಕ್ಕಂ ಪರಮಾದ ಕ ತ ಪಂಗಳ್ಗೆಂದುಂ ತೃತೀಯತ್ವಮಿಲ್ಲ.

ಪ್ರಯೋಗಂ.—ಒಂದರ್ಕೆ—ಒರ್ಕೈಸಿ ಬಿಲ್ಲುಮಂಬುಮ

ನುರ್ಕಾಳ್ಗಳ್ ಸುರಿಗೆನೀಳ್ತು ಮಾಣ್ದಿರದಾ ಗೋ ।
ವರ್ಕಳಿದಿರ್ಚಿದ ಘೋೞಿೞಾ
ಯ್ತುರ್ಕಳೊಳೆಕ್ಕತುಳುಮಿೞಿದು ಕುೞಿದೞಿಯಾದರ್ ॥ಕಂದಂ॥

ಒರ್ಮುತ್ತೆಂಬಿನಂ ತುತ್ತಿ ದೇವಗಣಕ್ಕಚ್ಚರಿಯಾಗಿ ಪಾೞಿ; ಒರ್ಪಡಿಗೂೞಿಸಂ ಪಿತ್ರಗನ ಕಪ್ಪಡಮುಂ.

ಎರಡರ್ಕೆ—ಇರ್ಕೋಡಿಯಿಂ ತೀವಿ ನಾಲ್ದೆಸೆಗಂ ಸೂಸಿ; ಇರ್ತಲೆಗೊಉಜಂ; ಪಿರಿದಿರ್ಪತ್ತು ತೋಳುಂ ದಶಮುಖಕುಹರಾಟೋಪಮುಂ

ಱಕಾರಕ್ಕಾದೇಶಮಾದ ರೇಫೆಗೆ—ಮಾರ್ಕೊರಲ ಭೈರವಂ; ಮಾರ್ಕಟ್ಟೆ; ಮಾರ್ತಲೆ; ಮಾರ್ತಪ್ಪ ತೆರೆಗಳಿಂ ತರಲಾರ್ತುದು ತನ್ನದಿಗೆ ಸುರನದಿವಿಭ್ರಮಮಂ. ಬೇರ್ಪಟ್ಟಂ. ಏರ್ಪತ್ತರೇರ್ಪತ್ತರಂ ಪದುಳಂ ಮಾೞ್ಪುದುಚಿತಂ.

ಡಕಾರಕ್ಕಾದೇಶಮಾದ ೞೞಿಕ್ಕೆ—ಕಾೞ್ಕಿಚ್ಚು ತಗುಳೆ ತಮ್ಮೊಳ್ ಕೋೞ್ಕಟ್ಟೆ; ಕಾೞ್ತುೞಿ ಮಸಗಿದ ಪೋಲ್ ಒಡ್ಡಿದುದು ಕುರುಸೈನ್ಯಂ; ನಾೞ್ಪಿಗರಣಂ; ನಾೞ್ತುಡುಗುಣಿ; ಕಾೞ್ಪಿರಮಾಗೆ ಕಾವ್ಯರಸಮ್ ಅರ್ಥಮುಮಕ್ಕರಮುಂ ಪ್ರತೀತಿಯುಂ ಮಾೞ್ಪಿಸೆಗಂ.

ಸಮುಚ್ಚಯವಶದಿಂದೆ ಕೆಳಗಣ್ಗಾದೇಶಮಾದ ಱಿಱಿಕ್ಕಂ ತೃತೀಯತ್ವ ಮಿಲ್ಲ, ಕಿಱ್ಱಿಱಿ ಎಂಬಂತೆ.

## ಸೂತ್ರಂ.

After vowels and radical (half) consonants the letters ಪ, ಬ, ಮ are, also in metrical and nonmetrical prose, often changed into ವ.

ವಿದಿತಸ್ವರದಿನನಾದೇ
ಶದ ಸಹಜವ್ಯಂಜನಂಗಳಿಂ ಪರದ ಪವ |
ರ್ಗದ ನೆಲೆಗಕ್ಕುಂ ವತ್ವಂ
ಪದವಿಧಿಯೊಳ್ಬಹುಳವೃತ್ತಿಯಿಂ ವಾಕ್ಯದೊಳಂ || 67 ||

ಪದಚ್ಛೇದಂ.—ವಿದಿತಸ್ವರದಿಂ ಅನಾದೇಶದ ಸಹಜವ್ಯಂಜನಗಳಿಂ ಪರದ ಪವರ್ಗದ ನೆಲೆಗೆ ಅಕ್ಕುಂ ವತ್ವಂ ಪದವಿಧಿಯೊಳ್ ಬಹುಳವೃತ್ತಿಯಿಂ ವಾಕ್ಯದೊಳಂ.

ಅನ್ವಯಂ.—ಪದವಿಧಿಯೊಳ್ ಬಹುಳವೃತ್ತಿಯಿಂ, ವಾಕ್ಯದೊಳಂ ವಿದಿತಸ್ವರದಿಂ ಅನಾದೇಶದ ಸಹಜವ್ಯಂಜನಗಳಿಂ ಪರದ ಪವರ್ಗದ ನೆಲೆಗೆ ವತ್ವಂ ಆಕ್ಕುಂ.

ಟೀಕು.—ಪದವಿಧಿಯೊಳ್ = ಸಮಾಸದ ವಿಧಿಯಲ್ಲಿ; ಬಹುಳವೃತ್ತಿಯಿಂ = ಬಹುಳದ ವರ್ತನೆಯಿಂದೆ; ವಾಕ್ಯದೊಳಂ = ವಾಕ್ಯದಲ್ಲಿಯುಂ; ವಿದಿತಸ್ವರದಿಂ = ಪ್ರಸಿದ್ಧಮಾದ ಸ್ವರಾಕ್ಷರಂಗಳಿಂದೆ; ಅನಾದೇಶದ = ಆದೇಶವಲ್ಲದ; ಸಹಜವ್ಯಂಜನಂಗಳಿಂ = ಸಹಜವಾದ ವ್ಯಂಜನಾಕ್ಷರಂಗಳಿಂದೆ; ಪರದ = ಮುಂದಣ; ಪವರ್ಗದ = || ಪ || ಬ || ಮ ಎಂಬ ಪವರ್ಗದ; ನೆಲೆಗೆ = ಸ್ಥಾನಕ್ಕೆ; ವತ್ವಂ = ವಕಾರಂ, ಅಕ್ಕುಂ = ಅಪ್ಪುದು.

ವೃತ್ತಿ.—ಸ್ವರಂಗಳಿಂದನಾದೇಶದ ಸಹಜವಾದ ವ್ಯಂಜನಂಗಳಿಂ ಪರದೊಳಿರ್ದ ಪವರ್ಗಕ್ಕೆ ಸಮಾಸವಿಷಯದೊಳ್ವತ್ವಮಕ್ಕುಂ; ಬಹುಳಮೆಂಬುದಱಿಂ ಕೆಲವೞಿೊಳಿಲ್ಲ; ವಾಕ್ಯದೊಳಂ ವತ್ವಮುಂಟು.

ಪ್ರಯೋಗಂ.—ಸ್ವರಂಗಳ್ಗೆ—

ಪಕಾರಕ್ಕೆ—ಎಳವೆಱೆ ವಾಡೆ ಕೆಂದಳಿರ ನಾಲಗೆ ಮಾಮರದಳ್ಳಿಗೊಂ
ಬಿನೊಳ್ ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರ
ಮೆಂಬಿನಂ ಮಸಂ | ಗೊಳೆಮಧುಮಾಸಕೇಸರಿ ವಿಯೋ
ಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುದ್ಧಕೀರಮ
ದಕೋಕಿಲಗರ್ಜಿತತರ್ಜಿತಂಗಳಿಂ || ಉತ್ಪಲಮಾಲಿಕಾವೃತ್ತಂ ||
ಬೆಳೆವೊಲನೆತ್ತಲ್ ಕಾಕಿಱಿದೆ ಪರ್ಬಿದ ಪೆರ್ಬಾಳ್ (?).

ಬಕಾರಕ್ಕೆ—ನಡುವಣ ಕರ್ಪುಂ ಕಡೆಯಣ
ಕಡುವೆಳ್ಪುಂ ತುದಿಯ ಕೂರ್ಪುಮೆಸದಿರೆ ಏಟರಂ ।
ಬಿಡದೆಸಲೆ ತೆಗೆದ ಮದನನ
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ॥ಕಂದಂ॥

ಮಕಾರಕ್ಕೆ—ಮರವಣಿಗಂ ಬೀಣೆಗಮಂ
ತರಮಾವುದು ದೋಷರಹಿತಮೃದುಲಲಿತಪದ ।
ಸ್ಫುರಿತಸರಸೋಕ್ತಿಗಂ ನಿ
ಷ್ಠುರಕುಕವಿಕಟೂಕ್ತಿಗಳ್ಗಮೇನಂತರಮೋ ॥ ಕಂದಂ ॥
ಕಳೆಯಲ್ಕಾಗದು ನರಪತಿಕುಳವನಱಿವ ಪಱಿವಾನಿಸನಂ.

ಸಹಜವ್ಯಂಜನಕ್ಕೆ—ಪ—ಬೇರ್ವೆರಸು ಕಾಯ್ತ್ತ ಪಲಸೆಳ ನೀರ್ವೊನಲಂ ಕಱಿದು ತೆಂಗು.

ಬ—ಮೆಯ್ಸುಸೆವೊಂದೆ ಪೂವಿನೊಳೆ ಪೋಗಿ ಮೊಗಂ ಮುರಿದಳ್ಕೆಗೊಪ್ಪಿ ನೊಳ್ ಪಾದುದು.

ಮ—ಸಾತಿಶಯಾರ್ಥಮುಮಂ ಮೆಲ್ಪಾತುಮನೊಸೆದಿತ್ತರೊಲಿದು ತವ ಗಿಲ್ಲದುವಂ.

ಬ—ಗೇಣ್ಬಾಯ್ಗೆ ವೀೞಿದೆ. ಆಳ್ವಲ್ಮೆ. ತೋಳ್ವಲ್ಮೆ. ಪ—ಬೇಟಮಂ ಹಡೆ ದನೆ ಬಾೞ್ಗೆ ಬಾೞ್ಪಡಿನಿತಿಲ್ಲದ ಬಾೞ್ವೆಣನೇಕ ಬಱ್ದಿಪಂ.

ಆದೇಶವ್ಯಂಜನಕ್ಕೆ ವತ್ವಮಿಲ್ಲ—ಬ—ಇರ್ಬಾಳ್ ಮೂವಾೞ್ ಇಕ್ಕಿ ದ್ರ್ಪಪರೆಯೊಳ್; ಮ—ಇರ್ಮಡಿ;

ಧರೆಯೊಳ್ವೀರದ ಪೆಂಪಿನ
ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾ ।
ಸ್ಕರಸುತನಿಂ ನಾಲ್ವಡಿ ಮುರ
ಹರನಿಂದೈವಡಿ ನೆಗೞ್ತೆಯದಟರ ಭೀಮಂ ॥ ಕಂದಂ ॥

ಪ—ಕಿೞ್ಪೊಡೆ ರಸಭಾವಮಿರ್ಪೊಡೆ ಮುಖಂ ಸುರತೋತ್ಸವಗೋಮಿ ನೀಮುಖಂ.

ಬಹುಳಮೆಂಬುದಱಿಂ ಕೆಲವಱಿೊಳ್ವತ್ವಮಿಲ್ಲ.—

ಬ—ಕಣ್ಬೇಟಂ; ಆ ನಾಡು ಪಿರಿಯ ಕಣ್ಬೇಡು; ಕರ್ಬೇಡರೆ; ಸುಡು ಬಾಡು; ಮ—ಬಾಳ್ಮೊನೆ; ಪಾಲ್ಮಿನೆ; ಕತ್ತುರಿಮಿಗಂ; ಪ—ಕಯ್ಪುಱಿಗುಟ್ಟಿ ಯಾಡಿದರ್; ಪೂಪುಣುಂಬು; ಪಲ್ಪಱಿಗುಟ್ಟಿದಂ.

ವಾಕ್ಯಕ್ಕೆ ವತ್ವಂ—ತಮರೂರ್ಗೆವೋಪ ಕುಲಜಾಂಗನೆಯರ್ ಮಹಿಧ ರಂಗೆ ಪಡೆದರ್ ಮುದಮಂ; ದಿವದಿಂ ಕೆಲಸಕೆವರ್ಪ ದಿವಿಜಾಂಗನೆಯರ್; ಬೆಂಗೆವಂದಂ; ತರವೇೞ್ದಿಂ; ನೆಲೆಗೆವಂದಂ; ಕಾಮನ ಗರವಟಿಗೆವರ್ಪಂತೆ ಸುತ್ತಿ ಬರ್ಪುವು ಗಿಳಿಗಳ್.

## ಸೂತ್ರಂ.

ಸ is often changed into ಚ, ಜ and ಛ after consonants, with the exception of ಯ and ಲ.

ಇರೆ ಯಲರಹಿತವ್ಯಂಜನ
ಪರಮಾಗಿ ಸಕಾರಮಲ್ಲಿ ಬಹುಳಂ ಚತ್ವಂ |
ಅರೆಎಡೆಯೊಳ್ಜತ್ವಂ ಮೇ
ಣರೆಎಡೆಯೊಳ್ಸಂಖ್ಯೆಯಾಗೆ ನಿಯತಂ ಛತ್ವಂ || 68 ||

ಪದಚ್ಛೇದಂ.— ಇರೆ ಯಲರಹಿತವ್ಯಂಜನಪರಂ ಆಗಿ ಸಕಾರಂ, ಅಲ್ಲಿ ಬಹುಳಂ ಚತ್ವಂ; ಅರೆ ಎಡೆಯೊಳ್ ಜತ್ವಂ; ಮೇಣ್ ಅರೆ ಎಡೆಯೊಳ್, ಸಂಖ್ಯೆ ಆಗೆ, ನಿಯತಂ ಛತ್ವಂ.

ಅನ್ವಯಂ.— ಯಲರಹಿತವ್ಯಂಜನಪರಂ ಆಗಿ ಸಕಾರಂ ಇರೆ, ಅಲ್ಲಿ ಬಹುಳಂ ಚತ್ವಂ; ಅರೆ ಎಡೆಯೊಳ್ ಜತ್ವಂ; ಮೇಣ್ ಅರೆ ಎಡೆಯೊಳ್, ಸಂಖ್ಯೆ ಆಗೆ, ನಿಯತಂ ಛತ್ವಂ.

ಟೀಕು.—ಯಲರಹಿತ = ಯಕಾರ ಲಕಾರಂಗಳಿಂ ವಿರಹಿತಂಗಳಾದ; ವ್ಯಂಜನ = ವ್ಯಂ ಜನಂಗಳ್ಗೆ; ಪರಂ = ಮುಂದಣಕ್ಷರಂ; ಆಗಿ = ಆಗಿ; ಸಕಾರಂ = ಸತ್ವಂ: ಇರೆ = ಇರೆ; ಅಲ್ಲಿ = ಆ ಸ್ಥಾನದಲ್ಲಿ; ಬಹುಳಂ = ಬಹುಳವಾಗಿ; ಚತ್ವಂ = ಚಕಾರವಪ್ಪುದು; ಅರೆಎಡೆಯೊಳ್ = ಕೆಲವೆಡೆಯಲ್ಲಿ; ಜತ್ವಂ = ಜಕಾರವಪ್ಪುದು; ಮೇಣ್ = ಅದಲ್ಲದೆ; ಅರೆಎಡೆಯೊಳ್ = ಕಿಱಿದೆಡೆ ಯಲ್ಲಿ; ಸಂಖ್ಯಾ = ಸಂಖ್ಯಾವಾಚಿ; ಆಗೆ = ಆಗೆ; ನಿಯತಂ = ಕಟ್ಟಾಗಿ; ಛತ್ವ = ಛಕಾರವಪ್ಪುದು.

ವೃತ್ತಿ.— ಯಕಾರ ಲಕಾರಂಗಳಂ ಕಳೆದುಳಿದ ವ್ಯಂಜನಂಗಳ್ಗೆ ಪರ ಮಾಗಿ ನಿಂದ ಸಕಾರಂ ಬಹುಳತೆಯಿಂ ಚತ್ವಮಕ್ಕುಂ; ಕೆಲವೆಡೆಯೊಳ್ಜತ್ವ ಮಕ್ಕುಂ; ಕಿಱಿದೆಡೆಯೊಳ್ಸಂಖ್ಯೆಯಾಗೆ ಛತ್ವಮಕ್ಕುಂ.

ಪ್ರಯೋಗಂ.—ಚತ್ವಕ್ಕೆ—ನುಣ್ಚಿರದ ತಿಣ್ಪು ಘನಘೋಷಗಭೀರಂ. ಪಂ ಚರದಿನಾಣತಿ ಮಾಡಿದುದುನ್ಮದಾಳಿ.

ಜತ್ವಕ್ಕೆ.—ಕಟ್ಟಿದ ಫೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ. ಮುಂಜೂರ್; ಮುಂಜೆಱಂಗು; ತಣ್ಜೊಡರ್.

ಛತ್ವಕ್ಕೆ—ಪದಿನೆಣ್ಛಾಸಿರಲೋಹವಕ್ಕರೆಯ ಜಾತ್ಯಶ್ವಂಗಳಿರ್ಛಾಸಿರಂ ಮುದಮಂ ಮುಕ್ಕುಳಿಸಿರ್ದ ದಂತಿಘಟೆಗಳ್ ನೂರ್ಛಾಸಿರಂಗಳ ವೋಲಾಯ್ತು ರಥಕಡುವೇಗದಿಂ.

ಬಹುಳಮೆಂಬುದಱಿಂ ಕೆಲವೆಡೆಯೊಳಿಲ್ಲ—

ಕಣ್ಸೋಲಮನಱಿಯುಂ ಪರ
ವೆಣ್ಸರವಧುಗೆಣೆಯೆನಿಪ್ಪೊಡಂ ತೊಡರ್ದಾತಂ |
ಮೇಣ್ಸಾರನಕ್ಕುಮೆಱಚಲಪ
ವಣ್ಸರಿಯೆ ಕೇಳ್ ಸರಿಗೆವಾರನಹಿತಕೃತಾಂತಂ || ಕಂದಂ ||

ಸೋನೆಯ ಕೆಸರ್ಗಳಲರ್ದಲರ ಜೆಳ್ಸರಿ. ಕಳ್ಸವಿಗೆ ಕುಡಿದು ಧನಮಂ.

ಯಲಳಹಿತಕ್ಕೆ.—ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು. ಕೆಯ್ಸುರಿಗೆ. ಮಾವಿನೊಳ್ ಮಸಗುತಮಿರ್ಪ ಬಲ್ಸೋನೆಯ ಸೋನೆಗೆ ಕಾಂಚನಕೇತಕಿವನಪ್ರಸರದಲಂಗಳ್ ಒಲೆಗುಡೆ. ಕಲ್ಸರೆ; ಮೆಲ್ಸರಂ. ಬಹುಳಮೆಂಬುದಱಿಂ ಸ್ವರಂಗಳ ಪರದಲ್ಲಿರ್ದ ಸಕಾರಕ್ಕಂ ಕೆಲವೆಡೆಗಳಲ್ಲಿ ಚಕಾರ ಜಕಾರಂಗಳಪ್ಪುವು—

ಮುಚ್ಚೆರೆ; ಮುಚ್ಚಾಲ್; ತುಡುಜೊಡರ್.

## ಸೂತ್ರಂ.

When the vowel of *monosyllabic* Nominal bases ending in ನ್, ಣ್, ಲ್, ಯ್, ಳ್ is short, and such bases meet with an initial vowel, their end-consonant must be doubled. Particles (Adverbs) of such a description are excepted from this rule.

ಮೊದಲೊಳ್ ಹ್ರಸ್ವೈಕಸ್ವರ
ಮೊದವೆ ಪರಂ ಸ್ವರಮದಾಗೆ ನಣಲಯಳಂಗ |
ಳ್ಗುದಯಿಸುಗುಂ ದ್ವಿತ್ವಂ ಪೂ
ರ್ವದೀರ್ಘಕವ್ಯಯಕೆ ವರ್ಣತತಿಗದ್ವಿತ್ವಂ || 69 ||

ಪದಚ್ಛೇದಂ.—ಮೊದಲೊಳ್ ಹ್ರಸ್ವೈಕಸ್ವರಂ ಒದವೆ, ಪರಂ ಸ್ವರಂ ಅದು ಆಗೆ, ನ ಣ ಲ ಯ ಳಂಗಳ್ಗೆ ಉದಯಿಸುಗುಂ ದ್ವಿತ್ವಂ; ಪೂರ್ವದೀರ್ಘಕೆ, ಅವ್ಯಯಕೆ, ವರ್ಣತತಿಗೆ ಅದ್ವಿತ್ವಂ.

ಅನ್ವಯಂ.—ಮೊದಲೊಳ್ ಹ್ರಸ್ವೈಕಸ್ವರಂ ಒದವೆ, ಸ್ವರಂ ಅದು ಪರಂ ಅಗೆ, ನ ಣ ಲ ಯ ಳಂಗಳ್ಗೆ ದ್ವಿತ್ವಂ ಉದಯಿಸುಗುಂ; ಪೂರ್ವದೀರ್ಘಕೆ, ಅವ್ಯಯಕೆ, ವರ್ಣತತಿಗೆ ಅದ್ವಿತ್ವಂ.

ಟೀಕು. — ಮೊದಲೊಳ್ = ಆದಿಯಲ್ಲಿ; ಹ್ರಸ್ವ = ಹ್ರಸ್ವವಾದ; ಏಕ = ಒಂದು; ಸ್ವರಂ = ಸ್ವರಾಕ್ಷರಂ; ಒದವೆ = ಪ್ರಾಪ್ತಿಸೆ; ಸ್ವರಂ = ಸ್ವರಾಕ್ಷರಂ; ಅದು = ಅದು; ಪರಂ = ಮುಂದು; ಅಗೆ = ಆಗೆ; ನ ಣ ಲ ಯ ಳಂಗಳ್ಗೆ = ನಕಾರ ಣಕಾರ ಲಕಾರ ಯಕಾರ ಳಕಾರಂಗಳ್ಗೆ; ದ್ವಿತ್ವಂ = ದ್ವಿರ್ಭಾವಂ; ಉದಯಿಸುಗುಂ = ಹುಟ್ಟುವುದು; ಪೂರ್ವದೀರ್ಘಕೆ = ಆದಿದೀರ್ಘಕ್ಕೆ; ಅವ್ಯಯಕೆ = ಅವ್ಯಯಶಬ್ದಂಗಳ್ಗೆ; ವರ್ಣತತಿಗೆ = ಅನೇಕಾಕ್ಷರಕ್ಕೆ; ಅದ್ವಿತ್ವಂ = ದ್ವಿತ್ವಮಿಲ್ಲ.

ವೃತ್ತಿ.—ಹ್ರಸ್ವಮಪ್ಪೇಕಸ್ವರಂ ಪೂರ್ವಮಾಗೆ, ಸ್ವರಂ ಪರಮಾಗೆ, ನಣಲಯಳಕಾರಂಗಳ್ಗೆ ದ್ವಿತ್ವಮುಂಟು; ಪೂರ್ವದೀರ್ಘಮಾದೊಡಂ ಅವ್ಯಯಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ.

ಪ್ರಯೋಗಂ.—ಆದಿಹ್ರಸ್ವಮಾಗೆ— ನಕಾರದ್ವಿರ್ಭಾವಕ್ಕೆ — ಬಿಡುಮುಡಿ ಬೆನ್ನಪ್ಪಳಿಸೆ.

ಣಕಾರಕ್ಕೆ—ಕಣ್ಣಿಂ ಕಾಣಳ್. ಚಿತ್ರದ ಪೆಣ್ಣಂತೆವೊಲ್ ಉಣ್ಣಳ್. ಮನದೊಳ್ ದಯಮಿಲ್ಲದವನ ಕಣ್ಣೇಂ ಪುಣ್ಣೇಂ. ಎಣ್ಣೆಯೊಳ್ ಅರಸೇಱಿಲ ತನಿವಣ್ಣಸುಣ್ಣಿಸಿದನ್ ಅಬ್ಜಭವಂ.

ಪೊನ್ನುಳ್ಳವನೆ ಕುಲೀನಂ
ಚೆನ್ನಂ ಕಲಿ ಸತ್ಯವಾದಿಯೆನಿಸುಗುಮದಱಿಂ ।
ದಿನ್ನುಂ ಪೊನ್ನನೆ ಪಡೆವುದು
ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣುಂ ಮಣ್ಣುಂ ॥ ಕಂದಂ ॥

ಲಕಾರಕ್ಕೆ—ಕಲ್ಲೆಲ್ಲಂ ಕಿಸುಗಲ್ ಮರನೆಲ್ಲಂ ಮಾವಿಮ್ಮಾವು. ನೆಲ್ಲುಂ ಕೌಂಗುಂ ಮಾವುಂ ಮಲ್ಲಿಗೆಯುಂ. ಹುಲ್ಲುಹುಟ್ಟಿಗೆಯುಂ.

ಯಕಾರಕ್ಕೆ—ಮೆಯ್ಯ ಮಸಿ ಕೊರಲ ಬಕ್ಕಳಿ ಪುಯ್ಯೆ ಘುರಿಲ್ಲರೆವ ಕೆಯ್ಯ ಕಂಕರಿಕೆ.

ಳಕಾರಕ್ಕೆ—ಮುಳ್ಳಾಗಿ. ಕಳ್ಳಾಟಂ. ಒಳ್ಳಾಳಿಡೆಗೊಡನೊದಱಿ ಭಟ್ಟಸೊಳೋವಜಂ (?). ಬೇಳ್ಪಿರೆಳ್ಳಂ ಕೊದಳಿವೆರಸು ತಿಂಬಂ ನಾಗದೇವಂ (?).

ಪೂರ್ವದೀರ್ಘಮಾಗೆ—ನಕಾರಕ್ಕೆ—ಮಿಾನಾಗಿಯು ಮೆಸಡಿಯಾಗಿಯು ಮೇನಾಗಿಯುಂ ತಾನೆಲ್ಲಂ; ಬಾನುದ್ದಂ; ಏನಾಯ್ತು.

ಣಕಾರಕ್ಕೆ—ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈ ಕೊಳಿಸುವಂತೆ. ಏಣುಂಟು.

ಲಕಾರಕ್ಕೆ—ಕೇಲಂ ಮಾಡುವ ತಿಗುರಿಯ ಕೋಲನ್ತೆವೋಲ್ ಇರ್ದು.

ಯಕಾರಕ್ಕೆ—ಈಯಲಿಱಿಯಲ್ ಶರಣ್ಬುಗೆ ಕಾಯಲ್. ತಾಯೊರ್ವಳ್ ತನ್ದೆ ಬೇಱೆ. ಬಾಯಾರ್ವಳ್.

ಳಕಾರಕ್ಕೆ—ಆಳೋಳಿಯ ಮಾನಸಂಗೆ ಬಡವಂಗೆ. ತೋಳಾಟಂ; ಬಾಳೊಪ್ಪಂ.

ಅವ್ಯಯಕ್ಕೆ—ಕಲಿ ದಲಿವಂ ಜವನಲ್ಲಿಯುಂಡಿಗೆದಂದನೊ.

ಅನೇಕಾಕ್ಷರಕ್ಕೆ—ಸರಣಾರುವೊಳರೆ ಖಳಸಂಸರಣದೊಳ್. ಪರಲೆಲ್ಲಂ ಮುತ್ತುಮಾಣಿಕಂ ಪಾಸಱೆಗಳ್ ಪರುಸಂಗಳ್. ಎನ್ನ ಮಾತಿನೊಳ್ ತೊದಳುಂಟೆ. ಪರಲೆಲ್ಲಂ; ತೊದಳುಂಟೆ; ಪವಣೆಲ್ಲಂ.

## ಸೂತ್ರಂ.

Monosyllabic Verbal themes ending in ನ್, ಣ್, ಲ್, ಯ್, ಳ್ do not allow that doubling when ಅಲ್ is joined; some ending in ಯ್, also ಆರಯ್ that is dissyllabic and has a long initial optionally do so; the themes ಉಯ್, ನೆಯ್, ಸುಯ್, ಬಯ್, however, always double their final, also in the Negative; before the suffix ಉ doubling is forbidden (excepting ಆರಯ್).

ಧಾತುಗಲುಂ ಪರಮಾದೊಡ
ಜಾತಂ ದ್ವಿತ್ವಂ ಯಕಾರದಲ್ಲಿ ವಿಕಲ್ಪಂ
ಮಾತೇನುಯ್ನೆಯ್ಸುಯ್ಬ
ಯ್ಧಾತುಗಳೊಳ್ದ್ವಿತ್ವಮಲ್ಲದಿಲ್ಲ ವಿಕಲ್ಪಂ ‖ 70 ‖

ಪದಚ್ಛೇದಂ.— ಧಾತುಗೆ ಅಲುಂ ಪರಂ ಆದೊಡೆ, ಅಜಾತಂ ದ್ವಿತ್ವಂ; ಯಕಾರದಲ್ಲಿ ವಿಕಲ್ಪಂ; ಮಾತೇಂ ಉಯ್ ನೆಯ್ ಸುಯ್ ಬಯ್ ಧಾತುಗಳೊಳ್ ದ್ವಿತ್ವಂ ಅಲ್ಲದೆ ಇಲ್ಲ ವಿಕಲ್ಪಂ.

ಅನ್ವಯಂ.— ಧಾತುಗೆ ಅಲುಂ ಪರಂ ಆದೊಡೆ, ದ್ವಿತ್ವಂ ಅಜಾತಂ; ಯಕಾರದಲ್ಲಿ ವಿಕಲ್ಪಂ; ಮಾತೇಂ ಉಯ್ನೆಯ್ಸುಯ್ಬಯ್ಧಾತುಗಳೊಳ್ ದ್ವಿತ್ವಂ ಅಲ್ಲದೆ ವಿಕಲ್ಪಂ ಇಲ್ಲ.

ಟೀಕು. — ಅನುವರ್ತನೆ — ನಣಲಯಳಕಾರಂಗಳಂತ್ಯವಾದ ಧಾತುಗೆ = ಧಾತುಗಳ್ಗೆ; ಅಲುಂ = ಅಲ್ ಎಂಬುದುಂ, ಉಂ ಎಂಬ ಸಮುಚ್ಚಯದಿಂದೆ ಎಕಾರಾದಿಸ್ವರಂಗಳುಂ; ಪರಂ = ಮುಂದು; ಆದೊಡೆ = ಆದರೆ; ದ್ವಿತ್ವಂ = ದ್ವಿಭಾರ್ವಂ; ಅಜಾತಂ = ಹುಟ್ಟದು; ಯಕಾರವಲ್ಲಿ = ಯಕಾರಾಂತಧಾತುವಿನಲ್ಲಿ; ವಿಕಲ್ಪಂ = ವಿಕಲ್ಪವಾಗಿ ಬರ್ಪುದು; ಮಾತೇಂ = ಹೇೞ್ವಿದೇಂ; ಉಯ್ನೆಯ್ಸುಯ್ಬಯ್ಧಾತುಗಳೊಳ್ = ಉಯ್ ‖ ನೆಯ್ ‖ ಸುಯ್ ‖ ಬಯ್ ‖ ಎಂಬ ಧಾತುಗಳಲ್ಲಿ; ದ್ವಿತ್ವಮಲ್ಲದೆ = ದ್ವಿಭಾರ್ವಮಲ್ಲದೆ; ವಿಕಲ್ಪಂ = ವಿಕಲ್ಪಂ; ಇಲ್ಲ = ಉಂಟಾಗದು.

ವೃತ್ತಿ. — ನಣಲಯಳಕಾರಂಗಳಂತ್ಯವಾದ ಧಾತುಗಲ್ಪರವಾದೊಡಂ ದ್ವಿತ್ವಮಿಲ್ಲ; ಯಕಾರಾಂತದಲ್ಲಿ ವಿಕಲ್ಪಂ; ಉಯ್ ನೆಯ್ ಸುಯ್ ಬಯ್ ಎಂಬಿವರ್ಕೆ ಅಲ್ಪರವಾದೊಡಂ ವಿಭಕ್ತಿಸ್ವರಂ ಪರವಾದೊಡಂ ದ್ವಿತ್ವಂ ನಿತ್ಯಂ.

ಪ್ರಯೋಗಂ. — ಅದ್ವಿತ್ವಕ್ಕೆ — ಎಸಲ್ತ್ರಕಂ; ತಿನಲ್ಕೊಂಡಂ; ಉಣಲ್ಬಂಧಂ; ಮೆಲಲ್ಪೋದಂ; ಕೊಲಲ್ಬಗೆವಂ; ಕೊಲಲ್ಸಾರ್ದಂ; ಕಳಲ್ನೋಡಿದಂ.

ಯತ್ವಕ್ಕೆ — ಪೊಯಲುಂ, ಪೊಯ್ಯಲುಂ; ಕೊಯಲುಂ, ಕೊಯ್ಯಲುಂ. — ಆದಿ ದೀರ್ಘವಾದೊಡಂ ಅನೇಕಾಕ್ಷರವಾದೊಡಂ ವಿಭಕ್ತಿಸ್ವರಮುಂ ಪರವಾದೊಡಮ್ ಆರಯ್ ಎಂಬ ಧಾತುಗೆ ದ್ವಿತ್ವವಿಕಲ್ಪಂ — ಆರಯಲುಂ, ಆರಯ್ಯಲುಂ; ಆರಯಿಂ, ಆರಯ್ಯಿಂ; ಆರಯೆ, ಆರಯ್ಯೆ ಎಂಬಂತೆ.

ಉಯ್ಯಾದಿನಿತ್ಯದ್ವಿತ್ವಕ್ಕೆ — ಉಯ್ಯಂ, ನೆಯ್ಯರ್, ಸುಯ್ಯಯ್, ಬಯ್ಯವು; ಉಯ್ಯಲುಂ, ನೆಯ್ಯಲುಂ ಎಂಬಂತೆ. — ಸಮುಚ್ಚಯವಶದಿಂದೆಕಾರಾದಿಸ್ವರಂ ಪರವಾದೊಡೆ ದ್ವಿತ್ವಮಿಲ್ಲ — ಎನೆ; ಕೊಲೆ; ಉಣೆ.

## ಸೂತ್ರಂ.

The final ನ್, ಣ್, ಲ್, ಯ್, ಳ್ of all monosyllabic Verbal themes (only excepting ಕಳ್, however, must be doubled in the Negative.

ಪ್ರತಿಷೇಧದ ಧಾತುಗೆ ಮುಂ
ದೆ ತಱುಂಬೆ ವಿಭಕ್ತಿ ಪೂರ್ವಕಾಲಕ್ರಿಯೆಯೊಳ್ ।
ಪ್ರತಿಷೇಧದದೆಂಬುದು ಮುಂ
ದೆ ತೋಱೆ ಮೇಣ್ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ ‖ 71 ‖

ಪದಚ್ಛೇದಂ. — ಪ್ರತಿಷೇಧದ ಧಾತುಗೆ ಮುಂದೆ ತಱುಂಬೆ ವಿಭಕ್ತಿ, ಪೂರ್ವಕಾಲಕ್ರಿಯೆಯೊಳ್ ಪ್ರತಿಷೇಧದ ಅದೆ ಎಂಬುದು ಮುಂದೆ ತೋಱೆ ಮೇಣ್, ದ್ವಿತ್ವವೃತ್ತಿ ನಿತ್ಯಂ ಎನಿಕ್ಕುಂ.

ಅನ್ವಯಂ. — ಪ್ರತಿಷೇಧದ ಧಾತುಗೆ ಮುಂದೆ ವಿಭಕ್ತಿ ತಱಿಂಬೆ, ಮೇಣ್ ಪೂರ್ವಕಾಲ ಕ್ರಿಯೆಯೊಳ್ ಪ್ರತಿಷೇಧದ ಅದೆ ಎಂಬುದು ಮುಂದೆ ತೋಱೆ, ದ್ವಿತ್ವವೃತ್ತಿ ನಿತ್ಯಂ ಎನಿಕ್ಕುಂ.

ಟೀಕು. — ಅನುವರ್ತನೆ— ನಣಲಯಳಕಾರಂಗಳಂತ್ಯವಾದ ಪ್ರತಿಷೇಧದ = ಪ್ರತಿಷೇಧಾರ್ಥದ; ಧಾತುಗೆ = ಧಾತುಗಳ್ಗೆ; ಮುಂದೆ = ಮುಂದುಗಡೆಯಲ್ಲಿ; ವಿಭಕ್ತಿ = ಪ್ರತ್ಯಯಂ; ತಱಿಂಬೆ = ನಿಂದಿರೆ; ಮೇಣ್ = ಅದಲ್ಲದೆ; ಪೂರ್ವಕಾಲಕ್ರಿಯೆಯೊಳ್ = ಭೂತಕಾಲಕ್ರಿಯೆಯಲ್ಲಿ; ಪ್ರತಿಷೇಧದ = ಪ್ರತಿಷೇಧಾರ್ಥದ; ಅದೆ ಎಂಬುದು = ಅದೆ ಎಂಬುದು; ಮುಂದೆ = ಮುಂಗಡೆಯಲ್ಲಿ; ತೋಱೆ = ಕಾಣಿಸೆ; ದ್ವಿತ್ವವೃತ್ತಿ = ದ್ವಿರ್ಭಾವದ ವೃತ್ತಿ; ನಿತ್ಯಂ = ನಿಶ್ಚಯಂ; ಎನಿಕ್ಕುಂ = ಎನಿಸುವುದು.

ವೃತ್ತಿ. — ಪ್ರತಿಷೇಧದರ್ಥದೊಳೆ ಧಾತುವಿಂಗೆ ವಿಭಕ್ತಿ ಪರಮಾದೊಡಂ, ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸಿರ್ವ ಅದೆ ಎಂಬುದು ಪರಮಾದೊಡಂ, ನ ಣ ಲ ಯ ಳಂಗಳ್ಗೆ ದ್ವಿತ್ವವೃತ್ತಿ ನಿತ್ಯಂ.

ಪ್ರಯೋಗಂ. — ವಿಭಕ್ತಿಗೆ — ಎನ್ನಂ, ಎನ್ನರ್; ಉಣ್ಣಂ, ಉಣ್ಣರ್; ಮೆಲ್ಲಯ್, ಮೆಲ್ಲರ್; ಬಯ್ಯೆನ್, ಬಯ್ಯೆವು; ಕೊಳ್ಳೆನ್, ಕೊಳ್ಳೆವು.

ಅದೆಗೆ — ಎನ್ನದೆ, ತಿನ್ನದೆ, ಉಣ್ಣದೆ, ಒಲ್ಲದೆ, ಬಯ್ಯದೆ, ಕೊಳ್ಳದೆ.

ಮೇಣೆಂಬುದಱಿಂ ಕಳ್ ಎಂಬ ಧಾತುವಿಂಗೆಲ್ಲಿಯುಂ ದ್ವಿತ್ವಮಿಲ್ಲ — ಕಳಲ್ಪೋದಂ, ಕಳಲ್ಬಂದಂ, ಕಳದೆ ಬಂದಂ ಇಂತಱಿವುದು.

ಗದ್ಯಂ. — ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಸಂಧಿಕಾರ್ಯಮೆಂಬ ಪ್ರಥಮಸಂಧಿ ಸಂಪೂರ್ಣಂ.

## ೧ನೆಯ ಅಧ್ಯಾಯಂ ಸಮಾಪ್ತಂ.



# ೨ನೆಯ ಅಧ್ಯಾಯಂ. II. CHAPTER.

## ನಾಮಪ್ರಕರಣಂ.

## ON NOUNS.

### ಸೂತ್ರಂ.

Nominal bases are either Verbal forms (ಕೃತ್), or with certain suffixes (ತದ್ಧಿತಂ), or Compound forms (ಸಮಾಸಂ, or Ready nouns (ನಾಮಂ). Their Declension.

ಕ್ರಿಯೆಯಂ ನುಡಿಯದುದು ವಿಭ
ಕ್ತಿಯುನಿಲ್ಲದುದರ್ಥಮುಳ್ಳುದಂತದು ಲಿಂಗಂ |
ನಿಯತಚತುರ್ಭೇದಮದಾ
ರಯೆ ಕೃತ್ತದ್ಧಿತಸಮಾಸನಾಮಸ್ಥಿತಿಯಿಂ || 72 ||

ಪದಚ್ಛೇದಂ. — ಕ್ರಿಯೆಯಂ ನುಡಿಯದುದು, ವಿಭಕ್ತಿಯಂ ಇಲ್ಲದುದು, ಅರ್ಥಂ ಉಳ್ಳುದು, ಅಂತು ಅದು ಲಿಂಗಂ; ನಿಯತಚತುರ್ಭೇದಂ, ಅದು ಆರಯೆ, ಕೃತ್ತದ್ಧಿತಸಮಾಸನಾಮಸ್ಥಿತಿಯಿಂ.

ಅನ್ವಯಂ.—ಕ್ರಿಯೆಯಂ ನುಡಿಯದುದು, ವಿಭಕ್ತಿಯಂ ಇಲ್ಲದುದು, ಅರ್ಥಂ ಉಳ್ಳುದು, ಅಂತು ಅದು ಲಿಂಗಂ; ಅದು ಆರಯೆ, ಕೃತ್ತದ್ಧಿತಸಮಾಸನಾಮಸ್ಥಿತಿಯಿಂ ನಿಯತಚತುರ್ಭೇದಂ.

ಟೀಕು. — ಕ್ರಿಯೆಯಂ = ಕ್ರಿಯಾರ್ಥವಂ; ನುಡಿಯದುದು = ಹೇಳದುದು; ವಿಭಕ್ತಿಯಂ = ಸಪ್ತವಿಭಕ್ತಿಗಳಂ; ಇಲ್ಲದುದು = ಇಲ್ಲದೆ ಇರ್ದುದು; ಅರ್ಥಂ = ಪುರುಳ್; ಉಳ್ಳುದು = ಉಂಟಾದುದು; ಅಂತು = ಹಾಂಗೆ; ಅದು = ಅದು; ಲಿಂಗಂ = ಲಿಂಗವೆನಿಸುವುದು; ಅದು = ಆ ಲಿಂಗಂ; ಆರಯೆ = ವಿಚಾರಿಸೆ; ಕೃತ್ತದ್ಧಿತಸಮಾಸನಾಮ = ಕೃಲ್ಲಿಂಗಮೆಂಬ, ತದ್ಧಿತಲಿಂಗಮೆಂಬ, ಸಮಾಸಲಿಂಗಮೆಂಬ ನಾಮಲಿಂಗಮೆಂಬ; ಸ್ಥಿತಿಯಿಂ = ಇರ್ಕೆಯಿಂದೆ; ನಿಯತ = ನಿಶ್ಚಿತವಾದ; ಚತುರ್ಭೇದಂ = ನಾಲ್ಕು ಭೇದವಾಗಿರ್ಪುದು.

ವೃತ್ತಿ.—ಕ್ರಿಯಾವಾಚಕಮಾಗಿ ಸಲ್ಲದುದು, ಸಪ್ತವಿಭಕ್ತಿಗಳನಿಲ್ಲದುದು, ನಿರರ್ಥಮಾಗಿ ಸಲ್ಲದುಗು ಲಿಂಗಮೆನ್ನಿಸುಗುಂ; ಆ ಲಿಂಗಂ ಕೃತ್ತೆಂದು, ತದ್ಧಿತಮೆಂದು, ಸಮಾಸಮೆಂದು, ನಾಮಮೆಂದು, ನಾಲ್ಕು ತೆಱನಕ್ಕುಂ.

ಪ್ರಯೋಗಂ.—ನಾಮವಿಭಕ್ತಿ ಪತ್ತಿಸುವುದು

ಕೃತ್ತಿಂಗೆ.—ಮಾಡಿದ, ಬೇಡಿದ, ನೋಡಿದ ಕೂಡಿದ ಎಂದಿರಿಸಿ, ಕೃತ್ತನಱಿವುದು; ತಱಿವಾಯಿಂ—ಮಾಡಿದಂ, ಮಾಡಿದನಂ, ಮಾಡಿದನಿಂ, ಮಾಡಿದಂಗೆ, ಮಾಡಿದನತ್ತಣಿಂ, ಮಾಡಿದನ, ಮಾಡಿದನೊಳ್ ಎಂದೀ ಪರಿ ವಿಭಕ್ತಿಮಾಲೆಯಕ್ಕುಂ. ತನ್ನ ನೀಳ್ದ ಜಸದಿಂ ಬೆಳ್ದಿಂಗಳಂ ಮಾಡಿದಂ. ಬೇಡಿದನಿಷ್ಟಮಂ ಸಲಿಪುದುಂ ಕರ್ಣಂಗೆ ಜನ್ಮವ್ರತಂ. ಕೂಡಿದಂಗೆರಡಂ ಬಗೆವಾತನುಂ ನರಕದೊಳ್ ಬೀೞ್ವಿಲ್ಲಿಗೇಂ ಸಂದಯುಂ.

ತದ್ಧಿತಕ್ಕೆ.—ಅಡಪವಳ, ಮಡಿವಳ ಎಂದಿರಿಸಿ, ತದ್ಧಿತಮನಱಿವುದು; ತಱಿವಾಯಿಂ—ಅಡಪವಳಂ, ಅಡಪವಳನಂ, ಅಡಪವಳನಿಂ, ಅಡಪವಳಂಗೆ, ಅಡಪವಳನತ್ತಣಿಂ, ಅಡಪವಳನ, ಅಡಪವಳನೊಳ್ ಇಂತಕ್ಕುಂ.

ಷಟ್ಸಮಾಸಂಗಳ್ಗಂ ಸಪ್ತವಿಭಕ್ತಿಯುಂ ಪತ್ತಿಸುವುದು.

ಕನ್ನಡಸಮಾಸಕ್ಕೆ—ತೆಂಗಾಳಿ, ತೆಂಗಾಳಿಯಂ, ತೆಂಗಾಳಿಯಿಂ, ತೆಂಗಾಳಿಗೆ, ತೆಂಗಾಳಿಯತ್ತಣಿಂ, ತೆಂಗಾಳಿಯ, ತೆಂಗಾಳಿಯೊಳ್.—ಇಮ್ಮಾವು; ಈರ್ಬೈದು; ಕುಡುವಿಲ್ಲಂ; ಮರಗಿಡುಬಳ್ಳಿಪುಲ್ಪೊದಱ್ ಪಕ್ಕಿಮಿಗಂಗಳ್; ಮುಂಗಯ್.

ಸಂಸ್ಕೃತಸಮಾಸದಲ್ಲಿ—ಪುರವನ, ನೀಲೋತ್ಪಲ, ತ್ರಿಶೂಲ, ಸದಯ, ತರುಲತೆ, ಜಿತಮದನ ಎಂಬಿವು ಮುಂತೆ ಸಮಾಸಲಿಂಗಂಗಳಪ್ಪುವು; ಇವರ್ಕಂ ವಿಭಕ್ತಿ ಪತ್ತಿಸುವುದು—ಪುರವನಂ, ಪುರವನಮಂ, ಪುರವನದಿಂ, ಪುರವನಕೆ, ಪುರವನದತ್ತಣಿಂ, ಪುರವನದ, ಪುರವನದೊಳ್.

ಆದವಿಷ್ಣು ಎಂಬ (ಕನ್ನಡದ) ಗಮಕಸಮಾಸಮುಂ ಪಿರಿದೀವ ಎಂಬ (ಕನ್ನಡದ) ಕ್ರಿಯಾಸಮಾಸಮುಂ ಕೃತ್ಪ್ರವಿಷ್ಟಲಿಂಗಂಗಳ್; ಇವುಮುಂತೆ ಸಲ್ವುವು—ಜಲದನಿಭೋರಸ್ಥಲನಾದವಿಷ್ಣುವಿಜಯಾದಿತ್ಯಂ; ಪಿರಿದೀವಂ ನಿಲೆ ನುಡಿವಂ ಸೆರಗಂ ಬೆರಗಂ ಪ್ರತಾಪಿ.

ನಾಮಲಿಂಗಕ್ಕೆ.—ಅರಸ, ಇಂದ್ರ, ಮೊಲ, ವರಾಹ, ಹರಿಣ, ಮೂಷಕ ಎಂದಿರಿಸಿ, ಸಪ್ತವಿಭಕ್ತಿಯಂ ಪತ್ತಿಸುವುದು—ಅರಸಂ, ಅರಸನಂ, ಅರಸನಿಂ, ಅರಸಂಗೆ, ಅರಸನತ್ತಣಿಂ, ಅರಸನ, ಅರಸನೊಳ್. ಈ ಪರಿಯಿನಱಿವುದು. ಅರಸಂ ಮೂರ್ಖಂ ಶಚಿವರ್ ಸರಸ್ವತಿದ್ರೋಹರ್. ಆಡಿದನಿಂದ್ರನಿಂದ್ರರನಿತುಂ ಕೈವಾರಮಂ ಮಾಡಿದರ್. ಇಂದುಬಿಂಬದ ಮೊದಲಂ ಕಲಿಮೂಕವರಾಹನಗ್ನಿಮಿತ್ರನ ಹರಿಣಂ. ವಿನಾಯಕನ ಮೂಷಕಂ. ಅರಸನೆಂಬುದರ್ಕೆ ಅರಸು ಎಂದುಮುಂಟು. ಕ್ರಿಯಾರ್ಥಮಂ ನುಡಿವ ಧಾತು ಲಿಂಗಮಲ್ಲದು—ತೀಡು, ನೋಡು, ಬೇಡು, ಇಸು, ಪಸು ಎಂಬಿವು ಮೊದಲಾದುವು.

### ಸೂತ್ರಂ.

As a nominal base of a Canarese verbal theme is used the 3rd Person Singular of the Past and Future tenses with their Augment (ಆಗಮಂ), but without their Suffixes (ವಿಭಕ್ತಿ).

ಭೂತಭವಿಷ್ಯತ್ಕ್ರಿಯೆಗಳು
ಪೇತವಿಭಕ್ತಿಗಳನುಱಿಯೆ ಕೃತ್ತಪ್ಪವಸಂ
ಭೂತಂ ಸಂಪ್ರತಿವಿಧಿಗಳೊ
ಳಾ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ ||73||

ಪದಚ್ಛೇದಂ.—ಭೂತಭವಿಷ್ಯತ್ಕ್ರಿಯೆಗಳ್ ಉಪೇತವಿಭಕ್ತಿಗಳಂ ಉಱಿಯೆ, ಕೃತ್ತು ಅಪ್ಪವು; ಅಸಂಭೂತಂ ಸಂಪ್ರತಿ ವಿಧಿಗಳೊಳ್. ಆ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ.

ಅನ್ವಯಂ.—ಸಂಪ್ರತಿ ವಿಧಿಗಳೊಳ್, ಆ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ ಅಸಂಭೂತಂ.

ಟೀಕು.—ಭೂತ = ಭೂತಕಾಲದ; ಭವಿಷ್ಯತ್ = ಭವಿಷ್ಯತ್ಕಾಲದ; ಕ್ರಿಯೆಗಳ್ = ಕ್ರಿಯಾಪದಂಗಳ್; ಉಪೇತ = ತಮ್ಮಲ್ಲಿ ಕೂಡಿರ್ದ; ವಿಭಕ್ತಿಗಳಂ = ಕ್ರಿಯಾವಿಭಕ್ತಿಗಳಂ; ಉಱಿಯೆ = ಕಳೆಯೆ; ಕೃತ್ತು = ಕೃಲ್ಲಿಂಗಂ; ಅಪ್ಪವು = ಆಗುವುವು; ಸಂಪ್ರತಿ = ವರ್ತಮಾನಕಾಲಕ್ರಿಯೆಗಳಲ್ಲಿ; ವಿಧಿಗಳೊಳ್ = ವಿಧಿಕ್ರಿಯೆಗಳಲ್ಲಿ; ಆ ತೆಱದಿಂ = ಆ ರೀತಿಯಿಂದೆ; ಮಧ್ಯಮ = ಮಧ್ಯಮಪುರುಷದ; ಉತ್ತಮ = ಉತ್ತಮಪುರುಷದ; ಕ್ರಿಯೆಗಳೊಳಂ = ಕ್ರಿಯೆಗಳಲ್ಲಿಯುಂ; ಅಸಂಭೂತಂ = ಕೃತ್ತು ಹುಟ್ಟದು.

ವೃತ್ತಿ.—ಭೂತಕಾಲಕ್ರಿಯೆಯುಂ ಭವಿಷ್ಯಂತಿಯ ಕ್ರಿಯೆಯುಂ ತಮ್ಮ ತಮ್ಮಂತರ್ಗತಾಗಮಂಗಳಂ ಬೆರಸಿರ್ದು, ವಿಭಕ್ತಿಮಾತ್ರಮಂ ಕಳೆಯೆ, ಕೃಲ್ಲಿಂಗಮಪ್ಪುವು; ವರ್ತಮಾನಕ್ರಿಯೆಯುಂ ವಿಧಿಕ್ರಿಯೆಯುಂ ಮಧ್ಯಮಪುರುಷಕ್ರಿಯೆಯುಮ್ ಉತ್ತಮಪುರುಷಕ್ರಿಯೆಯುಂ ಕೃಲ್ಲಿಂಗಮಾಗವವರ್ಕೆ (ನಾಮ) ವಿಭಕ್ತಿಯಂ ಪತ್ತಿಸಲಾಗದು.

ಪ್ರಯೋಗಂ.—ಭೂತವತಿಯ ಕೃತ್ತಿಂಗೆ—ನಲಿದಂ ಎಂಬಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು, ಮಾಳ್ಪುದು. ಬಾಳ್ದಿನೆಂದು ಮದನಂ ನಲಿದಂ ನಡೆ ನೋಡಿ ಜೂತಮಂ.

ಮದಗಜವೆರಡಱ ಬಾಲದ
ಮೊದಲಂ ಪಿಡಿದೆತ್ತಿಯೊತ್ತಿ ನುರ್ಗುತ್ತಿರೆಯಾ |
ಸ್ಯದಿನೊಗುವ ರಕ್ತಮುರಿಯೆನೆ
ತಿದಿಯೊತ್ತುವ ಕಮ್ಮಱಿಂಬೊಲಿರ್ದಂ ಭೀಮಂ || ಕಂದಂ ||

ಬಂದನೀಗಳ್ ಪೆಱನಲ್ಲಂ ದುರ್ಜಯಂ ಕೌರವಕುಳನಳಿನೀಕುಂಜರಂ ಭೀಮಸೇನಂ ||

ಭವಿಷ್ಯಂತಿಯ ಕೃತ್ತಿಂಗೆ—ಬೇಡುವಂ, ಪೊಯ್ವಂ.

ಕೃತ್ತಾಗದವರ್ಕೆ—ನೋಡಿದಪಂ, ಮಾಡಿದಪಂ (Present tense); ಕುಡು, ತುಡು (Imperative); ಬೇಡಿದಯ್, ಬೇಡಿದಿರ್ (2nd Persons of the Past); ಪಾಡುವೆನ್, ಪಾಡುವೆವು (1st Persons of the Future) ಎಂಬಂತೆ.

ಸೂತ್ರಂ.

S. 73 concerns also verbal nominal bases formed from Saṁskṛita abstract Verbal nouns (ಭಾವವಚನಂ) by means of ಇಸು.

ವಿನುತಕ್ರಿಯಾತ್ಮಕಂಗಳು
ಮೆನಿಸುವ ಸಂಸ್ಕೃತದ ಭಾವವಚನಂಗಳನಾ |
ಯ್ದನಿತರ್ಕಮಿಸುಪ್ರತ್ಯಯ
ಮನೆ ಪತ್ತಿಸಿ ನಿಱಿಸೆ ಬರ್ಕುಮಾ ಕೃಲ್ಲಿಂಗಂ || 74 ||

ಪದಚ್ಛೇದಂ. — ಎನುತಕ್ರಿಯಾತ್ಮಕಂಗಳುಂ ಎನಿಸುವ ಸಂಸ್ಕೃತದ ಭಾವವಚನಂಗಳಂ ಆಯ್ದು, ಅನಿತರ್ಕಂ ಇಸುಪ್ರತ್ಯಯವನೆ ಪತ್ತಿಸಿ, ನಿಱಿಸೆ, ಬಕ್ಕುಂ ಆ ಕೃಲ್ಲಿಂಗಂ.

ಅನ್ವಯಂ. — ಆ ಕೃಲ್ಲಿಂಗಂ ಬರ್ಪುದು.

ಟೀಕು. — ಎನುತ = ಕೊಂಡಾಡಲ್ಪಟ್ಟ; ಕ್ರಿಯಾತ್ಮಕಂಗಳುಂ = ಕ್ರಿಯಾಸ್ವರೂಪಂಗಳುಂ; ಎನಿಸುವ = ಎನಿಸುವ; ಸಂಸ್ಕೃತದ = ಸಕ್ಕದದ; ಭಾವವಚನಂಗಳಂ = ಭಾವವಾಚಿಗಳಂ; ಆಯ್ದು = ಆಯ್ದು ಕೊಂಡು; ಅನಿತರ್ಕಂ = ಅಷ್ಟರ್ಕೆಯುಂ; ಇಸುಪ್ರತ್ಯಯವನೆ = ಇಸು ಎಂಬ ಪ್ರತ್ಯಯವನೆ; ಪತ್ತಿಸಿ = ಪೊರ್ದುಗೆಯಂ ಮಾಡಿ; ನಿಱಿಸೆ = ನಿಱುಗೆ ಮಾಡೆ; ಆ ಕೃಲ್ಲಿಂಗಂ = ಆ ಹಿಂದೆ ಹೇೞ್ದ ಕೃಲ್ಲಿಂಗಂ; ಬಕ್ಕುಂ = ಬರ್ಪುದು.—ಅದೆಂತೆಂದೊಡೆ

ವಿಚಾರಂ.—ಭಾವ ಭಂಗ ಭಾಗ ಭೋಗ ಧ್ಯಾನವೆಂಬಿವಾದಿಯಾದ ಭಾವವಾಚಿಗಳ ಮೇಲೆ ಇಸುಪ್ರತ್ಯಯಂ ಪತ್ತೆ, ಭಾವಿಸು ಭಂಗಿಸು ಭಾಗಿಸು ಭೋಗಿಸು ಧ್ಯಾನಿಸು ಎಂದು, ಕಂನಡಕ್ಕೆ ಧಾತುವಾದಲ್ಲಿ ಆಖ್ಯಾತದಲ್ಲಿ ಕ್ರಿಯಾಪದಂಗಳಾಗೆ, ಭೂತಭವಿಷ್ಯತ್ಕ್ರಿಯೆಗಳುಪೇತವಿಭಕ್ತಿಗಳನುಱಿಯೆ, ಕೃತ್ತಪ್ಪುವೆಂದಱಿವುದು.

ವೃತ್ತಿ.—ಕನ್ನಡಕ್ಕೆ ಕ್ರಿಯಾತ್ಮಕಂಗಳಪ್ಪ ಸಂಸ್ಕೃತದ ಭಾವವಚನಂಗಳನಾಯ್ದು ಕೊಂಡು, ಇಸುಪ್ರತ್ಯಯಮಂ ಪತ್ತಿಸಿ, ಕೃಲ್ಲಿಂಗಮಂ ಮಾೞ್ಪುದು.

ಪ್ರಯೋಗಂ.—ಭಾವಿಸಿದಂ, ಭಂಗಿಸಿದಂ, ಭಾಗಿಸಿದಂ, ರಂಗಿಸಿದಂ, ರಾಗಿಸಿದಂ, ಭೋಗಿಸಿದಂ, ಪ್ರೇರಿಸಿದಂ, ವರ್ಣಿಸಿದಂ, ವರ್ತಿಸಿದಂ, ತರ್ಜಿಸಿದಂ; ಚರಿಸಿದಂ, ಚರಯಿಸಿದಂ; ಧರಿಸಿದಂ, ಧರಯಿಸಿದಂ.

ಜಳನಿಧಿ ಜಳಚರಚಯಮಂ ರತ್ನಚಯಮುಮಂ ಧರಿಸುವ ವೊಲ್.

ಸೂತ್ರಂ.

Also verbs and sentences have been considered as nominal bases.

ಸಮುಪಾತ್ತಕ್ರಿಯೆಯುಂ ವಾ
ಕ್ಯಮಾಲೆಯುಂ ಸುಕವಿರಚಿತನಾಮಮದಾದಂ |
ದಮುಗುರ್ಂ ಲಿಂಗಂ ಮಾರ್ಗ
ಕ್ರಮಮಂ ಕಾಣಲ್ಕೆ ಬರ್ಪುದಾದ್ಯರ ಕೃತಿಯೊಳ್ ||75||

ಪದಚ್ಛೇದಂ. — ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಂ ಅದು ಆದ ಅಂದು ಅಮುಗುರ್ಂ ಲಿಂಗಂ; ಮಾರ್ಗಕ್ರಮಮಂ ಕಾಣಲ್ಕೆ ಬರ್ಪುದು ಆದ್ಯರ ಕೃತಿಯೊಳ್.

ಅನ್ವಯಂ.— ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಂ ಅದು ಆದಂದು ಲಿಂಗಂ ಅಮರ್ಗುಂ; ಮಾರ್ಗಕ್ರಮುಮಂ ಆದ್ಯರ ಕೃತಿಯೊಳ್ ಕಾಣಲ್ಕೆ ಬರ್ಪುದು.

ಟೀಕು.—ಸಂ = ಲೇಸಾಗಿ; ಉಪಾತ್ತ = ಎಯ್ದಲ್ಪಟ್ಟ; ಕ್ರಿಯೆಯುಂ = ಕ್ರಿಯೆಯುಂ; ವಾಕ್ಯಮಾಲೆಯುಂ = ವಾಕ್ಯಂಗಳ ಸಮೂಹಮುಂ; ಸುಕವಿ = ಸತ್ಕವೀಶ್ವರರಿಂದೆ; ರಚಿತ = ರಚಿಸಲ್ಪಟ್ಟ; ನಾಮಂ = ಪೆಸರ್; ಅದು = ಅದು; ಆದಂದು = ಆದ ಕಾಲದಲ್ಲಿ; ಲಿಂಗಂ = ಲಿಂಗವೆಂಬ ಸಂಜ್ಞೆ; ಅಮರ್ಗುಂ = ಪೊರ್ದುಗೆಯಪ್ಪದು; ಮಾರ್ಗಕ್ರಮುಮಂ = ಆವಱ ಮಾರ್ಗದ ರೀತಿಯಂ; ಆದ್ಯರ = ಪೂರ್ವಕವಿಗಳ; ಕೃತಿಯೊಳ್ = ಕಾವ್ಯಂಗಳಲ್ಲಿ; ಕಾಣಲ್ಕೆ = ಕಾಣು ಹವಲ್ಕೆ; ಬರ್ಪುದು — ಬರ್ಪುದು.

ವೃತ್ತಿ.—ಎಯ್ದಲ್ಪಟ್ಟ ಕ್ರಿಯೆಯುಂ ವಾಕ್ಯಮಾಲೆಯುಂ ಕವೀಶ್ವರರಿಂ ರಚಿತವಾಗಿ ನಾಮವಾದಲ್ಲಿ ಲಿಂಗಮಪ್ಪವು; ಅವಱ ತೆಱಮಂ ಪುರಾತನ ಕೃತಿಗಳಲ್ಲಿ ಕಾಣ ಬರ್ಪುದು.

ಪ್ರಯೋಗಂ.—ಕ್ರಿಯೆಗೆ—ನಮೋಽಸ್ತುಗಳಿರ್ಪಂದದಿನಿರ್ದಂ. (ನಮೋಽಸ್ತುಗಳೆಂದು ಸವಣರ್ಗೆ ಪೆಸರಾಯ್ತು)

ವಾಕ್ಯಮಾಲೆಗೆ—ಅಹಿಂಸಾ ಪರಮೋ ಧರ್ಮಮೆಂಬುದನೀ ತತ್ತ್ವವಿತ್ತುವರ್ರೇಣ್ಯರಱಿದರ್, ತ್ರೈಲೋಕ್ಯಚೂಡಾಮಣಿ. (ತತ್ತ್ವವಿತ್ತುವರ್ರೇಣ್ಯರೆಂದು ಶ್ರೌತರ್).
ತೋಳ್ಗೊಪ್ಪುವನಾಳ್ದರ ಕೈದುವೊತ್ತರ ದೇವಂ ಗುಣಕ್ಕೆ ನೆಲ್ಲಗಣೇಶಂ ಸೊಕರ್ಾನೆಗಳಂಕಂ.

## ಸೂತ್ರಂ.

Ready nouns are: 1, such of which the meaning is everywhere well known (but the etymological analysis of which is not apparent at first sight, ರೂಢನಾಮಂ, ನಿಶ್ಚಿತನಾಮಂ, ದಿಟದ ನಾಮಂ); 2, such the meaning of which is self-evident (ಅನ್ವರ್ಥನಾಮಂ); 3, such as are of

ಕ್ಷಿತಿಯೊಳೆ ರೂಢಾನ್ವರ್ಥಾಂ
ಕಿತಮೆಂದಾ ನಾಮಮೞಿಗೆ ಮೂದೆಱನಸಮಾ |
ಸತೆಯೊಳ್ನೆಲಸಿರ್ಪುದು ನಿ
ಶ್ಚಿತನಾಮಂ ಪಂಚವರ್ಣಕೃತಪರಿಮಾಣಂ || 76 ||

**mark, *i. e.* proper-names (ಅಂಕಿತನಾಮಂ). Those of self-evident meaning are of two kinds: *a.*, such as refer to properties (ಗುಣಾನುರೂಪಂ); *b.*, such as refer to condition (ಅರ್ಥಾನುರೂಪಂ).**

ಪದಚ್ಛೇದಂ.—ಕ್ಷಿತಿಯೊಳ್, ರೂಢಾನ್ವರ್ಥಾಂಕಿತಂ ಎಂದು, ಆ ನಾಮಂ; ಅಱಿಗೆ ಮೂದೆಱಿಂ; ಅಸಮಾಸತೆಯೊಳ್ ನೆಲಸಿ ಇರ್ಪುದು ನಿಶ್ಚಿತನಾಮಂ ಪಂಚವರ್ಣಕೃತಪರಿಮಾಣಂ.

ಅನ್ವಯಂ.—ಕ್ಷಿತಿಯೊಳ್, ರೂಢಾನ್ವರ್ಥಾಂಕಿತಂ ಎಂದು, ಆ ನಾಮಂ ಮೂದೆಱಿಂ, ಅಱಿಗೆ; ನಿಶ್ಚಿತನಾಮಂ ಪಂಚವರ್ಣಕೃತಪರಿಮಾಣಂ ಅಸಮಾಸತೆಯೊಳ್ ನೆಲಸಿರ್ಪುದು.

ಟೀಕು.—ಕ್ಷಿತಿಯೊಳ್ = ಭೂಲೋಕದಲ್ಲಿ; ರೂಢ = ರೂಢನಾಮಮೆಂದು; ಅನ್ವರ್ಥ = ಅನ್ವರ್ಥನಾಮಮೆಂದು; ಅಂಕಿತಂ = ಅಂಕಿತನಾಮಮೆಂದು; ಆ ನಾಮಂ = ಆ ಪಿಂದೆ ಪೇೞ್ದ ನಾಮಲಿಂಗಂ; ಮೂದೆಱಿಂ = ಮೂಱು ತೆಱನೆಂದು; ಅಱಿಗೆ = ತಿಳಿಗೆ; ನಿಶ್ಚಿತನಾಮಂ = ರೂಢ ನಾಮಂ; ಪಂಚವರ್ಣ = ಐದಕ್ಷರದಿಂದೆ; ಕೃತ = ಮಾಡಲ್ಪಟ್ಟ; ಪರಿಮಾಣಂ = ಪ್ರಮಾಣವ ನುಳ್ಳುದಾಗಿ; ಅಸಮಾಸತೆಯೊಳ್ = ಸಮಾಸವಲ್ಲದುದಱಿಲ್ಲಿ; ನೆಲಸಿರ್ಪುದು = ನೆಲೆಗೊಂಡಿ ರ್ಪುದು.

ವೃತ್ತಿ.—ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾ ಮಮೆಂದುಂ, ನಾಮಂ ಮೂದೆಱಿನಾಗಿರ್ಪುದು. ರೂಢನಾಮಂ ಪ್ರಸಿದ್ಧ ತೆಱಿನಾಗಿರ್ಪುದು. ಅನ್ವರ್ಥನಾಮಂ ಗುಣಾನುರೂಪಮೆಂದುಂ, ಅರ್ಥಾ ನುರೂಪಮೆಂದುಮಿಾರ್ತೆಱಿಮಾಗಿರ್ಪುದು. ಅಂಕಿತನಾಮಂ ಪೆಸರನ್ನಿಡುವ ನಿಷ್ಟದಿನೆಂತಾದೊಡಮಿರ್ಪುದು. ದಿಟಧ ನಾಮಂ ಸಮಾಸಮಿಲ್ಲದೊಂದಕ್ಕರಂ ಮೊದಲಾಗಿ ಎಯ್ದಕ್ಕರಂಬರಮುಂಟು.

ಪ್ರಯೋಗಂ.—ರೂಢನಾಮಕ್ಕೆ—ನೆಲಂ, ಪೊಲಂ, ಜಲಂ ಎಂಬಂತೆ:

ಗುಣಾನುರೂಪಾನ್ವರ್ಥಕ್ಕೆ—ದಾನಿ ದಯಾಪರನತ್ಯಭಿ
ಮಾನಿ ಪರಾಕ್ರಮಿ ಯಶೋರ್ಥಿ ನೀತಿಜ್ಞಂ ವಿ|
ದ್ಯಾನಿಲಯನೆನಿಪ ನೃಪಂ || ಕಂದಭಾಗಂ ||

ಅರ್ಥಾನುರೂಪಾನ್ವರ್ಥಕ್ಕೆ—ಹೆಟ್ಟಿಗಾಲಂ, ನಿಡುಮೂಗಂ, ಕುಸಿಗೊರ ಲಂ, ಸವಟೆವಾಯಂ, ಗುಳ್ಳಿಗಣ್ಣಂ, ಹಱಿ ದಲೆಯಂ ಎಂಬಂತೆ.

ಅಂಕಿತನಾಮಕ್ಕೆ—ಕಾಟಂ, ಕಸವಂ, ದೂಡಿಗಂ, ಮಾಚಂ, ಮಾರಂ
ಎಂಬಿವು ಮೊದಲಾದುವು. ಸಾರ್ಥಕಮಲ್ಲದವೆಲ್ಲಾ
ಭಾಷೆಗಮೀ ತೆಱದೆ ಸಲ್ವುದು.

ದಿಟದ ನಾಮಂಗಳ ಅಕ್ಷರವೃತ್ತಿಗೆ—ಪೂ, ಮರಂ, ಹೊತ್ತಗೆ, ಕವಳಿಗೆ, ಕಟ್ಟವತ್ತಿಗೆ.

ಸೂತ್ರಂ.

Adjectives (ಗುಣವಚನಂ), among which several terminate in ತು and ದು. Those with final ತು may double the ತ of this syllable.

ಒಳ್ಳಿತು ಮೆಲ್ಲಿತು ಬೆಟ್ಟಿತು
ತೆಳ್ಳಿತು ಬಸಿದಸಿದು ಕಡಿದು ನಿಡಿದಿನಿದೆಂಬಂ ।
ತುಳ್ಳುವು ತುದುಕಡೆಯೆನೆ ಕೈ
ಕೊಳ್ಳಂ ಗುಣವಾಚಿ ಮೇಣ್ತುಕಾರಂ ದ್ವಿತ್ವಂ ॥ 77 ॥

ಪದಚ್ಛೇದಂ.—ಒಳ್ಳಿತು ಮೆಲ್ಲಿತು ಬೆಟ್ಟಿತು ತೆಳ್ಳಿತು ಬಸಿದು ಅಸಿದು ಕಡಿದು ನಿಡಿದು ಇನಿದು ಎಂಬಂತೆ ಉಳ್ಳುವು॥ ತು ॥ ದು ॥ ಕಡೆ ಎನೆ, ಕೈಕೊಳ್ಳಂ ಗುಣವಾಚಿ; ಮೇಣ್ ತುಕಾರಂ ದ್ವಿತ್ವಂ.

ಅನ್ವಯಂ.—ಗುಣವಾಚಿ ಕೈಕೊಳ್ಳಂ; ಮೇಣ್ ತುಕಾರಂ ದ್ವಿತ್ವಂ.

ಟೀಕು.—ಒಳ್ಳಿತು = ಒಳ್ಳಿತೆಂದು; ಮೆಲ್ಲಿತು = ಮೆಲ್ಲಿತೆಂದು; ಬೆಟ್ಟಿತು = ಬೆಟ್ಟಿತೆಂದು; ತೆಳ್ಳಿತು = ತೆಳ್ಳಿತೆಂದು; ಬಸಿದು = ಬಸಿದೆಂದು; ಅಸಿದು = ಅಸಿದೆಂದು; ಕಡಿದು = ಕಡಿದೆಂದು; ನಿಡಿದು = ನಿಡಿದೆಂದು; ಇನಿದು = ಇನಿದೆಂದು; ಎಂಬಂತೆ = ಎಂಬ ಹಾಂಗೆ; ಉಳ್ಳುವು = ಉಂಟಾದ ಶಬ್ದಂಗಳ್; ತುದುಕಡೆಯೆನೆ = ತುಕಾರಾಂತ ದುಕಾರಾಂತವೆನೆ; ಗುಣವಾಚಿ = ಗುಣವಚನಂಗಳೆಂದು; ಕೈಕೊಳ್ಳಂ = ಒಡಂಬಡಿಂ; ಮೇಣ್ = ವಿಕಲ್ಪದಿಂದೆ; ತುಕಾರಂ = ತುಕಾರಾಂತ; ದ್ವಿತ್ವಂ = ದ್ವಿಭಾರ್ವಂ.

ವೃತ್ತಿ.—ತುಕಾರ ದುಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು; ಅವಱೊಳ್ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು.

ಪ್ರಯೋಗಂ.—ಬೆಟ್ಟಿತು, ಬೆಟ್ಟಿತ್ತು; ದಟ್ಟಿತು, ದಟ್ಟಿತ್ತು; ಒಳ್ಳಿತು, ಒಳ್ಳಿತ್ತು; ಮೆಲ್ಲಿತು, ಮೆಲ್ಲಿತ್ತು; ತೆಳ್ಳಿತು, ತೆಳ್ಳಿತ್ತು; ತೋರಿತ್ತು; ನೇರಿತ್ತು; ಕೂರಿ

ತ್ತು; ಉದ್ದಿತ್ತು; ನುಣ್ಣಿತ್ತು; ತಣ್ಣಿತ್ತು; ಬಿಣ್ಣಿತ್ತು; ಗುಂಡಿತ್ತು; ಅಗಲಿತ್ತು; ದೊಡ್ಡಿತ್ತು; ಬಲ್ಲಿತ್ತು ಎಂಬಂತೆ ನೋಡಿ ಕೊಳ್ವುದು.

ದುಕಾರಾಂತಕ್ಕೆ—ಬಸಿದು, ಅಸಿದು, ಕಡಿದು, ನಿಡಿದು, ಕರಿದು, ಬಿಳಿದು ಎಂಬಂತಱಿವುದು.

### ಸೂತ್ರಂ.

ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು are called Pronouns (ಸರ್ವನಾಮಂ), and (except ಏನ್) conform to the 3 (principal) genders.

ಅದುವಿದುವುದುವಾವುದುವೆ
ಲ್ಲದು ಪೆಱತೇನ್ಪೆಱದೆನಿಪ್ಪ ಶಬ್ದಂಗಳ್ತ ।
ಪ್ಪದೆ ಸರ್ವನಾಮಮಕ್ಕುಂ
ವಿದಗ್ಧರಿವಱಿದು ನಿಱಿಕೆ ಲಿಂಗಸ್ಥಿತಿಗೊಳ್ ॥ 78 ॥

ಪದಚ್ಛೇದಂ.—ಅದು ಇದು ಉದು ಆವುದು ಎಲ್ಲದು ಪೆಱತು ಏನ್ ಪೆಱದು ಎನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಂ ಅಕ್ಕುಂ; ವಿದಗ್ಧರ್ ಇವಂ ಅಱಿದು, ನಿಱಿಕೆ ಲಿಂಗಸ್ಥಿತಿಯೊಳ್.

ಅನ್ವಯಂ.—ವಿದಗ್ಧರ್ ಇವಂ ಅಱಿದು, ಲಿಂಗಸ್ಥಿತಿಯೊಳ್ ನಿಱಿಕೆ ಎಂಬುದನ್ವಯಂ.

ಟೀಕು.— ಅದು = ಅದೆಂದು; ಇದು = ಇದೆಂದು; ಉದು = ಉದೆಂದು; ಆವುದು = ಅವುದೆಂದು; ಎಲ್ಲದು = ಎಲ್ಲದೆಂದು; ಪೆಱತು = ಪೆಱತೆಂದು; ಏನ್ — ಏನ್ ಎಂದು; ಪೆಱದು = ಪೆಱದೆಂದು; ಎನಿಪ್ಪ ಶಬ್ದಂಗಳ್ = ಎನಿಸುವ ಶಬ್ದಂಗಳ್; ತಪ್ಪದೆ = ತೊಲಗದೆ; ಸರ್ವನಾಮಂ = ಸರ್ವನಾಮಂಗಳ್; ಅಕ್ಕುಂ = ಅಪ್ಪುವು; ವಿದಗ್ಧರ್ = ವಿದ್ವಾಂಸರ್; ಇವಂ = ಈ ಸರ್ವನಾಮಂಗಳಂ; ಅಱಿದು = ತಿಳಿದು; ಲಿಂಗಸ್ಥಿತಿಯೊಳ್ = ತ್ರಿವಿಧಲಿಂಗಸ್ಥಿತಿಯೊಳ್; ನಿಱಿಕೆ = ನಿಱುಗೆ ಮಾಡುಗೆ.

ವೃತ್ತಿ.—ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದೆಂಬಿವಾಧಿಯಾದುವು ಸರ್ವನಾಮಂಗಳ್.

### ಸೂತ್ರಂ.

ಏನ್, however, is used, as it stands, for all genders as well in the Singular as in the Plural.

ಏನೆಂಬ ಸರ್ವನಾಮಂ
ತಾನದು ದಲ್ಲಿಂಗದೇಕವಚನಂ ನಿಜದಿಂ ।
ಪೀನಂ ಬಹುವಚನಾರ್ಥಮ
ನಾನಲ್ವಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್ ॥ 79 ॥

ಪದಚ್ಛೇದಂ.—ಏನ್ ಎಂಬ ಸರ್ವನಾಮಂ ತಾಂ ಅದು ದಲ್ ಲಿಂಗದ ಏಕವಚನಂ ನಿಜದಿಂ; ಪೀನಂ ಬಹುವಚನಾರ್ಥಮುಂ ಆನಲ್ ಸಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್.

ಅನ್ವಯಂ.—ಏನ್ ಎಂಬ ಸರ್ವನಾಮಂ ತಾಂ ಅದು ದಲ್ ನಿಜದಿಂ ಲಿಂಗದ ಏಕವಚನಂ; ಮತ್ತೆ ಕೃತಿಪದ್ಧತಿಯೊಳ್ ಪೀನಂ ಬಹುವಚನಾರ್ಥಮುಂ ಆನಲ್ ಸಾಲ್ದತ್ತು.

ಟೀಕು.—ಏನ್ = ಏನೆಂದು; ಎಂಬ ಸರ್ವನಾಮಂ = ಎಂಬ ಸರ್ವನಾಮಶಬ್ದಂ; ತಾನದು = ಅದು ತಾಂ; ದಲ್ = ನಿಶ್ಚಯವಾಗಿ; ನಿಜದಿಂ = ಸ್ವಭಾವದಿಂದೆ; ಲಿಂಗದ = ಲಿಂಗತ್ರಯದ; ಏಕವಚನಂ = ಏಕವಚನಮೆನಿಪುದು; ಮತ್ತೆ = ಬಳಿಕಂ; ಕೃತಿಪದ್ಧತಿಯೊಳ್ = ಕಾವ್ಯಪದ್ಧತಿಯಲ್ಲಿ; ಪೀನಂ = ವಿಶೇಷವಾಗಿ; ಬಹುವಚನಾರ್ಥಮುಂ = ಬಹುವಚನದರ್ಥವಂ; ಆನಲ್ = ಧರಿಸಲ್; ಸಾಲ್ದತ್ತು = ಸಲುವಳಿಯಾಯಿತು.

ವೃತ್ತಿಪ್ರಯೋಗಂ.—ಏಕವಚನಕ್ಕೆ—ಅವನೇನ್, ಅವಳೇನ್, ಅದೇನ್.
ಬಹುವಚನಾರ್ಥಕ್ಕೆ—ತತ್ಪರಿಜನಾಲಾಪಂಗಳೇನ್.

## ಸೂತ್ರಂ.

Pure Saṁskṛita crude nouns (ಪ್ರಕೃತಿ) are used in an unaltered form as nominal bases in Canarese, and are then called ಸಮಸಂಸ್ಕೃತಂ. They (generally) cannot form compounds with pure Canarese words.

ಸಮುದಿತಸಂಖ್ಯಾವ್ಯಯರಹಿ
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ |
ತ್ತಮವರ್ಣಪ್ರಕೃತಿಗಳಂ
ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಳ್ಪರ್. ||80||

ಪದಚ್ಛೇದಂ.—ಸಮುದಿತಸಂಖ್ಯಾವ್ಯಯರಹಿತಂ ಎನಿಸಿ ವರ್ತಿಪ ನಿಘಂಟುವಿನ ನಾಮಪದೋತ್ತಮವರ್ಣಪ್ರಕೃತಿಗಳಂ ಸಮಸಂಸ್ಕೃತವೆಸರಂ ಇಟ್ಟು, ಲಿಂಗಂ ಮಾಳ್ಪರ್.

ಯಥಾನ್ವಯಂ. ಟೀಕು.—ಸಂ = ಲೇಸಾಗಿ; ಉದಿತ = ಉಂಟಾದ; ಸಂಖ್ಯಾ = ಸಂಖ್ಯಾವಾಚಿಗಳಿಂದೆ; ಅವ್ಯಯ = ಅವ್ಯಯಶಬ್ದಂಗಳಿಂದೆ; ರಹಿತಂ = ವಿರಹಿತಂ; ಎನಿಸಿ = ಎನಿಸಿ; ವರ್ತಿಪ = ವರ್ತಿಸುವ; ನಿಘಂಟುವಿನ = ಅಮರಸಿಂಹ ಮೊದಲಾದ ಸಂಸ್ಕೃತನಿಘಂಟುಗಳ; ನಾಮಪದ = ಅಭಿಧಾನಪದಂಗಳಾದ; ಉತ್ತಮವರ್ಣ = ಸುಲಲಿತಾಕ್ಷರಂಗಳಾದ; ಪ್ರಕೃತಿಗಳಂ = ವಿಭಕ್ತಿರಹಿತಮಾದ ಶಬ್ದಂಗಳಂ; ಸಮಸಂಸ್ಕೃತವೆಸರನಿಟ್ಟು = ಸಮಸಂಸ್ಕೃತವೆಂಬ ಹೆಸರಿಟ್ಟು; ಲಿಂಗಂ ಮಾಳ್ಪರ್ = ಶಬ್ದಜ್ಞರ್ ಲಿಂಗವಂ ಮಾಡುವರ್.

ವೃತ್ತಿ.—ಸಂಖ್ಯಾವ್ಯಯಂಗಳಂ ಕಳೆದುಳಿದ ನಿಘಂಟುವಿನ ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿ ಮಾಡಿ, ಸಮಸಂಸ್ಕೃತಮೆಂಬ ಪೆಸರನ್ನಿಟ್ಟು, ಶಬ್ದಜ್ಞರ್ ಲಿಂಗಮಂ ಮಾಳ್ಪರ್.

ಪ್ರಯೋಗಂ.—(ಕಾಮ) ಕಾಮಂ, (ಭೀಮ) ಭೀಮಂ, (ರಾಮ) ರಾಮಂ, (ಸೋಮ) ಸೋಮಂ, (ನಾರದ) ನಾರದಂ, (ನಾರಾಯಣ) ನಾರಾಯಣಂ ಎಂಬಂತೆ.

ಆ ಸಮಸಂಸ್ಕೃತಂಗಳನಚ್ಚಗನ್ನಡದೊಳ್ಬೆರಸಿ ಸಮಾಸಂ ಮಾಡಲಾಗದು ಅದರ್ಕುದಾಹರಣೆ—

ಅರಸುಕುಮಾರನನಾಯತ
ತರಗಡೆಗಣ್ಣಿಂದೆ ನೋಡಿ ಕೆಳದಿಸಮೇತಂ।
ಪರಿಗತನಗೆಯಿಂದಿರ್ದಂ ‖ ಕಂದಭಾಗಂ ‖

ಮುಖತಾವರೆ, ಕಣ್ಮಲಮೆಂಬಂತೆ.

## ಸೂತ್ರಂ.

Saṁskṛita Adverbs, Pronouns, and Participles with final ಅತ್, when not being parts of componnds cannot form declinable bases in Canarese.

ಏದಿತಮೆನಿಪ್ಪವ್ಯಯಮುಂ
ತ್ಯದಾದಿಯುಂ ಶತ್ರೃಙಂತಮುಂ ಸಂಸ್ಕೃತದೊಳ್ ।
ಪದವಿಧಿಯಂ ನೆಱೆ ತಳೆದ
ಲ್ಲದೆ ಕನ್ನಡದಲ್ಲಿ ಲಿಂಗಮಾಗವು ನಿಜದಿಂ ‖ 81 ‖

ಪದಚ್ಛೇದಂ.—ಏದಿತಂ ಎನಿಪ್ಪ ಅವ್ಯಯಮುಂ ತ್ಯದಾದಿಯುಂ ಶತ್ರೃಙಂತಮುಂ ಸಂಸ್ಕೃತದೊಳ್ ಪದವಿಧಿಯಂ ನೆಱೆ ತಳೆದು, ಅಲ್ಲದೆ ಕನ್ನಡದಲ್ಲಿ ಲಿಂಗಂ ಆಗವು ನಿಜದಿಂ.

ಅನ್ವಯಂ.—ಕನ್ನಡದಲ್ಲಿ ನಿಜದಿಂ ಲಿಂಗಂ ಆಗವು.

ಟೀಕು.—ಏದಿತಂ = ಪ್ರಸಿದ್ಧಂ; ಎನಿಪ್ಪ = ಎನಿಸುವ; ಅವ್ಯಯಮುಂ = ಅವ್ಯಯಶಬ್ದಂಗಳುಂ; ತ್ಯದಾದಿಯುಂ = ತ್ಯತ್ ಎಂಬುದಾದಿಯಾದ ಸರ್ವನಾಮಶಬ್ದಂಗಳುಂ; ಶತ್ರೃಙಂತಮುಂ = ಶತ್ರೃಙಂತಶಬ್ದಮುಂ; ಸಂಸ್ಕೃತದೊಳ್ = ಸಂಸ್ಕೃತದಲ್ಲಿ; ಪದವಿಧಿಯಂ =

ಸಮಾಸವಿಧಿಯಂ; ನೆಱೆ = ಚನ್ನಾಗಿ; ತಳೆದಲ್ಲದೆ = ಧರಿಸಿದಲ್ಲದೆ; ಕನ್ನಡದಲ್ಲಿ = ಕರ್ಣಾಟಕ ದಲ್ಲಿ; ನಿಜದಿಂ = ಸ್ವಭಾವದಿಂದೆ; ಲಿಂಗಂ = ಲಿಂಗಂಗಳ್; ಆಗವು = ಸಲುವಳಿಯಾಗವು.

ವೃತ್ತಿ.—ಪ್ರಸಿದ್ಧಮಪ್ಪವ್ಯಯಂಗಳುಂ ತ್ಯದಾದಿಯುಂ ಶತ್ರ್ಯಂತಮುಂ ಸಂಸ್ಕೃತದೊಳ್ಸಮಾಸಮಂ ಪಡೆದಲ್ಲದೆ ಕನ್ನಡದೊಳ್ಸ್ವಭಾವದಿಂ ಲಿಂಗ ಮಾಗವು.

ಪ್ರಯೋಗಂ.—ಅವ್ಯಯಕ್ಕೆ—ಅಂತರ್, ಬಹಿರ್, ಉಚ್ಚೈಸ್, ನೀಚೈಸ್, ಮುಹುರ್, ಪುನರ್, ಅಹಸ್, ಈಷತ್, ಯುಗಪತ್, ಪೃಥಕ್ ಇವು ಮೊದ ಲಾದ ಸಹಜಾವ್ಯಯಂಗಳಂನಿಱಿಸಿ, ವಿಭಕ್ತಿಯಂ ಪತ್ತಿಸಲಾಗದು.

ಅವ್ಯಯಸಮಾಸಕ್ಕೆ—ಅಂತರ್ಮುಖ, ಬಹಿರಂಗ, ಉಚ್ಚೈರ್ಧ್ವಾನ, ನೀಚೈ ರ್ಗತ, ಮುಹುರ್ನಿರೀಕ್ಷಣ, ಪುನಃಪಾಕ, ಪ್ರಾತಃಕಾಲ, ಅಹರ್ನಿಶ, ಈಷ ದ್ಭೇದ, ಯುಗಪತ್ಸಂಭ್ರಮ, ಪೃಥಕ್ಚರಿತ್ರ ಎಂದು, ಸಮಾಸಂ ಮಾಡಿ—ಅಂತ ರ್ಮುಖಂ, ಅಂತರ್ಮುಖನಂ, ಅಂತರ್ಮುಖನಿಂ, ಅಂತರ್ಮುಖಂಗೆ, ಅಂತ ರ್ಮುಖನತ್ತಣಿಂ, ಅಂತರ್ಮುಖನ, ಅಂತರ್ಮುಖನೊಳ್ ಎಂಬಂತೆಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು.

ತ್ಯದಾದಿಯಾದ ಸರ್ವನಾಮಂಗಳ್ಗೆ—ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಯುಷ್ಮದ್, ಅಸ್ಮದ್, ಭವತ್, ಕಿಂ ಎಂದೀ ತ್ಯದಾದಿಶಬ್ದಂ ಗಳಂನಿಱಿಸಿ, ವಿಭಕ್ತಿಯಂ ಕುಡದೆ,

ಇವಱ ಸಮಾಸಕ್ಕೆ—ತ್ಯತ್ಕಥನ; ತದ್ವಚನ; ಯತ್ಸುಖ; ಏತತ್ಸೌಖ್ಯ; ಇ ದನ್ನಿಮಿತ್ತ; ಅದಃಪುತ್ರ; ಅದಃಪುತ್ರನೆಂದೀತನ ಪುತ್ರನೆಂಬುದರ್ಥಂ; ಇದಂದೇ ವ, ಇದಂದೇವನೆಂದೀತನೆ ದೇವನೆಂಬರ್ಥಂ; ಯುಷ್ಮದ್ಗುಣ; ಅಸ್ಮದ್ದೌಹಿತ್ರ; ಭವದ್ರಾಜ್ಯ; ಕಿಂವಾರ್ತೆಯೆಂದಾರ ವಾರ್ತೆಯೆಂಬರ್ಥ; ಈ ತೆಱದಿಂ ನಿಱಿಸಿ ಸಮಾಸಮಂ ಮಾಡಿ, ವಿಭಕ್ತಿಯಂ ಪತ್ತಿಸುವುದು—ತ್ಯತ್ಕಥನಂ, ತ್ಯತ್ಕಥನ ಮಂ, ತ್ಯತ್ಕಥನದಿಂ ಎಂಬಂತಱಿವುದು.

ಶತ್ರ್ಯಂತಕ್ಕೆ[1]—ಕ್ವಣತ್, ಝಣತ್, ಭ್ರಮತ್, ರಟತ್, ಚಳತ್, ದಳತ್, ಮಿಳತ್, ಲಸತ್ ಮುಂಚತ್, ಚಂಚತ್, ಘೋಷ್ಯತ್ ಎಂಬೀ ಶತ್ರ್ಯಂತಗ ಳ್ಗೆ ವಿಭಕ್ತಿಯಂ ಪತ್ತಿಸದೆ,

[1] ಶತೃ or ಶತ್ರೃ denotes, according to Pâṇini, the kṛit or affix ಅತ್.

ಇವಱಿ ಸಮಾಸಕ್ಕೆ—ಕ್ವಣತ್ಕಂಕಣ, ಝಣನ್ನೂಪುರ, ಭ್ರಮದ್ಭ್ರಮರ, ರಟತ್ಕೋಕಿಲ, ಚಳತ್ಕುಂತಳ, ದಳತ್ಕೈರವ, ಮಿಳದ್ವಿಪ್ಕಿರ, ಲಸದ್ವಚನ, ಮುಂಚತ್ಕಂಚುಕ, ಚಂಚದ್ರೂಪ, ಗರ್ಜನ್ಮೇಘ, ಘೋಷ್ಯದರ್ಣವ ಎಂದಿರಿಸಿ, ಸಮಾಸಮಂ ಮಾಡಿ, ಎಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು—ಕ್ವಣತ್ಕಂಕಣಂ, ಕ್ವಣತ್ಕಂಕಣಮಂ, ಕ್ವಣತ್ಕಂಕಣದಿಂ, ಕ್ವಣತ್ಕಂಕಣಕ್ಕೆ, ಕ್ವಣತ್ಕಂಕಣದತ್ತಣಿಂ, ಕ್ವಣತ್ಕಂಕಣದ, ಕ್ವಣತ್ಕಂಕಣದೊಳ್.

## ಸೂತ್ರಂ.

ಏಕದ್ವಿತ್ರ್ಯಾದಿ ಸಮಾ
ಸಾಕೃತಿಯಿಂ ಪ್ರತ್ಯಯಾಂತದಿಂದಿರೆ ಲಘುವ ।
ಪ್ಪೇಕಾರಮನತ್ವಮನಿರ
ದಾಕಾರಂ ಬಹುಳದಿಂದೆ ತಳೆದಿರೆ ಲಿಂಗಂ ‖ 82 ‖

**Further the Saṁskṛita Numbers up to ten are indeclinables in Canarese, unless they form parts of compounds or are in conjunction with affixes (ಪ್ರತ್ಯಯಂ), here ತಯ, ಕ, ಮ.—To form Canarese declinable bases of Feminine Saṁskṛita nouns ending in ಆ, this ಆ is changed mostly into ಎ, seldom into ಅ.**

ಪದಚ್ಛೇದಂ.—ಏಕದ್ವಿತ್ರ್ಯಾದಿ ಸಮಾಸಾಕೃತಿಯಿಂ ಪ್ರತ್ಯಯಾಂತದಿಂದೆ ಇರೆ, ಲಘುವಪ್ಪ ಏಕಾರಮಂ ಅತ್ವಮಂ, ಇರದೆ ಆಕಾರಂ, ಬಹುಳದಿಂದೆ ತಳೆದು ಇರೆ, ಲಿಂಗಂ.

ಅನ್ವಯಂ.—ಆಕಾರಂ ಲಘುವಪ್ಪೇಕಾರಮಂ ಅತ್ವಮಂ ಇರದೆ ಬಹುಳದಿಂದೆ ತಳೆದಿರೆ ಲಿಂಗಂ ಎಂಬುದನ್ವಯಂ.

ಟೀಕು.—ಏಕದ್ವಿತ್ರ್ಯಾದಿ = ಏಕ, ದ್ವಿ, ತ್ರಿ ಎಂಬಿವಾದಿಯಾದ ಸಂಖ್ಯಾವಾಚಿಶಬ್ದಂ; ಸಮಾಸಾಕೃತಿಯಿಂ = ಸಮಾಸಾಕಾರದಿಂದೆ; ಪ್ರತ್ಯಯಾಂತದಿಂದೆ = ತಯಪ್ರತ್ಯಯಂ ಮೊದಲಾದ ಪ್ರತ್ಯಯಾಂತದಿಂದೆ; ಇರೆ = ಇರೆ ಲಿಂಗಮಪ್ಪುವು; ಆಕಾರಂ = ಆಕಾರಾಂತಶಬ್ದಂ; ಲಘುವಪ್ಪೇಕಾರಮಂ = ಲಘುವಾದೇಕಾರಮಂ; ಅತ್ವಮಂ = ಅಕಾರಮಂ; ಇರದೆ = ನಿಲ್ಲದೆ; ಬಹುಳದಿಂದೆ = ಬಹುಳದಿಂದೆ; ತಳೆದು = ಧರಿಸಿ; ಇರೆ = ಇರೆ; ಲಿಂಗಂ = ಕನ್ನಡಕ್ಕೆ ಲಿಂಗಮಪ್ಪುವು.

ವೃತ್ತಿ.—ಏಕ, ದ್ವಿ, ತ್ರಿ, ಚತುರ್, ಪಂಚ, ಷಟ್, ಸಪ್ತ, ಅಷ್ಟ, ನವ, ದಶ ಎಂಬಿವು ಸಹಜದಿಂ ಲಿಂಗಮಾಗವು; ಸಮಾಸಮಂ ಮೇಣ್ಪ್ರತ್ಯಯಾಂತ

ಮಂ ಮಾಡೆ, ಲಿಂಗಮಕ್ಕುಂ. ಆಕಾರಾಂತಂ ಹ್ರಸ್ವಮಪ್ಪೇತ್ವಮುಂ ಪಡೆದೊಡಂ ಅಕಾರಾಂತತೆಯುಂ ಪಡೆದೊಡಂ ಲಿಂಗಮಕ್ಕುಂ.

ಪ್ರಯೋಗಂ.—ಸಂಖ್ಯಾವಾಚಿಸಮಾಸಕ್ಕೆ—ಏಕಾಂಗ, ದ್ವಿಮುಖ, ತ್ರಿಲೋಕ, ಚತುರ್ವೇದ, ಪಂಚಭೂತ, ಷಟ್ಕರ್ಮ, ಸಪ್ತದ್ವೀಪ, ಅಷ್ಟಭುಜ, ನವನಿಧಿ, ದಶವ್ಯಾಕರಣ ಎಂದು, ಸಮಾಸಮಾಗಲೊಡಂ—

ಸಂಖ್ಯಾವಾಚಿಪ್ರತ್ಯಯಾಂತಕ್ಕೆ—ಮೇಣ್ ದ್ವಿತಯ, ತ್ರಿತಯ, ಚತುಷ್ಕ, ಪಂಚಕ, ಷಟ್ಕ, ಸಪ್ತಕ, ಅಷ್ಟಕ, ನವಮ, ದಶಮ ಎಂದು, ಪ್ರತ್ಯಯಂ ಪತ್ತಲೊಡಂ—ಎಲ್ಲಕ್ಕಂ ವಿಭಕ್ತಿಯುಂ ಪತ್ತಿಸುವುದು.

ಆಕಾರಮೆಕಾರಮಾದುದರ್ಕೆ—ಮಾಲಾ, ಬಾಲಾ, ಶಾಲಾ, ಏಲಾ, ಲೀಲಾ, ಜ್ವಾಲಾ, ಅಳಕಾ, ಕಳಿಕಾ, ತ್ರೇತಾ, ಸೀತಾ, ಯಾತ್ರಾ, ಮಾತ್ರಾ, ನಿದ್ರಾ, ಮುದ್ರಾ, ಕಶಾ, ಶಾಖಾ, ವೇಳಾ, ಜ್ವಾಲಾ, ರೇಖಾ, ಭಾಷಾ, ಮೂಷಾ, ದ್ರಾಕ್ಷಾ, ಲಾಕ್ಷಾ ಎಂಬಿವು ಮೊದಲಾದುವು ಎಕಾರಾಂತಮುಂ ಪಡೆಯಲೊಡೆ ವಿಭಕ್ತಿ ಪತ್ತುಗುಂ; ಮಾಲೆ, ಬಾಲೆ, ಲೀಲೆ, ಭಾಷೆ, ಯಾತ್ರೆ ಎಂಬಂತೆ.

ಆಕಾರಮೆಕಾರಮುಮ್ ಅಕಾರಮುಮಾದುದರ್ಕೆ—ಗ್ರೀವಾ ಭಿಕ್ಷಾ ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ; ಭಿಕ್ಷ, ಭಿಕ್ಷೆ ಎಂದು ನಿಱಿಸುವುದು.

ಆಕಾರಮ್ ಅಕಾರಮಾದುದರ್ಕೆ—ಕಂಧರಾ, ಉಪತ್ಯಕಾ, ಕರುಣಾ, ಅಧಿತ್ಯಕಾ, ದಂಷ್ಟ್ರಕಾ, ವಾಲುಕಾ ಎಂಬಿವು ಮೊದಲಾದುವು—ಕಂಧರ, ಉಪತ್ಯಕ, ಕರುಣ ಎಂದು, ಅಕಾರಾಂತಂ ಪಡೆಯಲೊಡಂ ವಿಭಕ್ತಿ ಪತ್ತುಗುಂ, ಲಿಂಗಮಾಗಿ.

### ಸೂತ್ರಂ.

ಆದಂ ಹ್ರಸ್ವೈದಂತಮು
ದಾದತ್ವಂ ಹ್ರಸ್ವಮೆನಿಸಿದೀದೂದಂತಂ ।
ಜ್ಯಾದಿಸಮಸ್ತೈಕಾಕ್ಷರ
ಮಾದವಿಕೃತಿಶಬ್ದಮುಕ್ತಿವಿದರಿಂ ಲಿಂಗಂ ॥ 83 ॥

Further, in forming Canarese nominal bases from Saṁskṛita nouns ending in ಆ, this ಆ also is sometimes changed into ಎ; Saṁskṛita final ಈ and ಊ become short; monosyllables remain as they are.

ಪದಚ್ಛೇದಂ.—ಆದಂ ಹ್ರಸ್ವೈದಂತಂ ಅದು ಆದ ಅತ್ವಂ, ಹ್ರಸ್ವಂ ಎನಿಸಿದ ಈದೂದಂತಂ, ಜ್ಯಾದಿಸಮಸ್ತೈಕಾಕ್ಷರಂ ಆದ ಅವಿಕೃತಿಶಬ್ದಂ ಉಕ್ತಿವಿದರಿಂ ಲಿಂಗಂ.

ಯಥಾನ್ವಯಂ. ಟೀಕು.—ಆದಂ = ಪೀನ ಗ್ರಹಣದಿಂದೆ; ಹ್ರಸ್ವೈದಂತಂ = ಕನ್ನಡಕ್ಕೆ ಹ್ರಸ್ವವಾದ ಎಕಾರಾಂತಮುಂ; ಅದು = ಆದು; ಆದತ್ವಂ = ಆದಕಾರಾಂತಶಬ್ದಮುಂ; ಹ್ರಸ್ವಂ = ಕನ್ನಡಕ್ಕೆ ಹ್ರಸ್ವಂ; ಎನಿಸಿದೀದೂದಂತಂ = ಎನಿಸಿದ ಈಕಾರಾಂತ ಊಕಾರಾಂತಂ; ಜ್ಯಾದಿ = ಜ್ಯಾ ಎಂಬ ಶಬ್ದವಾದಿಯಾದ; ಸಮಸ್ತ = ಬಹುಳವಾದ; ಏಕಾಕ್ಷರಮೂದ = ಏಕಾಕ್ಷರವಾದ; ಅವಿಕೃತಿಶಬ್ದಂ = ವಿಕಾರವಿಲ್ಲದ ಶಬ್ದಂಗಳ್; ಉಕ್ತಿವಿದರಿಂ = ವಾಕ್ಯವಿದರಿಂದೆ; ಲಿಂಗಂ = ಲಿಂಗಮಪ್ಪುವು.

ವೃತ್ತಿ.—ಆದಮೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದಕಾರಾಂತಮುಂ ಹ್ರಸ್ವಮಪ್ಪೇತ್ವಮುಂ ಪಡೆದೊಡಂ ಲಿಂಗಮಕ್ಕುಂ; ಈಕಾರಾಂತ ಊಕಾರಾಂತಂಗಳ್ ಹ್ರಸ್ವಮಾದೊಡಂ ಲಿಂಗಮಕ್ಕುಂ; ಜ್ಯಾಶಬ್ದಂ ಮೊದಲಾದೇಕಾಕ್ಷರಶಬ್ದಂಗಳಿರ್ದ ತೆಱದಿಂ ಲಿಂಗಮಪ್ಪುವು.

ಪ್ರಯೋಗಂ.—ಅಕಾರಾಂತಕ್ಕೆ—ವಧ, ಅಭಿಲಾಷ, ಉದಾಹರಣ, ದರ್ಭ, ಪ್ರಶ್ನ, ಊಹ, ಅಳಕ ಎಂಬಿವು ವಧೆ, ಅಭಿಲಾಷೆ ಎಂಬಂತೆ ಎತ್ವಮುಂ ಪಡೆದೊಡಂ ಲಿಂಗಮಪ್ಪುವು.

ಈಕಾರಾಂತಕ್ಕೆ—ಲಕ್ಷ್ಮೀ, ಗೌರೀ, ಸರಸ್ವತೀ, ಶಚೀ, ಭಾಮಿನೀ, ಗೋಮಿನೀ, ಕಾಮಿನೀ, ನಾರೀ, ಕುಮಾರೀ, ಕಾವೇರೀ, ಗೋದಾವರೀ, ಗಾಂಧಾರೀ ಎಂಬೀಕಾರಾಂತಕ್ಕೆ ಲಕ್ಷ್ಮಿ, ಗೌರಿ, ಸರಸ್ವತಿ ಎಂಬಂತೆ ಹ್ರಸ್ವಮಾದೊಡಂ,

ಊಕಾರಾಂತಕ್ಕೆ—ಸರಯೂ, ಕಂಡೂ, ಖರ್ಜೂ, ಕುಹೂ, ಜಂಬೂ. ಸ್ವಯಂಭೂ, ಖಲಪೂ, ಅಲಾಬೂ, ಅಭ್ರಮೂ, ಚಮೂ ಎಂಬೂಕಾರಾಂತಂಗಳ್ ಸರಯು, ಕಂಡು ಎಂಬಂತೆ ಹ್ರಸ್ವಮಾದೊಡಂ, ಲಿಂಗಮಕ್ಕುಂ.

ಏಕಾಕ್ಷರಕ್ಕೆ—ಜ್ಯಾ, ಮಾ, ಕ್ಷ್ಮಾ, ಶ್ರೀ, ಸ್ತ್ರೀ, ಭೀ, ಭ್ರೂ, ಕೂ ಎಂಬಿವು ಮೊದಲಾದ ಏಕಾಕ್ಷರಶಬ್ದಂಗಳಿರ್ದ ತೆಱದಿಂ ವಿಭಕ್ತಿಯುಂ ಪಡೆವುವು.

## ಸೂತ್ರಂ.

Saṁskṛita nouns with final ಅ, ಇ, ಉ and ಋ (generally) remain as they are in Canarese; but final ಋ is sometimes changed.

ಅತ್ವಾಂತಮುಮಿತ್ವಾಂತಮು
ಮುತ್ವಾಂತಮುಮಾ ಋದಂತಮುಂ ನಿಜಲಿಂಗಂ |
ಋತ್ವಕ್ಕಾರಾದೇಶಂ
ತತ್ವಂ ಪೀನಂ ವಿಧಾತೃಶಬ್ದಂ ರಾಂತಂ || 84 ||

ಪದಚ್ಛೇದಂ.—ಅತ್ವಾಂತಮುಂ ಇತ್ವಾಂತಮುಂ ಉತ್ವಾಂತಮುಂ ಆ ಋದಂತಮುಂ ನಿಜಲಿಂಗಂ; ಋತ್ವಕ್ಕೆ ಆರಾದೇಶಂ, ತತ್ವಂ; ಪೀನಂ ವಿಧಾತೃಶಬ್ದಂ ರಾಂತಂ.

ಯಥಾನ್ವಯಂ. ಟೀಕು.—ಅತ್ವಾಂತಮುಂ = ಅಕಾರಾಂತಶಬ್ದಮುಂ; ಇತ್ವಾಂತಮುಂ = ಇಕಾರಾಂತಶಬ್ದಮುಂ; ಉತ್ವಾಂತಮುಂ = ಉಕಾರಾಂತಶಬ್ದಮುಂ; ಆ ಋದಂತಮುಂ = ಆ ಋಕಾರಾಂತಶಬ್ದಮುಂ; ನಿಜಲಿಂಗಂ = ನಿಜದಿ ಲಿಂಗಮಪ್ಪವು, ಇರ್ದ ಹಾಂಗೆ ಲಿಂಗವಪ್ಪದೆಂಬರ್ಥಂ; ಋತ್ವಕ್ಕೆ = ಋಕಾರಾಂತಕ್ಕೆ; ಆರಾದೇಶಂ = ಆರ ಎಂಬಾದೇಶವಪ್ಪುದು; ತತ್ವಂ = ತಕಾರಾಂತವಪ್ಪದು; ಪೀನಂ = ವಿಶೇಷವಾಗಿ; ವಿಧಾತೃಶಬ್ದಂ = ವಿಧಾತೃವೆಂಬ ಶಬ್ದಂ; ರಾಂತಂ = ರೇಫಾಂತವಪ್ಪುದು.

ವೃತ್ತಿ. —ಅಕಾರಾಂತಮುಮಿಕಾರಾಂತಮುಮುಕಾರಾಂತಮುಂ ಋಕಾರಾಂತಮುಂ ಸ್ವಭಾವದಿಂ ಲಿಂಗಮಪ್ಪುವು; ಪೀನಗ್ರಹಣದಿಂ ಋಕಾರಾಂತಕ್ಕೆ ಆರಾದೇಶಮೊರ್ಮೆಯುಂಟು; ಧಾತೃಶಬ್ದಕ್ಕೆ ತಕಾರಮುಂ ವಿಧಾತೃಶಬ್ದಕ್ಕೆ ರೇಫಮುಮಕ್ಕುಂ.

ಪ್ರಯೋಗಂ.— ಅಕಾರಾಂತಕ್ಕೆ—ಭುವನ, ಭವನ, ನಳಿನ, ಶಯನ, ನಯನ, ಕುಲಿಶ, ಕಲಶ, ಕರಣ, ಚರಣ, ದೇಶ, ಕೋಶ, ಧ್ಯಾನ, ಮೌನ.

ಇಕಾರಾಂತಕ್ಕೆ—ಶ್ರುತಿ, ಸ್ಮೃತಿ, ಧೃತಿ, ಕೃತಿ, ಗತಿ, ಪತಿ, ಯತಿ, ಮತಿ, ಶುದ್ಧಿ, ಸಿದ್ಧಿ, ಬುದ್ಧಿ, ವೃದ್ಧಿ, ಕವಿ, ರವಿ, ಪವಿ, ಅರಿ, ಗಿರಿ, ಹರಿ, ಲಿಪಿ, ಕಪಿ, ಧ್ವನಿ, ಮುನಿ.

ಉಕಾರಾಂತಕ್ಕೆ—ಪಶು, ಶಿಶು, ರಿಪು, ಭಾನು, ಧೇನು, ಸಾನು, ಸೇತು, ಕೇತು, ಬಂಧು, ಸಿಂಧು, ದಾರು, ಭೀರು.

ಋಕಾರಾಂತಕ್ಕೆ—ಪಿತೃ, ಸವಿತೃ, ನಪ್ತೃ, ಕರ್ತೃ, ನೇತೃ, ಹೋತೃ, ಜಾಮಾತೃ, ದುಹಿತೃ, ಭರ್ತೃ, ನನಾಂದೃ, ಯಾತೃ, ಮಾತೃ, ಧಾತೃ.

ಆರಾದೇಶಕ್ಕೆ—ಸವಿತಾರ, ಕರ್ತಾರ, ನೇತಾರ, ಹೋತಾರ, ದುಹಿತಾರ, ಭರ್ತಾರ, ಜೇತಾರ.

ಧಾತೃಶಬ್ದದ ತಕಾರಕ್ಕೆ—ಧಾತ, ಮಾಂಧಾತ.—ಭೀತನ ಧಾತನ ಸತ್ಯೋಪೇತನ. ಮಾಂಧಾತನದೊರೆಯಪ್ಪ ಧೀರರುಂ ಚಾಗಿಗಳುಂ.

ವಿಧಾತೃಶಬ್ದದ ರಾಂತಕ್ಕೆ—ವಿಧಾತ್ರ. ಭೀತನಿಕಾಯಕ್ಕೆ ವಿಧಾತ್ರನುಂಡಿಗೆ ಜವಂ ಕೊಟ್ಟೊಲೆ.

## ಸೂತ್ರಂ.

For ಪಿತೃ and ಸಖಿ are substituted ಪಿತರ and ಸಖ.

ಪಿತೃಶಬ್ದದೆಡೆಗರಾದೇ
ಶತೆ ಸಖಿಶಬ್ದಕ್ಕೆ ನೆಟ್ಟನತ್ವಾದೇಶ ।
ಸ್ಥಿತಿಯಾಗೆ ಲಿಂಗಮಕ್ಕುಂ
ವಿತರ್ಕಮೇಂ ಪೇೞ್ ಸ್ವರಾಂತಮಿವು ಲಿಂಗಂಗಳ್
॥ 85 ॥

ಪದಚ್ಛೇದಂ.— ಪಿತೃಶಬ್ದದ ಎಡೆಗೆ ಅರಾದೇಶತೆ, ಸಖಿಶಬ್ದಕ್ಕೆ ನೆಟ್ಟನೆ ಅತ್ವಾದೇಶಸ್ಥಿತಿ ಆಗೆ, ಲಿಂಗಂ ಅಕ್ಕುಂ. ವಿತರ್ಕಂ ಏಂ? ಪೇೞ್! ಸ್ವರಾಂತಂ ಇವು ಲಿಂಗಂಗಳ್.

ಅನ್ವಯಂ.—ಲಿಂಗಂಗಳಿವು ಸ್ವರಾಂತಂ.

ಟೀಕು.—ಪಿತೃಶಬ್ದದ = ಪಿತೃ ಎಂಬ ಶಬ್ದದ; ಎಡೆಗೆ = ಸ್ಥಾನಕ್ಕೆ; ಅರಾದೇಶತೆ = ಅರ ಎಂಬಾದೇಶತ್ವಂ; ಸಖಿಶಬ್ದಕ್ಕೆ = ಸಖಿಯೆಂಬ ಶಬ್ದಕ್ಕೆ; ನೆಟ್ಟನೆ = ವ್ಯಕ್ತವಾಗಿ; ಅತ್ವಾದೇಶಸ್ಥಿತಿ = ಅಕಾರಾದೇಶಸ್ಥಿತಿ; ಆಗೆ = ಆಗೆ; ಲಿಂಗಂ = ಲಿಂಗಂ; ಅಕ್ಕುಂ = ಅಪ್ಪುದು; ವಿತರ್ಕಮೇಂ = ವಿವಾದವೇಂ; ಪೇೞ್ = ಹೇೞ್; ಲಿಂಗಂಗಳ್ = ಲಿಂಗಂಗಳ್; ಇವು = ಈ ಪೇೞ್ದುವು; ಸ್ವರಾಂತಂ = ಸ್ವರಾಂತಲಿಂಗಂಗಳ್ ಅಪ್ಪುವು.

ವೃತ್ತಿ.— ಸ್ವರ್ಗಸ್ಥರಪ್ಪ ಪಿತೃಗಳ್ಗರಾದೇಶಮುಂ ಸಖಿಶಬ್ದದಿಕಾರಕ್ಕಕಾರಮುಮಾಗೆ, ಲಿಂಗಮಕ್ಕುಂ.

ಪ್ರಯೋಗಂ.— ಪಿತೃಶಬ್ದಕ್ಕೆ—ಪಿತರಂ. ಬಡವರ ಪಿತರರನ್ತೆ ಮಱುಗಲು ತ್ತಿಕರ್ಣಂ.

ಸಖಿಶಬ್ದಕ್ಕೆ.—ಸಖಂ. ನಿಮಗೆ ಸಖಂ ಕಮಲಸಖಂ.

ಇವು ಸಂಸ್ಕೃತಸ್ವರಾಂತಲಿಂಗಂಗಳ್.

## ಸೂತ್ರಂ.

Saṁskrita nominal bases ending in consonants are in Canarese, made to end in ಅ, or in ಉ with doubling of the final consonant; or their final consonant is dropped.

ಜನಮುಲಿವ ಸಂಸ್ಕೃತವ್ಯಂ
ಜನಾಂತಲಿಂಗಂಗಳತ್ವಮಂ ದ್ವಿತ್ವದಿನು |
ತ್ವನಿಯೋಗಮನಂತ್ಯಾದ
ರ್ಶನಮಂ ಮೇಣ್ತಾಳ್ದು ಕನ್ನಡಕ್ಕಿವು ಲಿಂಗಂ || 86 ||

ಪದಚ್ಛೇದಂ.—ಜನಂ ಉಲಿವ ಸಂಸ್ಕೃತವ್ಯಂಜನಾಂತಲಿಂಗಂಗಳ್ ಅತ್ವಮಂ ದ್ವಿತ್ವದಿಂ ಉತ್ವನಿಯೋಗಮಂ ಅಂತ್ಯಾದರ್ಶನಮಂ ಮೇಣ್ ತಾಳ್ದು, ಕನ್ನಡಕ್ಕೆ ಇವು ಲಿಂಗಂ.

ಯಥಾನ್ವಯಂ. ಟೀಕು.— ಜನಂ = ವಿದ್ವಜ್ಜನಂ; ಉಲಿವ = ಪೇೞ್ವ; ಸಂಸ್ಕೃತ = ಸಂಸ್ಕೃತದ; ವ್ಯಂಜನಾಂತ = ವ್ಯಂಜನಾಂತಂಗಳಾದ; ಲಿಂಗಂಗಳ್ = ಪ್ರಕೃತಿಸಂಜ್ಞೆಯುಳ್ಳ ಲಿಂಗಂಗಳ್; ಅತ್ವಮಂ = ಅಕಾರಮಂ; ದ್ವಿತ್ವದಿಂ = ದ್ವಿರ್ಭಾವದೊಡನೆ; ಉತ್ವನಿಯೋಗಮಂ = ಉಕಾರದ ನಿಯೋಗಮಂ; ಅಂತ್ಯ = ಕಡೆಯಕ್ಷರದ; ಅದರ್ಶನಮಂ = ಲೋಪಮಂ; ಮೇಣ್ = ವಿಕಲ್ಪದಿಂದೆ; ತಾಳ್ದು = ಧರಿಸಿ; ಕನ್ನಡಕ್ಕೆ = ಕರ್ಣಾಟಕಕ್ಕೆ; ಇವು = ಈ ಪೇೞ್ದುವು; ಲಿಂಗಂ = ಲಿಂಗಮಪ್ಪುವು.

ವಿಚಾರಂ.— ಇಲ್ಲಿ ವಿಚಾರಮುಂಟು—ಸಕಾರಾಂತಪ್ರಕೃತಿಗಳ್ಗೆ ದ್ವಿತ್ವದಿಂ ಉತ್ವಮುಮಂತ್ಯಲೋಪಮುಂ ವಿಕಲ್ಪಂದಿಂದಕ್ಕುಂ. ಶಬ್ದಾನುಶಾಸನದಲ್ಲಿ ಸೂತ್ರಂ (2, 34) || ಉಗಬಾದೀನಾಂ || ವೃತ್ತಿ || ಅಬಾದೀನಾಂ ಶಬ್ದಾನಾಂ ಉಗಾಗಮೋ ಭವತಿ || ಎಂದುದಾಗಿ, ಅಬಾದಿಗಳ್ಗೆ (ಅಪ್ ಮುಂತಾದ ಶಬ್ದಂಗಳ್ಗೆ) ಉಗಾಗಮಂ ಬರ್ಪುದು; ಉಗಾಗಮಂ ಬಂದಲ್ಲಿ ದ್ವಿತ್ವಮುಂಟು. ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್, ಪುರಿತತ್, ಅಗ್ನಿಚಿತ್,

ಯಜುಸ್, ಸದಸ್, ತಟಿತ್ ಇವಾದಿಯಾದುವು ಅಬಾದ್ಯಾಕೃತಿಗಣಂ; ಇವರ್ಕೆ ದ್ವಿತ್ವದಿಂ ಉತ್ವಮುಂಟು. ಸೂತ್ರಂ (2, 35) ‖ ವಾಗಾದೀನಾಂ ಸ್ವಂತವಚ್ಚ ‖ ವೃತ್ತಿ ‖ ವಾಚ್ ಇತ್ಯೇವಮ್ ಆದೀನಾಂ ಶಬ್ದಾನಾಂ ಸ್ವಂತವತ್ ಪ್ರಥಮೈಕವಚನವದ್ ರೂಪಮ್ ಅತಿದಿಶ್ಯತೇ ಉಗಾಗಮಶ್ ಚ ಭವತಿ ‖ ಎಂದುದಾಗಿ, ವಾಗಾದಿಗಣಕ್ಕೆ ಸಂಸ್ಕೃತಪ್ರಥಮೈಕವಚನದ ಮೇಲೆ ದ್ವಿತ್ವದಿನುತ್ವಮಕ್ಕುಂ; ವಾಕ್ಕು, ದಿಕ್ಕು, ತ್ವಕ್ಕು, ಋಕ್ಕು, ಉಷ್ಣಿಕ್ಕು, ಕ್ಷುತ್ತು, ಪ್ರತಿಪತ್ತು, ಪರಿಷತ್ತು ಎಂಬಂತೆ. ವಾಚ್, ತ್ವಚ್, ಕ್ಷುಧ್, ವಿರುಧ್, ಸಮಿಧ್, ಸಂಪದ್, ಪ್ರತಿಪದ್, ಪರಿಷದ್, ವಿಪದ್, ಉಷ್ಣಿಹ್, ಋಚ್, ಸ್ರಜ್, ದ್ವಿಷ್, ದಿಶ್, ವಿಶ್ ಇವಾದಿಯಾದುವು ವಾಗಾದ್ಯಾಕೃತಿಗಣಂ. ಸೂತ್ರಂ (2, 36) ‖ ಮಹದಾದೀನಾಮ್ ಅಪಿ ‖ ವೃತ್ತಿ ‖ ಮಹದಾದೀನಾಂ ಶಬ್ದಾನಾಂ ಸ್ವಂತವದ್ ರೂಪಮ್ ಅತಿದಿಶ್ಯತೇ ಉಗಾಗಮಶ್ ಚ ಭವತಿ ನಪುಂಸಕಲಿಂಗವಿಷಯೇ ‖ ಎಂದುದಾಗಿ, ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ. ಮಹತ್ತು, ಬೃಹತ್ತು, ಪ್ರಾಕ್ಕು, ಅವಾಕ್ಕು, ಸಮ್ಯಕ್ಕು ಎಂಬಂತೆ; ಪುಲ್ಲಿಂಗದಲ್ಲಿ ಮಹಂತಂ, ಬೃಹಂತಂ, ಪ್ರಾಂಚಂ, ಸಮ್ಯಂಚಂ, ಪ್ರತ್ಯಂಚಂ ಎಂದಕ್ಕುಂ. ಮಹತ್, ಬೃಹತ್, ಪ್ರಾಚ್, ಅವಾಚ್, ಪ್ರತ್ಯಚ್, ಉದಚ್, ತಿರ್ಯಚ್, ವಿಷ್ವಚ್, ನ್ಯಚ್, ಅಮುದ್ರ್ಯಚ್, ಅದದ್ರ್ಯಚ್, ಅಮುಮುಯಚ್, ಅದಮುಯಚ್, ಸಧ್ರ್ಯಚ್, ಸಮ್ಯಚ್ ಇವಾದಿಯಾದುವು ಮಹದಾದ್ಯಾಕೃತಿಗಣಂ.

ವೃತ್ತಿ. — ಸಂಸ್ಕೃತದ ವ್ಯಂಜನಾಂತಲಿಂಗಂಗಳತ್ವಮಂ ಪಡೆದುಂ ದ್ವಿತ್ವಂ ಬೆರಸಿದುತ್ವಮಂ ಪಡೆದುಂ ಅಂತ್ಯಲೋಪಮಂ ಮೇಣ್ಪಡೆದುಂ ಲಿಂಗಮಕ್ಕುಂ.

ಪ್ರಯೋಗಂ.—ದಿವ್, ಸ್ರಜ್, ಚತುರ್, ಮರುತ್, ಬುಧ್, ಕಕುಭ್, ವೇದವಿದ್, ಪುರ್, ಮುದ್, ಸಮವಯಸ್, ಗುಣಭಾಜ್, ವಿಹಾಯಸ್, ಸಂಪದ್ ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರಜ, ಚತುರ ಎಂಬಂತತ್ವಮಾದೊಡಂ—

ರಜ್, ಅಪ್, ಕ್ಷುತ್, ಪ್ರತಿಪತ್, ಋಕ್, ಯಜುಸ್, ವಿದ್ಯುತ್, ದ್ವಿಟ್, ಪ್ರಾವೃಟ್, ವಾಕ್ ಇವು ಮೊದಲಾದುವರ್ಕೆ ಉತ್ವಂ ಬೆರಸಿ ದ್ವಿರ್ಭಾವವಾಗಿ ರಜ್ಜು, ಅಪ್ಪು, ಕ್ಷುತ್ತು ಎಂಬಂತಾದೊಡಂ—

ರಾಜನ್, ಮೂರ್ಧನ್, ಪೂಷನ್, ಅರ್ಯಮನ್, ಮಘವನ್, ಕರಿನ್, ಷಂಡನ್, ಧಾಮನ್, ಸೀಮನ್, ಊಷ್ಮನ್, ಕರ್ಮನ್, ಚರ್ಮನ್, ಬ್ರಹ್ಮನ್, ಪುರೂರವನ್, ಅಧ್ವನ್, ಯುವನ್ ಇವು ಮೊದಲಾದ ಶಬ್ದಂಗಳಂತ್ಯಲೋಪಮಾಗಿ ರಾಜ, ಪೂಷ, ಮೂರ್ಧ ಎಂಬಂತಾದೊಡಂ ಲಿಂಗಮಪ್ಪುವು; ಸೀಮೋಷ್ಮಂಗಳದಂತತೆಗೆ, ಸೀಮೆ ಊಷ್ಮೆ ಎಂದು, ಎತ್ವಮುಮುಂಟು.

ಮೇಣೆಂಬ ವಿಕಲ್ಪಾರ್ಥದಿಂ ಸಕಾರಾಂತದಲ್ಲಿ—ಯಶ, ಯಶಸ್ಸು; ತೇಜ, ತೇಜಸ್ಸು; ವಯ, ವಯಸ್ಸು; ಪಯ, ಪಯಸ್ಸು; ಮನ, ಮನಸ್ಸು; ಶ್ರೇಯ, ಶ್ರೇಯಸ್ಸು ಎಂದು, ಸಲ್ವುದು.

ಮೇಣೆಂಬುದಱಿಂ ಸಹಜ ವ್ಯಂಜನಮಾಗೆಯೆ ಕೆಲವಿರ್ಪುವು—ವಾಕ್, ಗೀರ್; ಏಕಕಾಲಂ ಯುಗಪದ್. ಶ್ರುತದೇವಿ ವಾಣಿ ವಾಗ್ ಭಾರತಿ ವಚನಂ ಭಾಷೆ. ಮೇಣೆಂಬುದಱಿಂ ಗೀರ್ ಎಂಬುದರ್ಕೆ ಗಿರೆ ಎಂದೆತ್ವಮುಮುಂಟು.

## ಸೂತ್ರಂ.

The Nominative Plural of certain Saṁskṛita words, after having dropped its visarga, is used as a nominal base in Canarese.

ಪ್ರಚುರತೆಯಿಂ ಪ್ರಥಮಾಬಹು
ವಚನಂಗಳವೇಕವಚನಕೃತಲಿಂಗಂಗಳ್ ।
ನಿಚಿತವಿಸರ್ಗಮನುೞಿದಂ
ದುಚಿತಜ್ಞರ್ತಿಳಿವುದಿವನುದಾಹೃತಿಮುಖದಿಂ ॥ 87 ॥

ಪದಚ್ಛೇದಂ.—ಪ್ರಚುರತೆಯಿಂ ಪ್ರಥಮಾಬಹುವಚನಂಗಳ್ ಅವು ಏಕವಚನಕೃತಲಿಂಗಂಗಳ್, ನಿಚಿತವಿಸರ್ಗಮಂ ಉೞಿದ ಅಂದು; ಉಚಿತಜ್ಞರ್ ತಿಳಿವುದು ಇವಂ ಉದಾಹೃತಿಮುಖದಿಂ.

ಅನ್ವಯಂ.—ಪ್ರಚುರತೆಯಿಂ ಪ್ರಥಮಾಬಹುವಚನಂಗಳ್, ಅವು ನಿಚಿತವಿಸರ್ಗಮಂ ಉೞಿದಂದು, ಏಕವಚನಕೃತಲಿಂಗಂಗಳ್; ಉಚಿತಜ್ಞರ್ ಇವಂ ಉದಾಹೃತಿಮುಖದಿಂ ತಿಳಿವುದು.

ಟೀಕು.—ಪ್ರಚುರತೆಯಿಂ = ಪ್ರಸಿದ್ಧಿಯಿಂದೆ; ಪ್ರಥಮಾಬಹುವಚನಂಗಳ್ = ಸಂಸ್ಕೃತದ ಪ್ರಥಮಾವಿಭಕ್ತಿಯ ಬಹುವಚನಂಗಳ್; ಅವು = ಅವು; ನಿಚಿತವಿಸರ್ಗಮಂ = ನಿಶ್ಚಯಿಸಲ್ಪಟ್ಟ ವಿಸರ್ಜನೀಯವಂ; ಉೞಿದಂದು = ಬಿಟ್ಟಂದು; ಏಕವಚನ = ಏಕವಚನವಾಗಿ; ಕೃತ = ಮಾಡಲ್ಪಟ್ಟ; ಲಿಂಗಂಗಳ್ = ಲಿಂಗಂಗಳೆನಿಸುವುವು; ಉಚಿತಜ್ಞರ್ = ಇಂಗಿತಜ್ಞರ್; ಇವಂ = ಈ ಶಬ್ದಂಗಳಂ; ಉದಾಹೃತಿಮುಖದಿಂ = ಉದಾಹರಣೆಯ ಮುಖದಿಂದೆ; ತಿಳಿವುದು = ಅಱಿವುದು.

ವೃತ್ತಿ.—ಸಂಸ್ಕೃತದ ಪ್ರಥಮಾಬಹುವಚನಂಗಳ್ತಂಮ ವಿಸರ್ಗಮಂ ಕಳೆಯೆ, ಕನ್ನಡದೊಳೇಕವಚನಮಾಗಿ, ಲಿಂಗಮಪ್ಪುವು.

ಪ್ರಯೋಗಂ.—ಶ್ವಾನ, ಯುವಾನ, ಅಧ್ವಾನ, ಸಹಾಯ, ಜ್ಯಾಯಾಂಸ, ಕನೀಯಾಂಸ, ವಿದ್ವಾಂಸ, ಭಾಸ್ವಂತ, ಶ್ರೀಮಂತ, ಹನುಮಂತ ಇನ್ತು ಪೊಪ ಲಾದುವು.

ಸೂತ್ರಂ.

One may say that there are 9 different genders in Canarese.

ನೀನಱಿ ಕರ್ಣಾಟಕದೊ
ಳ್ಪೀನಂ ಸ್ತ್ರೀಪುಂನಪುಂಸಕೋಭಯಪುಂಸ್ತ್ರೀ ।
ಸ್ತ್ರೀನಪ್ಸಮಸ್ತವಾಚ್ಯಾ
ನ್ಯೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ ॥88॥

ಪದಚ್ಛೇದಂ.—ನೀಂ ಅಱಿ ಕರ್ಣಾಟಕದೊಳ್ ಪೀನಂ, ಸ್ತ್ರೀಪುಂನಪುಂಸಕೋಭಯಪುಂಸ್ತ್ರೀಸ್ತ್ರೀನಪ್ಸಮಸ್ತವಾಚ್ಯಾನೂನಾವ್ಯಯಂ ಎಂದು, ಲಿಂಗಂ ಒಂಬತ್ತು ತೆಱಂ!

ಅನ್ವಯಂ.— ಲಿಂಗಂ ಒಂಬತ್ತು ತೆಱಂ ನೀಂ ಅಱಿ!

ಟೀಕು.— ಕರ್ಣಾಟಕದೊಳ್ = ಕನ್ನಡದಲ್ಲಿ; ಪೀನಂ = ವೆಗ್ಗಳವಾಗಿ; ಸ್ತ್ರೀ = ಸ್ತ್ರೀಲಿಂಗವೆಂದು; ಪುಂ = ಪುಲ್ಲಿಂಗವೆಂದು; ನಪುಂಸಕ = ನಪುಂಸಕಲಿಂಗವೆಂದು; ಉಭಯ = ಪುಂನಪುಂಸಕಲಿಂಗವೆಂದು; ಪುಂಸ್ತ್ರೀ = ಪುಂಸ್ತ್ರೀಲಿಂಗವೆಂದು; ಸ್ತ್ರೀನಪ್ = ಸ್ತ್ರೀನಪುಂಸಕಲಿಂಗವೆಂದು; ಸಮಸ್ತ = ತ್ರಿವಿಧಲಿಂಗವೆಂದು; ವಾಚ್ಯ = ವಿಶೇಷ್ಯಾಧೀನಲಿಂಗವೆಂದು; ಅನೂನ = ಕೊರತೆಯಿಲ್ಲದ; ಅವ್ಯಯಂ = ಅವ್ಯಯಲಿಂಗವೆಂದು; ಲಿಂಗಂ = ಲಿಂಗಂಗಳ್; ಒಂಬತ್ತು ತೆಱಂ = ಒಂಬತ್ತು ಪ್ರಕಾರವೆಂದು; ನೀಂ = ನೀಂ; ಅಱಿ = ತಿಳಿ.

ವೃತ್ತಿ.—ಕನ್ನಡದೊಳ್ ಪಿರಿದುಂ ಸ್ತ್ರೀಲಿಂಗಮೆಂದುಂ, ಪುಲ್ಲಿಂಗಮೆಂದುಂ, ನಪುಂಸಕಲಿಂಗಮೆಂದುಂ, ಪುಂಸ್ತ್ರೀಲಿಂಗಮೆಂದುಂ, ಸ್ತ್ರೀನಪುಂಸಕಲಿಂಗಮೆಂದುಂ, ಪುಂನಪುಂಸಕಲಿಂಗಮೆಂದುಂ, ತ್ರಿವಿಧಲಿಂಗಮೆಂದುಂ, ವಿಶೇಷ್ಯಾಧೀನಲಿಂಗಮೆಂದುಂ, ಅವ್ಯಯಲಿಂಗಮೆಂದುಂ, ಲಿಂಗವೊಂಬತ್ತು ತೆಱಂ.

ಪ್ರಯೋಗಂ.—ಸ್ತ್ರೀಲಿಂಗಕ್ಕೆ—ಅರಸಿ, ದೇವಿ.

ಪುಲ್ಲಿಂಗಕ್ಕೆ—ಅರಸಂ, ದೇವಂ, ನರಂ, ಸುರಂ.

ನಪುಂಸಕಲಿಂಗಕ್ಕೆ—ಕನ್ನಡಿ, ಕಳಸು, ಜೆಡೆ, ಕೊಡೆ.

ಪುಂನಪುಂಸಕಲಿಂಗಕ್ಕೆ--ರವಿ ಮೂಡಿದಂ, ರವಿ ಮೂಡಿದುದು; ವಿಧು ವಿವಂ, ವಿಧುವಿದು; ಇವಱಿಂತೆ ಮಂಗಳಬುಧಬೃಹಸ್ಪತ್ಯಾದಿನವಗ್ರಹಗಳೆಲ್ಲಂ ಪುಂನಪುಂಸಕಲಿಂಗಂಗಳ್; ಆಳಿವಂ, ಆಳಿದು; ಬಸಂತಂ ಬಂದಂ, ಬಸಂತಂ ಬಂದುದು; ಮಲಯಾನಿಲಂ ತೀಡಿದಂ, ಮಲಯಾನ್ನಿಲಂ ತೀಡಿದುದು; ಕಾಮಂ ಗೆಯುಂ ಕಾಮುಕ್ಕವೇಕತ್ವಮುಳ್ಳುದಱಿಂ ಕಾಮನೆಚ್ಚಂ, ಕಾಮಂ ಪೆರ್ಚಿ ದುದು. ಇವೆಲ್ಲಂ ಪುಂನಪುಂಸಕಂ.

ಪುಂಸ್ತ್ರೀಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್; ಅವರ್ ಗಂಡರ್, ಅವರ್ ಪೆಂಡಿರ್, ಉವರ್ ದೇವರ್, ಉವರ್ ದೇವಿಯರ್. ತೊ ೞ್ತಿಂಬುದುಮಂತೆ—ಇವಂ ದೇವರ ತೊೞ್ತು, ಇವಳ್ದೇವರ ತೊೞ್ತು.

ಸ್ತ್ರೀನಪುಂಸಕಕ್ಕೆ—ಆ ಪೆಣ್ಣಾಣೆ, ಆ ಪೆಣ್ಬಂದುದು; ಆ ಕನ್ನಿಕೆ ಸಲಕ್ಷಣೆ, ಆ ಕನ್ನಿಕೆ ಪೊಲ್ಲದು. ಸಿರಿ ಸರಸ್ವತಿ ದೇವತೆ ಎಂಬಿವುಮಂತೆ—ಸಿರಿಯೊಲ್ವಳೆ ಹೃದ್ಯವಿದ್ಯರಂ; ಸಿರಿಯೊಂದಾಗದೊಡಮೇನೊ ಸುಜನೋತ್ತಂಸಾ; ಸರಸ್ವತಿ ಕಯ್ನೆರವಾಗೆ ಪೇೞ್ದಿಪಳ್; ಪರಮಜಿನೇನ್ದ್ರವಾಣಿಯೆ ಸರಸ್ವತಿ ಬೇಱಿದು ಪೆಣ್ರೂಪಮುಮಂ ಧರಿಯಿಸಿ ನಿಂದುದಲ್ತುದುವೆ; ದೇವತೆಯರ್ ಮೆಚ್ಚಿ ವರಮು ನರಸಂಗಿತ್ತರ್; ಬಾರಿಸಿದುವು ಬಿಡದೆ ಜಡೆದು ವನದೇವತೆಗಳ್. ಆವಳ್ ಸಜ್ಜನವೆಣ್, ಅದು ಸಜ್ಜನವೆಣ್.

ತ್ರಿಲಿಂಗಕ್ಕೆ—ನೀನರಸಂ, ನೀನರಸಿ, ನೀಂ ಪಶು; ತಾನ್, ಆನ್, ಏನ್, ಏತರ್ಕೆ, ಅದರ್ಕೆ ಶಿಶು, ಹಸುಳೆ, ಮಗುವು, ಕೂಸು, ಸೊಂದಿ, ಪಗೆ, ಕೆಳೆ, ಅರಸು, ತರುವಲಿ ಎಂಬಿವೆಲ್ಲಮಂತೆ.

ವಾಚ್ಯಲ್ಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ—ನೇರಿದನಿವಂ, ನೇರಿದಳಿವಳ್; ನೇರಿತ್ತಿದು; ಅಭಿಮಾನಿ, ದಾನಿ, ಸಾಧು, ಪಟು, (ಹಡೂ) ಚಂಡಿ, ರಾಗಿ, ಭೋಗಿ, ಸುಖಿ, ಹೇಡಿ, ಕಲಿ, ಗುರು, ಲಘು ಇವುಮಾ ತೆಱದೆ ಸಲ್ವುವು.

ಅವ್ಯಯಲಿಂಗಕ್ಕೆ—(ಕಂಮಿದಂ, ಕಂಮಿದಳ್, ಕಂಮಿತು) ಭೋಂಕನೆ ಬಂದಂ, ಭೋಂಕನೆ ಬಂದಳ್, ಭೋಂಕನೆ ಬಂದುದು; ತೊಟ್ಟನೆ, ಮೆಲ್ಲನೆ, ಕಮ್ಮನೆ, ಇಮ್ಮನೆ, ಸುಮ್ಮನೆ, ಸಿಯ್ಯನೆ, ಕೆಚ್ಚನೆ, ಪಚ್ಚನೆ, ಪೆಳ್ಳನೆ, ತೆಳ್ಳನೆ,

ಬೆಳ್ಪಳಂ, ಚೆಚ್ಚರಂ, ನೆರ್ನೆರಂ, ಸೋಡಂ, ಬಾಡಮೆಂದು ಬಱಿದೆಂಬರ್ಥಂ, ಅಂತೆವೋಲ್, ಮಿಗೆ, ದಲ್, ವಲಂ, ತೆಱಿಂ, ಕೇಸಂ, ಮತ್ತೆ, ಬಲ್ಲೆ. ಇವಾದಿಯಾಗಱಿವುದು.

## ಸೂತ್ರಂ.

**The 6 classes of words of dependent gender (ವಾಚ್ಯಲಿಂಗಂ, ವಿಶೇಷ್ಯಾಧೀನಲಿಂಗಂ): Pronouns, Adjectives, Relative or Adjective Compounds (ಬಹುವ್ರೀಹಿ) nominal bases of verbal themes, Taddhita nouns, and Numerals.**

ಬಗೆ ನೀನಾನ್ತಾನೆಂಬು
ಕ್ತಿಗಳುಂ[1] ಗುಣವಚನಸರ್ವನಾಮಬಹುವ್ರೀ।
ಹಿಗಳುಂ ಕೃತ್ತದ್ಧಿತಸಂ
ಖ್ಯೆಗಳುಂ ಸಲೆ ವಾಚ್ಯಲಿಂಗಮೆಂದೀ ಕ್ರಮದಿಂ॥ ೮೯ ॥

ಪದಚ್ಛೇದಂ.—ಬಗೆ, ನೀನ್ ಆನ್ ತಾನ್ ಎಂಬ ಉಕ್ತಿಗಳುಂ ಗುಣವಚನ ಸರ್ವನಾಮ ಬಹುವ್ರೀಹಿಗಳುಂ ಕೃತ್‌ತದ್ಧಿತ ಸಂಖ್ಯೆಗಳುಂ ಸಲೆ ವಾಚ್ಯಲಿಂಗಂ ಎಂದು, ಈ ಕ್ರಮದಿಂ!

ಅನ್ವಯಂ.—ವಾಚ್ಯಲಿಂಗಂ ಎಂದು, ಈ ಕ್ರಮದಿಂ ಬಗೆ ಎಂಬುದನ್ವಯಂ.

ಟೀಕು.—ನೀಂ = ನೀನೆಂದು; ಆಂ = ಆನೆಂದು; ತಾಂ = ತಾನೆಂದು; ಎಂಬುಕ್ತಿಗಳುಂ = ಎಂಬ ವಾಕ್ಯಂಗಳುಂ; ಗುಣವಚನ = ಗುಣವಚನಂಗಳುಂ; ಸರ್ವನಾಮ = ಸರ್ವನಾಮಂಗಳುಂ; ಬಹುವ್ರೀಹಿಗಳುಂ = ಬಹುವ್ರೀಹಿಶಬ್ದಂಗಳುಂ; ಕೃತ್ = ಕೃತ್ತುಗಳುಂ; ತದ್ಧಿತ = ತದ್ಧಿತಂಗಳುಂ; ಸಂಖ್ಯೆಗಳುಂ = ಸಂಖ್ಯಾವಾಚಿಗಳುಂ; ಸಲೆ = ಚನ್ನಾಗಿ; ವಾಚ್ಯಲಿಂಗಂ = ವಿಶೇಷ್ಯಾಧೀನಲಿಂಗಮೆಂದು; ಈ ಕ್ರಮದಿಂ = ಈ ರೀತಿಯಿಂದೆ; ಬಗೆ = ಭಾವಿಸು.

ವೃತ್ತಿ.—ನೀನ್, ಆನ್, ತಾನ್ ಎಂಬಿವುಂ ಗುಣವಚನಮುಂ ಸರ್ವನಾಮಮುಂ ಬಹುವ್ರೀಹಿಯುಂ ಕೃತ್ತುಂ ತದ್ಧಿತಮುಂ ಸಂಖ್ಯೆಯುಂ ವಿಶೇಷ್ಯಾಧೀನಲಿಂಗಮೆಂದಱಿವುದು.

ಪ್ರಯೋಗಂ.—ನೀನ್ ಆನ್ ತಾನ್ ಎಂಬಿವರ್ಕೆ—ನೀಂ ಕಾಮಂ, ನೀಂ ರತಿ, ನೀಂ ಗಿಳಿ; ಆಂ ಶಿವಂ, ಆಂ ಗೌರಿ, ಆಂ ನಂದಿ; ತಾನವಂ, ತಾನವಳ್, ತಾನದು.

ಗುಣವಚನಕ್ಕೆ—ಇನಿಯಂ, ಇನಿಯಳ್, ಇನಿದು.

---

[1] Kēśava does not rank ನೀನ್, ಆನ್, ತಾನ್ with the Pronouns (ಸರ್ವನಾಮ); he calls them ಉಕ್ತಿ.

ಸರ್ವನಾಮಕ್ಕೆ—ಪೆಱಿಂ, ಪೆಱಿಳ್, ಪೆಱಿತು.

ಬಹುವ್ರೀಹಿಗೆ—ಅವಂ ವಿಮಲಮತಿ, ಅವಳ್ ವಿಮಲಮತಿ, ಅದು ವಿಮಲಮತಿ; ಅವಂ ಕುಸಿಗೊರಲಂ, ಅವಳ್ ಕುಸಿಗೊರಲೆ, ಅದು ಕುಸಿಗೊರಲ್.

ಕೃತ್ತಿಂಗೆ—ಪಾಡಿದಂ, ಪಾಡಿದಳ್, ಪಾಡಿದುದು.

ತದ್ಧಿತಕ್ಕೆ—ಓದಾಳಿ ಇವಂ, ಓದಾಳಿ ಇವಳ್, ಓದಾಳಿ ಇದು.

ಸಂಖ್ಯೆಗೆ—ಸಾಯಿರ ಗಂಡರ್, ಸಾಯಿರ ಪೆಂಡಿರ್, ಸಾಯಿರ ಮನೆಗಳ್.

## ಸೂತ್ರಂ.

Particles (Indeclinables), though mostly unchangeable, adjust themselves, as it were, to cases, number and gender.

ದೊರೆವಡೆದವ್ಯಯಲಿಂಗಂ
ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ |
ಸರಿ ವಚನತ್ರಿತಯಕ್ಕಂ
ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ || 90 ||

ಪದಚ್ಛೇದಂ.—ದೊರೆವಡೆದ ಅವ್ಯಯಲಿಂಗಂ ಸರಿ ಸರ್ವವಿಭಕ್ತಿಗಂ, ತ್ರಿಲಿಂಗಕ್ಕಂ ತಾಂ ಸರಿ, ವಚನತ್ರಿತಯಕ್ಕಂ ಸರಿ ಎನಿಸಿ, ವಿಕಾರಂ ಇಲ್ಲದೆ, ಅರ್ಥಮಂ ಈಗುಂ.

ಅನ್ವಯಂ.—ದೊರೆವಡೆದವ್ಯಯಲಿಂಗಂ ಸರ್ವವಿಭಕ್ತಿಗಂ ಸರಿ, ತ್ರಿಲಿಂಗಕ್ಕಂ ತಾಂ ಸರಿ, ವಚನತ್ರಿತಯಕ್ಕಂ ಸರಿ ಎನಿಸಿ, ವಿಕಾರಂ ಇಲ್ಲದೆ, ಅರ್ಥಮಂ ಈಗುಂ.

ಟೀಕು.—ದೊರೆವಡೆದ = ಪ್ರಸಿದ್ಧವಡೆದ; ಅವ್ಯಯಲಿಂಗಂ = ಅವ್ಯಯಲಿಂಗಂಗಳ್; ಸರ್ವವಿಭಕ್ತಿಗಂ = ಸಪ್ತವಿಭಕ್ತಿಗೆಯುಂ; ಸರಿ = ಸಮಾನಂ; ತ್ರಿಲಿಂಗಕ್ಕಂ = ಮೂಱು ಲಿಂಗಕ್ಕೆಯುಂ; ತಾಂ = ತಾಂ; ಸರಿ = ಸಮಾನಂ; ವಚನತ್ರಿತಯಕ್ಕಂ = ಏಕವಚನ ದ್ವಿವಚನ ಬಹುವಚನಂಗಳ್ಗೆಯುಂ; ಸರಿಯೆನಿಸಿ = ಸಮಾನವೆನಿಸಿ; ವಿಕಾರಮಿಲ್ಲದೆ = ರೂಪಾಂತರವನೆಯ್ದದೆ; ಅರ್ಥಮಂ = ಅರ್ಥವಂ; ಈಗುಂ = ಕೊಡುವುವು.

ವೃತ್ತಿ.—ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿರ್ದ ತೆಱದಿನರ್ಥಮಂ ಕುಡುಗುಂ.

ಪ್ರಯೋಗಂ.—ಪ್ರಥಮಾವಿಭಕ್ತಿಗೆ—ನಿರ್ನರಂ ಬಂದನೆಂಬಲ್ಲಿ ನಿರ್ನಿಮಿತ್ತಂ ಬಂದನೆಂಬ ಪ್ರಥಮೆಯನಱಿವುದು.

ಸುರ-ತರು-ನಂದಗಳಿರ ರತ್ನ-ಪಿನದ್ಧ-ವಿಮಾನ-ಕುಟ್ಟಿಮಾಂ
ತರ-ಸುರಸಾಲಯಂಗಳಿರ ಚಾರು-ವಿಲೋಲ-ಕಟಾಕ್ಷ-ಪಾತ-ಸುಂ
ದರ-ಪರಿವಾರ-ದೇವಿಯರಿರಾ ಕಡುಕೈದು ಕೃತಾಂತನಿಂತು ನಿ
ರ್ನೆರಮೆಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ
|| ಚಂಪಕಮಾಲಾವೃತ್ತಂ ||

ದ್ವಿತೀಯಾವಿಭಕ್ತಿಗೆ—ಜೆಚ್ಚರಂ ನುಡಿದನೆಂಬಲ್ಲಿ ಜೆಚ್ಚರಮಂ ನುಡಿದನೆಂಬ ದ್ವಿತೀಯೆಯನಱಿವುದು.

ತೃತೀಯಾವಿಭಕ್ತಿಗೆ—ಅವರ್ಕೆ ಅಂತಱಿಂದೆಂಬವೞಿಲ್ಲಿ ಪರಿವಿಡಿಯಿಂ ಅದಱಿಂದೆ ಎಂಬ ತೃತೀಯೆಯನಱಿವುದು. ಅಂತಱಿಂದವರನಾ ಪೊೞಲೊಳ್ ಕಾಣಲ್ಬಂದತ್ತು. ಅವರ್ಕೆಯ್ದೆ ಕವಲ್ಗವಲ್ತು ಪಲವುಂ ಕೊಂಬಾದು ವೊಳ್ಗೊಂಬುಮಂ (?).

ಚತುರ್ಥಿಗೆ—ಪಚ್ಚನೆ ಕೆಚ್ಚನೆ ಬಗೆಯನೆಂಬಲ್ಲ ಚತುರ್ಥಿಯನಱಿವುದು.

ಷಷ್ಠಿಗೆ—ಮತ್ತಿನ ಎಂಬಲ್ಲಿ ಷಷ್ಠಿ, ಮತ್ತಿನ ಮತ್ತಿನ ಬೇರ್ಗಳ ಬಿತ್ತುಗಳಾವೆಡೆಯೊಳೇನೊ ಸುಜನೋತ್ತಂಸಾ.

ತ್ರಿಲಿಂಗಕ್ಕೆ—ಮಿಗೆ ಬೞಿಲ್ದಂ, ಮಿಗೆ ಬೞಿಲ್ದಳ್, ಮಿಗೆ ಬೞಿಲ್ದುದು; ಮತ್ತೆ ನೋಡಿದಂ, ಮತ್ತೆ ನೋಡಿದಳ್, ಮತ್ತೆ ನೋಡಿದುದು.

ವಚನತ್ರಯಕ್ಕೆ—ಭೋಂಕನೊರ್ವಂ ಬಂದಂ, ಮೆಲ್ಲನಿರ್ವರ್ ನುಡಿದರ್, ನೆಟ್ಟನೆಲ್ಲರುಂ ಪೋದರ್.

## ಸೂತ್ರಂ.

Only 3 genders are used in Canarese.

ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ತಾಂ ಸ್ತ್ರೀಲಿಂಗಮುೞಿದುವೆಲ್ಲಂ ನಪ್ಪಾ ।
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸವುೞಿದ ಲಿಂಗಮೊಳವಾಗಿರ್ದುಂ || 91 ||

ಪದಚ್ಛೇದಂ.—ಪುರುಷರೆ ಪುಲ್ಲಿಂಗಂ, ಸ್ತ್ರೀಯರೆ ತಾಂ ಸ್ತ್ರೀಲಿಂಗಂ, ಉೞಿದುವು ಎಲ್ಲಂ ನಪ್ಪು ಆಗಿ ಇರೆ, ಸಲ್ಗುಂ ಕನ್ನಡದೊಳ್; ಪರಿವರ್ತಿಸವು ಉೞಿದ ಲಿಂಗಂ, ಒಳವು ಆಗಿ ಇರ್ದುಂ.

ಅನ್ವಯಂ.—ಉೞಿದ ಲಿಂಗ, ಒಳವಾಗಿ ಇರ್ದುಂ, ಪರಿವರ್ತಿಸವು.

ಟೀಕು.—ಪುರುಷರೆ= ಪುರುಷರಂ ಪೇೞ್ವ ಶಬ್ದಂಗಳೆ; ಪುಲ್ಲಿಂಗಂ= ಪುಲ್ಲಿಂಗವೆನಿಪುವು; ಸ್ತ್ರೀಯರೆ= ಸ್ತ್ರೀಯರಂ ಪೇೞ್ವ ಶಬ್ದಂಗಳೆ; ತಾಂ= ತಾಂ; ಸ್ತ್ರೀಲಿಂಗಂ= ಸ್ತ್ರೀಲಿಂಗವೆನಿಪುವು; ಉೞಿದುವು= ಪುರುಷರಂ ಸ್ತ್ರೀಯರಂ ಪೇೞದೆ ಉೞಿದ ಶಬ್ದಂಗಳ್; ಎಲ್ಲಂ= ಎಲ್ಲವು; ನಪ್ಪಾಗಿರೆ= ನಪುಂಸಕಲಿಂಗವಾಗಿರೆ; ಸಲ್ಗುಂ= ಸಲ್ವುವು; ಕನ್ನಡದೊಳ್= ಕರ್ಣಾಟಕಶಬ್ದದಲ್ಲಿ; ಉೞಿದ ಲಿಂಗಂ= ಮಿಕ್ಕ ಲಿಂಗಂಗಳ್; ಒಳವಾಗಿರ್ದುಂ= ಉಂಟಾಗಿರ್ದುಂ; ಪರಿವರ್ತಿಸವು= ಪ್ರವರ್ತಿಸವು.

ವೃತ್ತಿ.— ಪುರುಷರಂ ಪೇೞ್ವ ಶಬ್ದಂಗಳ್ಪುಲ್ಲಿಂಗಂಗಳ್; ಸ್ತ್ರೀಯರಂ ಪೇೞ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್; ಉೞಿದುವೆಲ್ಲಂ ನಪುಂಸಕಲಿಂಗಂಗಳ್.

ಪ್ರಯೋಗಂ.—ಪುಲ್ಲಿಂಗಕ್ಕೆ—ಶಿವ, ಶಂಕರ, ಭೀಮ, ರಾಮ, ಅರಸ ಇವು ಮೊದಲಾದುವು.

ಸ್ತ್ರೀಲಿಂಗಕ್ಕೆ—ಗೌರಿ, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಶಚಿ, ರೋಹಿಣಿ, ಕಾಮಿನಿ, ಭಾಮಿನಿ, ರಮಣಿ ಇವು ಮೊದಲಾದುವು.

ನಪುಂಸಕಲಿಂಗಕ್ಕೆ— ಮರ, ಗಿಡು, ಬಳ್ಳಿ, ಪುಲ್, ಪೊದಱ್, ಪುಲಿ, ಕರಡಿ, ಗಟ್ಟ, ಬೆಟ್ಟ, ಜಡೆ, ಕೊಡೆ, ಕನ್ನಡಿ, ಕಳಸ. ಇಂತಪ್ಪ ಚೇತನಾಚೇತನ ವಸ್ತುಗಳೆಲ್ಲಂ ನಪುಂಸಕಮೆ.

ಇಂತು ಲಿಂಗತ್ರಯಂ ಕನ್ನಡದೊಳ್ ಪಿರಿದುಂ ಪ್ರಸಿದ್ಧಂ, ಮಿಕ್ಕ ಲಿಂಗಂಗಳೆಲ್ಲ ಕ್ವಚಿತ್ಪ್ರಯೋಗಂಗಳೆ.

## ಸೂತ್ರಂ.

ಜನ and ಮಹಾಜನ are Neuters; ದುರ್ಜನ, ಸಜ್ಜನ and ಸುಜನ Masculines.

ಜನಶಬ್ದಮದು ನಪುಂಸಕ
ಮೆನಿಕುಂ ದುಸ್ಸತ್ಸುಕಾರಮವು ಪೆಱಗಿರೆ ನೆ |
ಟ್ಟನೆ ಪುಲ್ಲಿಂಗಂ ಮತ್ತಾ
ಜನಂ ಮಹಾಚ್ಛಬ್ದಮಿರೆ ನಪುಂಸಕಮಕ್ಕುಂ || 92 ||

ಪದಚ್ಛೇದಂ.— ಜನಶಬ್ದಂ ಅದು ನಪುಂಸಕಂ ಎನಿಕುಂ; ದುಸ್ಸತ್ಸುಕಾರಂ ಅವು ಪೆಱಗೆ ಇರೆ, ನೆಟ್ಟನೆ ಪುಲ್ಲಿಂಗಂ; ಮತ್ತೆ ಆ ಜನಂ, ಮಹಚ್ಛಬ್ದಂ ಇರೆ, ನಪುಂಸಕಂ ಅಕ್ಕುಂ.

ಯಥಾನ್ವಯಂ. ಟೀಕು.—ಜನಶಬ್ದಂ= ಜನಮೆಂಬ ಶಬ್ದಂ; ಅದು = ಅದು; ನಪುಂ

ಸಕಂ = ನಪುಂಸಕಲಿಂಗಂ; ಎನಿಕುಂ = ಎನಿಸುವುದು; ದುಸ್ ಸತ್ ಸುಕಾರಂ = ದುಃ ಎಂಬುದುಂ, ಸತ್ ಎಂಬುದುಂ, ಸು ಎಂಬುದುಂ; ಅವು = ಅವು; ಪೆಱಗೆ = ಪಿಂದೆ; ಇರೆ = ಇರೆ; ನೆಟ್ಟನೆ = ವ್ಯಕ್ತವಾಗಿ; ಪುಲ್ಲಿಂಗಂ = ಪುಲ್ಲಿಂಗಂ ಎನಿಸುವುದು; ಮತ್ತೆ = ಅದಲ್ಲದೆ; ಆ ಜನಂ = ಆ ಜನಶಬ್ದಂ; ಮಹಚ್ಛಬ್ದಂ = ಮಹತ್ ಎಂಬ ಶಬ್ದಂ; ಇರೆ = ಪಿಂದಿರೆ; ನಪುಂಸಕಂ = ನಪುಂಸಕಲಿಂಗಂ; ಅಕ್ಕುಂ = ಅಪ್ಪದು.

ವೃತ್ತಿ.—ಜನಶಬ್ದಂ ನಿಜದಿಂ ನಪುಂಸಕಂ; ದುಸ್ ಎಂಬುದುಂ ಸತ್ ಎಂಬುದುಂ ಸು ಎಂಬುದುಂ ಪೆಱಗಿರೆ, ಪುಲ್ಲಿಂಗಮಕ್ಕುಂ; ಮಹಚ್ಛಬ್ದಂ ಪೆಱಗಿರ್ದೊಡಂ, ಮಹಾಜನಮೆಂದು, ನಪುಂಸಕಮಕ್ಕುಂ.

ಪ್ರಯೋಗಂ.—ಪುಲ್ಲಿಂಗಕ್ಕೆ—ದುರ್ಜನಂ, ಸಜ್ಜನಂ, ಸುಜನಂ.
ನಪುಂಸಕಕ್ಕೆ—ಜನಂ, ಮಹಾಜನಂ.

## ಸೂತ್ರಂ.

The 7 Cases. Declension of the Singular of a Neuter ending in ಅ.

ಸಂದಿಸಿ ಮ್ಮಿಂಕೆಯದ್ಧದೊಳೆ,
ಯೆಂದಿರ್ಪುವು ಸಪ್ತವಿಧವಿಭಕ್ತಿಗಳವು ಮಾ ।
ರ್ಗಂದಪ್ಪದರ್ಥವಶದಿಂ
ಪಿಂದೆಣಿಸಿದ ವಿವಿಧವಿಧದ ಲಿಂಗಕ್ಕೆಲ್ಲಂ ॥ 93 ॥

ಪದಚ್ಛೇದಂ.—ಸಂದಿಸಿ ॥ ಮ್ ॥ ಅಂ ॥ ಇಂ ॥ ಕೆ ॥ ಅದ್ ॥ ಅದ್ ॥ ಒಳೆ ॥ ಎಂದು, ಇರ್ಪುವು ಸಪ್ತವಿಧವಿಭಕ್ತಿಗಳ್; ಅವು, ಮಾರ್ಗಂದಪ್ಪದೆ, ಅರ್ಥವಶದಿಂ ಪಿಂದೆ ಎಣಿಸಿದ ವಿವಿಧ ವಿಧದ ಲಿಂಗಕ್ಕೆ ಎಲ್ಲಂ.

ಅನ್ವಯಂ.— ಪಿಂದೆ ಎಣಿಸಿದ ವಿವಿಧವಿಧದ ಲಿಂಗಕ್ಕೆ ಸಪ್ತವಿಧವಿಭಕ್ತಿಗಳ್; ಅವು ಎಲ್ಲಂ, ಮಾರ್ಗಂದಪ್ಪದೆ, ಅರ್ಥವಶದಿಂ ಸಂದಿಸಿ, ಮಮಿಂ ಕೆ ಅದದೊಳೆ ಎಂದು, ಇರ್ಪುವು.

ಟೀಕು. — ಪಿಂದೆ = ಹಿಂದೆ; ಎಣಿಸಿದ ವಿವಿಧವಿಧದ = ಹೇಳಿದ ನಾನಾಪ್ರಕಾರದ; ಲಿಂಗಕ್ಕೆ = ಲಿಂಗಂಗಳ್ಗೆ; ಸಪ್ತವಿಧ = ಏೞು ತೆಱನಾದ; ವಿಭಕ್ತಿಗಳ್ = ಪ್ರತ್ಯಯಂಗಳ್; ಅವು = ಅವು; ಎಲ್ಲಂ = ಎಲ್ಲವು; ಮಾರ್ಗಂದಪ್ಪದೆ = ಕವಿಮಾರ್ಗಂ ತಪ್ಪದೆ; ಅರ್ಥವಶದಿಂ = ಅರ್ಥವಶದಿಂದೆ; ಸಂದಿಸಿ = ಪೊರ್ದುಗೆಯಾಗಿ; ಮಮಿಂಕೆಯದದೊಳೆ = ಮ್, ಅಮ್, ಇಮ್, ಕೆ, ಅತ್, ಅತ್, ಒಳ್ ಎಂಬಿವೆ; ಎಂದು = ಹೀಗೆಂದು; ಇರ್ಪುವು = ಇರ್ಪುವು.

ವೃತ್ತಿ.—ಪಿಂತೆ ಪೇೞ್ದ ನಾನಾ ತೆಱದ ಲಿಂಗಂಗಳ್ಗೆ ಪರಮಾಗಿ ನಾಮ ವಿಭಕ್ತಿಗಳ್, ಮ್ (S. 105), ಅವ್ (Ss. 104; 106), ಇವ್ (S. 107), ಕೆ (Ss. 113; 114), ಅತ್ (Ss. 106; 116), ಅತ್ (Ss. 106; 117), ಒಳ್ (S. 119) ಎಂದು, ಪ್ರಥಮೆಗಂ ದ್ವಿತೀಯೆಗಂ ತೃತೀಯೆಗಂ ಚತುರ್ಥಿಗಂ ಪಂಚಮಿಗಂ ಷಷ್ಠಿಗಂ ಸಪ್ತಮಿಗಂ ಏೞಾಗಿ, ಕಾರಕವಶದಿಂ ಪತ್ತುಗುಂ. ಆ ಕಾರಕಮೆಂಬುದು (*i. e.* the relation which, in a sentence, a noun bears to the verb) ಕ್ರಿಯಾನಿಮಿತ್ತಂ; ಅದು ಕರ್ತೃವೆಂದುಂ (agent), ಕರ್ಮಮೆಂದುಂ (object), ಕರಣಮೆಂದುಂ (instrument), ಸಂಪ್ರದಾನಮೆಂದುಂ (bestowing), ಅಪಾದಾನಮೆಂದುಂ (taking away), ಅಧಿಕರಣಮೆಂದುಂ (relation to site), ಷಡ್ವಿಧಮಾಗಿರ್ಪುದು; ಷಷ್ಠಿಯೆಂದು, ಸಂಬಂಧಾರ್ಥಂ (connexion).

ಪ್ರಯೋಗಂ.—ಮರಂ, ಮರನಂ, ಮರದಿಂ, ಮರಕ್ಕೆ, ಮರದತ್ತಣಿಂ, ಮರದ, ಮರದೊಳ್, (ಮರನೆ, voc.) ಇಂತರ್ಥವಶದಿಂ ವಿಭಕ್ತಿ ಪರಿಣಾಮಿಪುವು. ವಿಭಕ್ತಿ ವಿಕಾರಮನೆಯ್ದುವುದಱಿಂ ಪದಂ ನಾನಾರೂಪಮಪ್ಪುದು.

ಮರನಿರ್ದುದು. ಮರನಂ ಕಡಿ!<br>
ಮರದಿಂ ಮಾಡಾನೆಯಂ! ಮರಕ್ಕೆಱೆ ನೀರಂ! ।<br>
ಮರದತ್ತಣಿನೆಲೆಯುದಿರ್ದುದು.<br>
ಮರದದು ಪಣ್. ಮರದೊಳಿರು! ತಳಿರ್ತಿರು, ಮರನೇ! ‖ ಕಂದಂ ‖

## ಸೂತ್ರಂ.

There are 2 Numbers in Canarese: Singular and Plural. The thought of a Dual is allowed.

ಏಕದ್ವಿತ್ವಬಹುತ್ವಮ<br>
ನೇಕದ್ವಿಬಹುತ್ವವಸ್ತುಗಳೊಳಾಚರಿಪರ್ ।<br>
ಸ್ವೀಕಾರಂ ಕನ್ನಡದೊಳ<br>
ಗೇಕಬಹುತ್ವಂ ದ್ವಿವಚನಮುಚಿತದೆ ಬರ್ಕುಂ ‖ 94 ‖

ಪದಚ್ಛೇದಂ.— ಏಕದ್ವಿತ್ವಬಹುತ್ವಮುಂ ಏಕದ್ವಿಬಹುತ್ವವಸ್ತುಗಳೊಳ್ ಆಚರಿಪರ್; ಸ್ವೀಕಾರಂ ಕನ್ನಡದೊಳಗೆ ಏಕಬಹುತ್ವಂ, ದ್ವಿವಚನಂ ಉಚಿತದೆ ಬರ್ಕುಂ.

ಅನ್ವಯಂ.—ಏಕದ್ವಿಬಹುತ್ವವಸ್ತುಗಳೊಳ್ ಏಕದ್ವಿತ್ವಬಹುತ್ವಮಂ ಆಚರಿಪರ್; ಕನ್ನಡದೊಳಗೆ ಏಕಬಹುತ್ವಂ ಸ್ವೀಕಾರಂ, ದ್ವಿವಚನಂ ಉಚಿತದೆ ಬರ್ಕುಂ.

ಟೀಕು.—ಏಕದ್ವಿಬಹುತ್ವವಸ್ತುಗಳೊಳ್ = ಏಕವಸ್ತು ದ್ವಿವಸ್ತು ಬಹುವಸ್ತುಗಳಲ್ಲಿ; ಏಕದ್ವಿತ್ವಬಹುತ್ವಮಂ = ಏಕವಚನ ದ್ವಿವಚನ ಬಹುವಚನವುಂ; ಆಚರಿಪರ್ = ಪೇೞ್ವರ್; ಕನ್ನಡದಲ್ಲಿ = ಕರ್ಣಾಟಭಾಷೆಯಲ್ಲಿ; ಏಕಬಹುತ್ವಂ = ಏಕವಚನ ಬಹುವಚನಂಗಳ್; ಸ್ವೀಕಾರಂ = ಅಂಗೀಕಾರಂ; ದ್ವಿವಚನಂ = ದ್ವಿವಚನಂ; ಉಚಿತದೆ = ಉಚಿತದಿಂದೆ; ಬರ್ಕುಂ = ಬರ್ಪುದು.

ವೃತ್ತಿ.—ಒಂದೆರಡು ಮೂಱಿಂದು, ಪದಾರ್ಥಮನೆಣಿಸುವೆಡೆಯೊಳ್ ಏಕವಚನ ದ್ವಿವಚನ ಬಹುವಚನಂಗಳಂ ಸ್ವೀಕರಿಸುವರ್; ಏಕವಚನ ಬಹುವಚನಂಗಳ್ಕನ್ನಡದೊಳತಿವ್ಯಕ್ತಂಗಳ್; ದ್ವಿವಚನಮನೌಚಿತ್ಯದಿನಱಿವುದು.

ಪ್ರಯೋಗಂ.—ಏಕದ್ವಿಬಹುತ್ವಂಗಳ್ಗೆ—ಮೇರುವಿದು; ಕಣ್ಗಳಿವು; ಕುರುಳ್ಗಳಿವು; ಕವಿಯಿವಂ; ಕವಿಗಳಿವರ್.

ಔಚಿತ್ಯದ ದ್ವಿವಚನಕ್ಕೆ—ಭೀಮಾರ್ಜುನರ್, ರಾಮಲಕ್ಷ್ಮಣರ್, ನಕುಲಸಹದೇವರ್ ಎಂಬಂತಱಿವುದು.

## ಸೂತ್ರಂ.

Formation of the Nominative Dual and Plural with ಗಳ್ in (here Neuter) bases, excepting (Neuter) Pronouns and Adjectives in which ಅವು is substituted for ಗಳ್. (For Masculines and Feminines with ಗಳ್ see, for instance, §§. 101; 102; 103.)

ಸಮನಿಸುಗುಮಾ ವಿಭಕ್ತಿಗ
ಳ ಮೊದಲೊಳಾದಂ ಗಳಾಗಮಂ ದಿತ್ವಬಹು |
ತ್ವಮದಾಗೆ ಗಳಾಗಮಕವು
ಸಮನಿಸುಗುಂ ಸರ್ವನಾಮಗುಣವಚನದೊಳಂ || 95 ||

ಪದಚ್ಛೇದಂ.—ಸಮನಿಸುಗುಂ ಆ ವಿಭಕ್ತಿಗಳ ಮೊದಲೊಳ್ ಅದಂ ಗಳಾಗಮಂ, ದ್ವಿತ್ವಬಹುತ್ವಂ ಅದು ಆಗೆ; ಗಳಾಗಮಕೆ ಅವು ಸಮನಿಸುಗುಂ ಸರ್ವನಾಮಗುಣವಚನದೊಳಂ.

ವೃತ್ತಿ.—ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ ವಳ್ಳಂ ಆಯ್ತ ಪ್ರತ್ಯಯಂಗಳಕ್ಕುಂ; ಇದನಿವನಿಕ್ಕುವನೆಂಬೆಡೆಯೊಳ್ ವಡಿಗಪ್ರತ್ಯಯಮಕ್ಕುಂ.

ಪ್ರಯೋಗಂ.—ವಳಕ್ಕೆ—ಅಡಪವಳಂ; ಮಾಸವಳಂ; ಮಡಿವಳಂ; ಪಡೆವಳಂ; ಸೆಜ್ಜೆವಳಂ; ಅಡುವಳಂ.

ವಳ್ಳಕ್ಕೆ—ಅಡಪವಳ್ಳಂ; ಮಾಸವಳ್ಳಂ; ಮಡಿವಳ್ಳಂ; ಪಡೆವಳ್ಳಂ; ಸೆಜ್ಜೆವಳ್ಳಂ; ಅಡುವಳ್ಳಂ.

ಆಯ್ತಕ್ಕೆ—ಝಳಂಬಾಯ್ತರ್; ಸೂಱಾಯ್ತರ್; ಕಲ್ಲಾಯ್ತರ್; ಕಡಂಗಾಯ್ತರ್; ಅಚ್ಚುಳಾಯ್ತರ್.

ಮಡಿವಳ್ಳಮಡಪವಳ್ಳಂ
ಪಡೆವಳ್ಳಂ ಸೆಜ್ಜೆವಳ್ಳಸಜ್ಜಂಬೆಜ್ಜಂ |
ಅಡುವಳನೆಂದಿಂತಿವರಂ
ಕಡಂಗಿ ಬಿಡೆ ಜಡಿಯದಿರ್ಕೆ ನಯವಱಿವರಸಂ || ಕಂದಂ ||
ಆಯ್ತಬ್ಧಿಯೆ ಘೂರ್ಣಿಸುವಂ
ತಾಯ್ತರಮನೆಯೊಳಗೆ ಪುಗುವ ಪೊಱಮಡುವ ಝಳಂ |
ಬಾಯ್ತರ ಸೂಱಾಯ್ತರ ಕ
ಲ್ಲಾಯ್ತರ ಕಡಂಗಾಯ್ತರಚ್ಚುಳಾಯ್ತರ ರಭಸಂ || ಕಂದಂ ||

ವಡಿಗಕ್ಕೆ—ಕುಂಚವಡಿಗಂ; ಪುಲ್ಲವಡಿಗಂ; (ಕಳ್ವಡಿಗಂ).

## ಸೂತ್ರಂ.

ಇವಱೊಳ್ ವ್ಯವಹರಿಪಂ ನೂ
ಡುವನಿವನೆಂಬಲ್ಲಿ ಕಾಱ ಗಾಱಂಗಳ್ಸಂ |
ಭವಿಕುಂ ಗಾಱಾದಿಗೆ ಲೋ
ಪವಾದಿಯೊಳ್ ಕಂಮ್ಮಕುಂಬಜುಗವೊದವಲೊಡಂ || 199 ||

By the Suffix ಕಾಱ Nouns are formed denoting people who practice anything or observe a certain conduct; by ಗಾಱ Nouns denoting people who fabricate. After ಕಂಮ and ಕುಂಬ the ಗಾ of ಗಾಱ disappears.

ಪದಚ್ಛೇದಂ.— ಇವಱೊಳ್ ವ್ಯವಹರಿಪಂ ಮಾಡುವಂ ಇವಂ ಎಂಬಲ್ಲಿ ಕಾಱ ಗಾಱಂಗಳ್ ಸಂಭವಿಕುಂ; ಗಾಱಾದಿಗೆ ಲೋಪಂ, ಆದಿಯೊಳ್ ಕಂಮುಕುಂಬಜುಗಂ ಒದವಲೊಡಂ.

ಅನ್ವಯಂ.—ಇವಱೊಳ್ ವ್ಯವಹರಿಪಂ ಇವಂ ಮಾಡುವಂ ಎಂಬಲ್ಲಿ ಕಾಱ ಗಾಱಂಗಳ್ ಸಂಭವಿಕುಂ; ಆದಿಯೊಳ್ ಕಂಮುಕುಂಬಜುಗಂ ಒದವಲೊಡಂ ಗಾಱಾದಿಗೆ ಲೋಪಂ.

ಟೀಕು.—ಇವಱೊಳ್ = ಇವಱಲ್ಲಿ; ವ್ಯವಹರಿಪಂ = ವ್ಯವಹರಿಸುವಂ; ಇವಂ = ಈ-ಕೆಲಸಂಗಳಂ; ಮಾಡುವಂ = ಮಾಟ್ಪಿಂ; ಎಂಬಲ್ಲಿ = ಎಂಬ ತಾವಿನಲ್ಲಿ; ಕಾಱ ಗಾಱಂಗಳ್ = ಕಾಱಪ್ರತ್ಯಯ ಗಾಱಪ್ರತ್ಯಯಂಗಳ್; ಸಂಭವಿಕುಂ = ಹುಟ್ಟುವುವು; ಆದಿಯೊಳ್ = ಮೊದಲಲ್ಲಿ; ಕಂಮುಕುಂಬಜುಗಂ = ಕಂಮುಕುಂಬವೆಂಬೆರಡು ಶಬ್ದಂಗಳ್: ಒದವಲೊಡಂ = ಪ್ರಾಪ್ತಿಸಲೊಡನೆ; ಗಾಱಾದಿಗೆ = ಗಾಱ ಎಂಬ ಪ್ರತ್ಯಯದ ಮೊದಲಕ್ಷರಕ್ಕೆ; ಲೋಪಂ = ಅದರ್ಶನಂ ಬರ್ಪುದು.

ವೃತ್ತಿ.—ಇವಱೊಳಿವಂ ವ್ಯವಹರಿಪನೆಂಬಲ್ಲಿ ಕಾಱಪ್ರತ್ಯಯಮಕ್ಕುಂ; ಇದನೀತಂ ಮಾಡುವನೆಂಬಲ್ಲಿ ಗಾಱಪ್ರತ್ಯಯಮಕ್ಕುಂ; ಕಂಮುಕುಂಬಶಬ್ದಂಗಳ್ಪೆಱಗಿರೆ, ಗಾಱಪ್ರತ್ಯಯದ ಗಕಾರಕ್ಕೆ ಲೋಪಮಕ್ಕುಂ.

ಪ್ರಯೋಗಂ.—ಕಾಱಕ್ಕೆ—ನಡೆವಳಿಕಾಱಂ, ನುಡಿವಳಿಕಾಱಂ; ಇಚ್ಚೆಕಾಱಂ; ಕೈದುಕಾಱಂ; ಬಂದಿಕಾಱಂ; ಗೞಿಕಾಱಂ; ಬೇಹುಕಾಱಂ; ನಗೆವಡಿಕಾಱಂ; ನೀಱಂಬಗೆಕಾಱಂ; ಪಾೞಿಕಾಱಂ; ಒಳ್ನುಡಿಕಾಱಂ; ಪಗೆಕಾಱಂ; ಬಗೆಕಾಱಂ.

ಗಾಱಕ್ಕೆ—ಮಾಲೆಗಾಱಂ; ಕಂಚಗಾಱಂ; ಬಳೆಗಾಱಂ; ಗೆಜ್ಜೆಗಾಱಂ; ಮಣಿಗಾಱಂ; ಒೞಿಗಾಱಂ.

ಅಣಿಯುರಮೆಸೆದೊಪ್ಪಿರ್ಪುವು
ಮಣಿಗಾಱರ ಕಂಚಗಾಱರೊೞಿಗಾಱರ ತಿಂ |
ತಿಣಿಯೆನಿಪ ಮಾಲೆಗಾಱರ
ಗಣನಾತೀತಂಗಳಾಪಣಂಗಳೆ ಪೊೞಿಲೊಳ್ || ಕಂದಂ ||

ಗಕಾರಲೋಪಕ್ಕೆ—ಕಂಮಱಂ; ಕುಂಬಱಂ.

## ಸೂತ್ರಂ.

When a word with final ಉ precedes ಗಾಱಿ, the ಉ may receive the Bindu or be elided.—The Suffix ಇಚ is used to denote persons born of or in; the penultimate may be shortened.

ಪರದೊಳ್ಗಾಱಿಪ್ರತ್ಯಯ
ಮಿರೆ ಸಲ್ಗುಂ ಬಿಂದು ಮೇಣಕಾರಮುದಂತ |
ಕ್ಕೊರೆವರಿಚಪ್ರತ್ಯಯಮಂ
ಪಿರಿದುಂ ತದ್ಭವನೊಳುಪಧೆಗಕ್ಕುಂ ಹ್ರಸ್ವಂ || 200 ||

ಪದಚ್ಛೇದಂ.—ಪರದೊಳ್ ಗಾಱಿಪ್ರತ್ಯಯಂ ಇರೆ, ಸಲ್ಗುಂ ಬಿಂದು, ಮೇಣ್ ಅಕಾರಂ ಉದಂತಕ್ಕೆ. ಒರೆವರ್ ಇಚಪ್ರತ್ಯಯಮಂ ಪಿರಿದುಂ ತದ್ಭವನೊಳ್ ಉಪಧೆಗೆ ಅಕ್ಕುಂ ಹ್ರಸ್ವಂ.

ಅನ್ವಯಂ.—ಪರದೊಳ್ ಗಾಱಿಪ್ರತ್ಯಯಂ ಇರೆ, ಉದಂತಕ್ಕೆ ಬಿಂದು ಸಲ್ಗುಂ, ಮೇಣ್ ಅಕಾರಂ. ಪಿರಿದುಂ ತದ್ಭವನೊಳ್ ಇಚಪ್ರತ್ಯಯಮಂ ಒರೆವರ್; ಉಪಧೆಗೆ ಹ್ರಸ್ವಂ ಅಕ್ಕುಂ.

ಟೀಕು.—ಪರದೊಳ್ = ಮುಂದೆ; ಗಾಱಿಪ್ರತ್ಯಯಂ = ಗಾಱಿಪ್ರತ್ಯಯಂ; ಇರೆ = ಇರೆ; ಉದಂತಕ್ಕೆ = ಉಕಾರಾಂತಕ್ಕೆ; ಬಿಂದು = ಸೊನ್ನೆ; ಸಲ್ಗುಂ = ಸಲ್ವುದು; ಮೇಣ್ = ಅದಲ್ಲದೆ; ಅಕಾರಂ = ಅತ್ವಂ ಸಲ್ವುದು; ತದ್ಭವನೊಳ್ = ಅದಱೊಳ್ಪುಟ್ಟದವನಲ್ಲಿ; ಇಚಪ್ರತ್ಯಯಮಂ = ಇಚ ಎಂಬ ಪ್ರತ್ಯಯಮಂ; ಒರೆವರ್ = ಪೇೞ್ವರ್; ಪಿರಿದುಂ = ವಿಶೇಷವಾಗಿ; ಉಪಧೆಗೆ = ಅಂತ್ಯದ ಮೊದಲ್ಗೆ; ಹ್ರಸ್ವಂ = ಹ್ರಸ್ವಂ; ಅಕ್ಕುಂ = ಅಪ್ಪುದು.

ವೃತ್ತಿ.—ಗಾಱಿಪ್ರತ್ಯಯಂ ಪರದೊಳಿರೆ, ಪೂರ್ವದುದಂತಕ್ಕೆ ಬಿಂದುವುಂ ಅಕಾರಮುಮಕ್ಕುಂ. ಅದಱೊಳವಂ ಪುಟ್ಟಿದನೆಂಬಲ್ಲಿ ಇಚಪ್ರತ್ಯಯಮಕ್ಕುಂ; ಕಿಱಿದೆಡೆಯೊಳುಪಧೆಗೆ ಹ್ರಸ್ವಮಕ್ಕುಂ.

ಪ್ರಯೋಗಂ.—ಬಿಂದುಗೆ—ಪಾಡುಂಗಾಱಿಂ; ಆಲಸುಂಗಾಱಿಂ; ಓದುಂಗಾಱಿಂ; ಜೂದುಂಗಾಱಿಂ.

ಅತ್ವಕ್ಕೆ—ಕಂಚಗಾಱಿಂ.

ಇಚಪ್ರತ್ಯಯಕ್ಕೆ—ಆಲರಿಚಂ; ಪೊಱಲಿಚಂ.

ಕೆಲವಱೊಳುಪಧೆಗೆ ಹ್ರಸ್ವಂ—(ಕಾಲೂರು + ಇಚಂ) ಕಾಲುರಿಚಂ.

## ಸೂತ್ರಂ.

By the Suffixes ಕುಟಿಗ and ಗ people are introduced who are occupied in; by ಉಳಿಗ beings who live on or by.

ಘನಮಾಗಿ ವರ್ತಿಸುವನೀ
ತನಿವಱೊಳೆಂಬಲ್ಲಿ ಕುಟಿಗ-ಗಪ್ರತ್ಯಯಮುಂ ।
ಟೆನಿಸುಗುಮುಳಿಗಪ್ರತ್ಯಯ
ಮನುಕೂಲಂ ಬಾೞ್ವಿನಿದಱೊಳಿವನೆಂಬೆಡೆಯೊಳ್
|| 201 ||

ಪದಚ್ಛೇದಂ.—ಘನಂ ಆಗಿ ವರ್ತಿಸುವಂ ಈತಂ ಇವಱೊಳ್ ಎಂಬಲ್ಲಿ ಕುಟಿಗ-ಗಪ್ರತ್ಯಯಂ ಉಂಟು ಎನಿಸುಗುಂ; ಉಳಿಗಪ್ರತ್ಯಯಂ ಅನುಕೂಲಂ ಬಾೞ್ವಿಂ ಇದಱೊಳ್ ಇವಂ ಎಂಬ ಎಡೆಯೊಳ್.

ಅನ್ವಯಂ.—ಈತಂ ಇವಱೊಳ್ ಘನಂ ಆಗಿ ವರ್ತಿಸುವಂ ಎಂಬಲ್ಲಿ ಕುಟಿಗಗಪ್ರತ್ಯಯಂ ಉಂಟು ಎನಿಸುಗುಂ; ಇವಂ ಇದಱೊಳ್ ಅನುಕೂಲಂ ಬಾೞ್ವಿಂ ಎಂಬೆಡೆಯೊಳ್ ಉಳಿಗ ಪ್ರತ್ಯಯಂ.

ಟೀಕು.—ಈತಂ = ಇವಂ; ಇವಱೊಳ್ = ಇವಱಲ್ಲಿ; ಘನಮಾಗಿ = ವೆಗ್ಗಳವಾಗಿ; ವರ್ತಿಸುವಂ = ಪ್ರವರ್ತಿಸುವಂ; ಎಂಬಲ್ಲಿ = ಎಂಬರ್ಥದಲ್ಲಿ; ಕುಟಿಗಗಪ್ರತ್ಯಯಂ = ಕುಟಿಗ ಪ್ರತ್ಯಯ ಗಪ್ರತ್ಯಯಂಗಳ್; ಉಂಟೆನಿಸುಗುಂ = ಉಂಟಾಗುವುವು; ಇವಂ = ಈತಂ, ಇದಱೊಳ್ = ಇದಱಲ್ಲಿ; ಅನುಕೂಲಂ = ಅನುಕೂಲವಾಗಿ; ಬಾೞ್ವಿಂ = ಬರ್ದುಂಕುವಂ; ಎಂಬೆಡೆಯೊಳ್ = ಎಂಬ ತಾವಿನಲ್ಲಿ; ಉಳಿಗಪ್ರತ್ಯಯಂ = ಉಳಿಗ ಎಂಬ ಪ್ರತ್ಯಯಂ ಉಂಟೆನಿಸುವುದು.

ವೃತ್ತಿ.—ಇವನಿದಱೊಳ್ ಪಿರಿದು ವರ್ತಿಸುವನೆಂಬಲ್ಲಿ ಕುಟಿಗಗಪ್ರತ್ಯಯಮಕ್ಕುಂ; ಇದಱೊಳಿವಂ ಬಾೞ್ವನೆಂಬಲ್ಲಿ ಉಳಿಗಪ್ರತ್ಯಯಮಕ್ಕುಂ.

ಪ್ರಯೋಗಂ.—ಕುಟಿಗಪ್ರತ್ಯಯಕ್ಕೆ—ಕಲ್ಕುಟಿಗಂ; ನೀರ್ಕುಟಿಗಂ; ಮರ ಕುಟಿಗಂ; ಕಱುಕುಟಿಗ; ಕೞ್ತಿಕುಟಿಗಂ.

ಗಪ್ರತ್ಯಯಕ್ಕೆ—ಮಾತುಗಂ; ಬೂತುಗಂ ಕಂತೆಗಂ (Mdb. Ms. ಕತೆಗಂ); ಬೊಂತೆಗಂ; ಭಿದಿಗಂ; ಸಟೆಗಂ; ನವಸಿಗಂ; ಎಡೆಗಂ.

ಉಳಿಗಪ್ರತ್ಯಯಕ್ಕೆ—ದೇವುಳಿಗಂ; ಮಂಣುಳಿಗಂ, ಮಣ್ಣೊಳ್ಜೀವಿಸುವ ಪಾವುಮಣ್ಣುಳಿಗಂ.

## ಸೂತ್ರಂ.

By the Suffix ಗುಳಿ with the Bindu before it people are marked who have an inclination for; by ಉಣಿ people who feed on.

ಒದವುವುದು ಗುಳಿಪ್ರತ್ಯಯ
ಮದು ಪೂರ್ವದ ಬಿಂದುವೆರಸುಶೀಲಗ್ರಹಣಾ |
ರ್ಥದೊಳೆತ್ತಮುಣಿಪ್ರತ್ಯಯ
ಮೊದವುಗುಮನ್ವಿತದಿನುಣ್ಬನಿದನೆಂಬೆಡೆಯೊಳ್ ||202||

ಪದಚ್ಛೇದಂ.—ಒದವುವುದು ಗುಳಿಪ್ರತ್ಯಯಂ ಅದು ಪೂರ್ವದ ಬಿಂದುವೆರಸು ಶೀಲಗ್ರಹಣಾರ್ಥದೊಳ್; ಎತ್ತಂ ಉಣಿಪ್ರತ್ಯಯಂ ಒದವುಗುಂ ಅನ್ವಿತದಿಂ ಉಣ್ಬಂ ಇದಂ ಎಂಬ ಎಡೆಯೊಳ್.

ಅನ್ವಯಂ.—ಶೀಲಗ್ರಹಣಾರ್ಥದೊಳ್ ಪೂರ್ವದ ಬಿಂದುವೆರಸುಗುಳಿಪ್ರತ್ಯಯಂ ಅದು ಒದವುವುದು; ಇದಂ ಅನ್ವಿತದಿಂ ಉಣ್ಬಂ ಎಂಬೆಡೆಯೊಳ್ ಎತ್ತಂ ಉಣಿಪ್ರತ್ಯಯಂ ಒದವುಗುಂ.

ಟೀಕು.—ಶೀಲಗ್ರಹಣಾರ್ಥದೊಳ್ = ಆವುದಾನೊಂದು ಶೀಲಗ್ರಹಣಾರ್ಥದಲ್ಲಿ; ಪೂರ್ವದ = ಆದಿಯ; ಬಿಂದುವೆರಸು = ಬಿಂದುಗೂಡಿದ; ಗುಳಿಪ್ರತ್ಯಯಂ = ಗುಳಿ ಎಂಬ ಪ್ರತ್ಯಯಂ; ಒದವುವುದು = ಪ್ರಾಪ್ತಿಸುವುದು; ಇದಂ = ಇದಂ; ಅನ್ವಿತದಿಂ = ಹಿತದಿಂದ; ಉಣ್ಬಂ = ಊಟವಂ ಮಾಡುವಂ; ಎಂಬೆಡೆಯೊಳ್ = ಎಂಬ ತಾವಿನಲ್ಲಿ; ಎತ್ತಂ = ಆವ ದೆಸೆಯಲ್ಲಿಯುಂ; ಉಣಿಪ್ರತ್ಯಯಂ = ಉಣಿ ಎಂಬ ಪ್ರತ್ಯಯಂ; ಒದವುಗುಂ = ಬರ್ಪುದು.

ವೃತ್ತಿ.—ಶೀಲಗ್ರಹಣಾರ್ಥಂಗಳೊಳ್ ಬಿಂದುವೆರಸುಗುಳಿಪ್ರತ್ಯಯಮಕ್ಕುಂ; ಈ ವಸ್ತುವನೀತನುಣ್ಬನೆಂಬಲ್ಲಿ ಉಣಿಪ್ರತ್ಯಯಮಕ್ಕುಂ.

ಪ್ರಯೋಗಂ.—ಗುಳಿಪ್ರತ್ಯಯಕ್ಕೆ—ಆಟಂಗುಳಿ; ಸಾಲಂಗುಳಿ; ಲಂಚಂಗುಳಿ; ಕುತ್ತಂಗುಳಿ (Mdb. ಕುತ್ತುಂಗುಳಿ).

ಉಣಿಪ್ರತ್ಯಯಕ್ಕೆ—ಅಮರ್ದುಣಿ; ಕಳ್ಳುಣಿ; ತುಡುಗುಣಿ.

## ಸೂತ್ರಂ.

In many of the mentioned instances the Suffixes ಉಕ, ಕುಳಿ, ಆಳಿ, ಇಕ and ಅಡಿಗ may also be used.

ಉಕಕುಳಿಯಾಳಿಪ್ರತ್ಯಯ
ಮಿಕಮುಂ ಶೀಲಾದಿವಿಶ್ರುತಾರ್ಥದೊಳಡಿಗ |
ಪ್ರಕಟಪ್ರತ್ಯಯಮಕ್ಕುಂ
ಸುಕವಿಗಳಿಂ ತದನುಕೂಲವರ್ತನವಿಧಿಯೊಳ್ || 203||

ಪದಚ್ಛೇದಂ.—ಉಕ-ಕುಳಿ-ಆಳಿಪ್ರತ್ಯಯಂ ಇಕಮುಂ ಶೀಲಾದಿವಿಶ್ರುತಾರ್ಥದೊಳ್; ಅಡಿಗಪ್ರಕಟಪ್ರತ್ಯಯಂ ಅಕ್ಕುಂ ಸುಕವಿಗಳಿಂ ತದನುಕೂಲವರ್ತನವಿಧಿಯೊಳ್.

ಅನ್ವಯಂ.—ಶೀಲಾದಿವಿಶ್ರುತಾರ್ಥದೊಳ್ ಉಕಕುಳಿಯಾಳಿಪ್ರತ್ಯಯಂ ಇಕಮುಂ; ಸುಕವಿಗಳಿಂ ತದನುಕೂಲವರ್ತನವಿಧಿಯೊಳ್ ಅಡಿಗಪ್ರಕಟಪ್ರತ್ಯಯಂ ಅಕ್ಕುಂ.

ಟೀಕು.—ಶೀಲಾದಿ=ಶೀಲ ಮೊದಲಾದ; ವಿಶ್ರುತಾರ್ಥದೊಳ್=ಪ್ರಸಿದ್ಧವಾದರ್ಥದಲ್ಲಿ; ಉಕಕುಳಿಯಾಳಿಪ್ರತ್ಯಯಂ=ಉಕಪ್ರತ್ಯಯ ಕುಳಿಪ್ರತ್ಯಯ ಆಳಿಪ್ರತ್ಯಯಂಗಳ್; ಇಕಮುಂ=ಇಕ ಎಂಬ ಪ್ರತ್ಯಯಮುಂ ಅಪ್ಪುದು; ಸುಕವಿಗಳಿಂ=ಸತ್ಕವೀಶ್ವರರಿಂದೆ; ತದನುಕೂಲ=ಆ ಶೀಲಾದಿವಿಶ್ರುತಾರ್ಥದೊಳನುಕೂಲವಾದ; ವರ್ತನವಿಧಿಯೊಳ್=ವರ್ತನದ ವಿಧಿಯಲ್ಲಿ; ಅಡಿಗ=ಅಡಿಗ ಎಂಬ; ಪ್ರಕಟ=ಪ್ರಸಿದ್ಧವಾದ; ಪ್ರತ್ಯಯಂ=ಪ್ರತ್ಯಯಂ; ಅಕ್ಕುಂ=ಆಗುವುದು.

ವೃತ್ತಿ.—ಶೀಲಾದಿನಿಖಿಲಾರ್ಥಂಗಳೊಳ್ ಉಕಪ್ರತ್ಯಯಮುಂ ಕುಳಿಪ್ರತ್ಯಯಮುಂ ಆಳಿಪ್ರತ್ಯಯಮುಂ ಇಕಪ್ರತ್ಯಯಮುಂ ಅಕ್ಕುಂ; ತದನುಕೂಲ್ಯವರ್ತನದೊಳ್ ಅಡಿಗಪ್ರತ್ಯಯಮಕ್ಕುಂ.

ಪ್ರಯೋಗಂ.—ಉಕಪ್ರತ್ಯಯಕ್ಕೆ—ಕಟ್ಟುಕಂ; ತಟ್ಟುಕಂ; ಅಂಟುಕಂ; ಕಾರುಕಂ; ಸಂಣುಕಂ; ಬಂದುಕಂ (Mdb. Ms. ಬೊಂದುಕಂ); ದಿಂಡುಕಂ.

ಕುಳಿಪ್ರತ್ಯಯಕ್ಕೆ—ಪೋರ್ಕುಳಿ; ಓಡುಕುಳಿ; ಹುಡುಕುಳಿ (Mdb. Ms. ಪಾಡುಕುಳಿ); ಮಱುಕುಳಿ; (ಕುಱುಕುಳಿ); ಪ್ರೇಂಕುಳಿ; ಇಱುಕುಳಿ; ಆಯ್ಕುಳಿ.

ಆಳಿಪ್ರತ್ಯಯಕ್ಕೆ—ಓದಾಳಿ; ಜೂದಾಳಿ; ಮಾಱಾಳಿ; ಏಱಾಳಿ; ಪಡಪಾಳಿ; ಮಾತಾಳಿ; ಕೇಡಾಳಿ; ಸಿಗ್ಗಾಳಿ.

ಮಾಱಾಳಿಯುಮೋದಾಳಿಯು
ಮೇಱಾಳಿಯುಮಪ್ಪನಾಗಿ ಪಡೆಪಾಳಿಯೆ ಕೇಳ್ ।
ನೀಱಿಂ ಜೂದಾಳಿ ಕರಂ
ನೀಱೆಗೆ ಮಾತಾಳಿ ಕಳೆಯೆ ಸಿಗ್ಗಾಳಿಯಿವಂ ॥ ಕಂದಂ ॥

ಇಕಪ್ರತ್ಯಯಕ್ಕೆ—ಕರಿಕಂ; ಅಸಿಕಂ; ದಸಿಕಂ (ಹಿಸಿಕಂ); ಬಾರಿಕಂ.

ಅಡಿಗಪ್ರತ್ಯಯಕ್ಕೆ—ದೇವಡಿಗಂ; ಪಾವಡಿಗಂ; ಪೂವಡಿಗಂ.

### ಸೂತ್ರಂ.

By the Suffix ಉಗ Nouns are formed which denote people who deal in, or are engaged in or meddle with; by ಅಟಿಗ Nouns for rope-dancers, light-bearers, and blade-dealers (?).

ವ್ಯವಹರಣತದಾಚರಣ
ಪ್ರವಣನೊಳಕ್ಕುಂ ಸಮಂತುಗಪ್ರತ್ಯಯಮೊಂ |
ದುವುದಟಿಗಪ್ರತ್ಯಯಮಾ
ಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ || 204 ||

ಪದಚ್ಛೇದಂ.—ವ್ಯವಹರಣತದಾಚರಣಪ್ರವಣನೊಳ್ ಅಕ್ಕುಂ ಸಮಂತು ಉಗಪ್ರತ್ಯಯಂ; ಒಂದುವುದು ಅಟಿಗಪ್ರತ್ಯಯಂ ಆಡುವ ದೀವಿಗೆವಿಡಿವ ಹರದುಗೆಯ್ವ ಅನಿಬರೊಳಂ.

ಅನ್ವಯಂ.—ವ್ಯವಹರಣತದಾತರಣಪ್ರವಣನೊಳ್ ಸಮಂತು ಉಗಪ್ರತ್ಯಯಂ ಅಕ್ಕುಂ; ಆಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ ಅಟಿಗಪ್ರತ್ಯಯಂ ಒಂದುವುದು.

ಟೀಕು.—ವ್ಯವಹರಣ = ವ್ಯವಹಾರದಲ್ಲಿ; ತದಾಚರಣ = ಅದಱಾಚರಣೆಯಲ್ಲಿ; ಪ್ರವಣನೊಳ್ = ಪ್ರಸಿದ್ಧವಾದವನಲ್ಲಿ; ಸಮಂತು = ಹಾಂಗೆ; ಉಗಪ್ರತ್ಯಯಂ = ಉಗ ಎಂಬ ಪ್ರತ್ಯಯಂ; ಅಕ್ಕುಂ = ಆಗುವುದು; ಆಡುವ = ಗಱಿವಿಡಿದಾಡುವ; ದೀವಿಗೆವಿಡಿವ = ದೀವಿಗೆಯಂ ಪಿಡಿವ; ಹರದುಗೆಯ್ವ = ಬೇಹಾರವಂ ಮಾಡುವ; ಅನಿಬರೊಳಂ = ಅನಿಬರಲ್ಲಿಯುಂ; ಅಟಿಗಪ್ರತ್ಯಯಂ = ಅಟಿಗ ಎಂಬ ಪ್ರತ್ಯಯಂ; ಒಂದುವುದು = ಪೊರ್ದುಗೆಯಾಗುವುದು.

ವೃತ್ತಿ.—ವ್ಯವಹರಿಸುವನೊಳಮ್ ಅಲ್ಲಿ ವರ್ತಿಸುವನೊಳಮ್ ಉಗಪ್ರತ್ಯಯಮಕ್ಕುಂ; ಗಱಿವಿಡಿದಾಡುವ ದೀವಿಗೆವಿಡಿವ ಎಲೆವರದಾಡುವನೊಳಮ್ ಅಟಿಗಪ್ರತ್ಯಯಮಕ್ಕುಂ.

ಪ್ರಯೋಗಂ.—ಉಗಪ್ರತ್ಯಯಕ್ಕೆ—ನಾರುಗಂ; ಬೇರುಗಂ; ಊರುಗಂ; ಕಾಱುಗಂ; ನೇಣುಗಂ; ಹೆಣ್ಣುಗಂ; ಮಣ್ಣುಗಂ.

ಅಟಿಗಪ್ರತ್ಯಯಕ್ಕೆ—ಕೊಲ್ಲಟಿಗಂ; ದೀವಟಿಗಂ; ಮಾವಟಿಗಂ.

### ಸೂತ್ರಂ.

The Suffix ಕ is used for denoting persons of a certain condition; ಇಲ for denoting persons occupied with or following a profession, or abiding in.

ಏನಾನುವೊಂದು ಭಾವವು
ನಾನಲ್ ಸಲ್ವವನೊಳಱಿಗೆ ಕಪ್ರತ್ಯಯುವುಂ ।
ಪೀನಂ ತದ್ವರ್ತನಗತ
ಮಾನವನೊಳ್ ತಿಳಿಗೆ ಮತ್ತಿಲಪ್ರತ್ಯಯುವುಂ ॥ 205 ॥

ಪದಚ್ಛೇದಂ.—ಏನಾನುಂ ಒಂದು ಭಾವವುಂ ಆನಲ್ ಸಲ್ವವನೊಳ್ ಅಱಿಗೆ ಕಪ್ರತ್ಯಯುವುಂ; ಪೀನಂ ತದ್ವರ್ತನಗತಮಾನವನೊಳ್ ತಿಳಿಗೆ ಮತ್ತೆ ಇಲಪ್ರತ್ಯಯುವುಂ.

ಅನ್ವಯಂ.—ಏನಾನುಂ ಒಂದು ಭಾವವುಂ ಆನಲ್ ಸಲ್ವವನೊಳ್ ಕಪ್ರತ್ಯಯುವುಂ ಅಱಿಗೆ; ಪೀನಂ ತದ್ವರ್ತನಗತಮಾನವನೊಳ್ ಮತ್ತೆ ಇಲಪ್ರತ್ಯಯುವುಂ ತಿಳಿಗೆ.

ಟೀಕು.—ಏನಾನುವೊಂದು = ಆವುದಾನೊಂದು; ಭಾವವುಂ = ಭಾವವುಂ; ಆನಲ್ = ಧರಿಸಲ್; ಸಲ್ವವನೊಳ್ = ಸಲ್ವವನಲ್ಲಿ; ಕಪ್ರತ್ಯಯುವುಂ = ಕ ಎಂಬ ಪ್ರತ್ಯಯುವುಂ; ಅಱಿಗೆ = ತಿಳಿಗೆ; ಪೀನಂ = ವಿಶೇಷವಾಗಿ; ತದ್ವರ್ತನ = ಆ ವರ್ತನೆಯಲ್ಲಿ; ಗತ = ಎಯ್ದಲ್ಪಟ್ಟ; ಮಾನವನೊಳ್ = ಮನುಷ್ಯನಲ್ಲಿ; ಮತ್ತೆ = ಬೞಿಕಂ; ಇಲಪ್ರತ್ಯಯುವುಂ = ಇಲ ಎಂಬ ಪ್ರತ್ಯಯುವುಂ; ತಿಳಿಗೆ = ಅಱಿಗೆ.

ವೃತ್ತಿ.—ಆವುದಾನೊಂದು ಭಾವವುಂ ತಳೆದಿರ್ಪವನೊಳ್ ಕಪ್ರತ್ಯಯುವುಕ್ಕುಂ; ಅದಱೊಳೀತಂ ವರ್ತಿಪನೆಂಬಲ್ಲಿ ಇಲಪ್ರತ್ಯಯುವುಕ್ಕುಂ.

ಪ್ರಯೋಗಂ.—ಕಪ್ರತ್ಯಯಕ್ಕೆ—ಬಡಕಂ; ನಿಡುಕಂ; ಒಣಕಂ; ಕಿಡುಕಂ; ಬಣ್ಣುಕಂ; ಅಱಿಕಂ; ಬೆಳುಕಂ (Mdb. Ms. ಬಳಕಂ); ತೊಳಕಂ (Mdb. Ms. ಕೊಳಕಂ or ಕೊಟಿಕಂ

ಇಲಪ್ರತ್ಯಯಕ್ಕೆ— ಪಚ್ಚಯಿಲಂ (o. r. ಪಚ್ಚಾಯಿಲಂ) ಫೆಳಯಿಲಂ; ಪಡೆಯಿಲಂ; ಗಾವಿಲಂ.

### ಸೂತ್ರಂ.

By the Suffixes ಉಳ್ಳ, ಒಡೆಯ and ವಂತ persons are denoted who possess; by ವಣಿಗ persons whose delight is eating (or taking).

ಇದಱೊಳಿದುಂಟೆಂಬರ್ಥದೊ
ಳುದಯಿಪುದುಳ್ಳೊಡೆಯುವಂತಶಬ್ದಂ ಕೈಕೊ ।
ಳ್ವುದು ವಣಿಗಪ್ರತ್ಯಯುವು
ಣ್ಬುದು ಜೀವಿತಮಾಗಿ ಬಱಿದೆ ತಿನುತಿರ್ಪವನೊಳ್ ॥ 206 ॥

ಪದಚ್ಛೇದಂ.— ಇದಱೊಳ್ ಇದು ಉಂಟು ಎಂಬ ಅರ್ಥದೊಳ್ ಉದಯಿಪುದು ಉಳ್ಳ ಒಡೆಯ ವಂತ ಶಬ್ದಂ; ಕೈಕೊಳ್ವುದು ವಣಿಗಪ್ರತ್ಯಯಂ, ಉಣ್ಬುದು ಜೀವಿತಂ ಆಗಿ, ಬಱಿದೆ ತಿನುತೆ ಇರ್ಪ ಅವನೊಳ್.

ಅನ್ವಯಂ.— ಉಣ್ಬುದು ಜೀವಿತಂ ಆಗಿ, ಬಱಿದೆ ತಿನುತೆ ಇರ್ಪವನೊಳ್ ವಣಿಗಪ್ರತ್ಯಯಂ ಕೈಕೊಳ್ವುದು.

ಟೀಕು.—ಇದಱೊಳ್ = ಇದರಲ್ಲಿ; ಇದು = ಇದು; ಉಂಟೆಂಬರ್ಥದೊಳ್ = ಉಂಟೆಂಬ ಅರ್ಥದಲ್ಲಿ; ಉಳ್ಳೊಡೆಯವಂತಶಬ್ದಂ = ಉಳ್ಳ ಎಂಬ, ಒಡೆಯ ಎಂಬ, ವಂತ ಎಂಬ ಶಬ್ದಂ; ಉದಯಿಪುದು = ಹುಟ್ಟುವುದು; ಉಣ್ಬುದು = ತಿಂಬುದು; ಜೀವಿತವಾಗಿ = ಬಾಳ್ವೆಯಾಗಿ; ಬಱಿದೆ = ಸುಮ್ಮನೆ; ತಿನುತಿರ್ಪವನೊಳ್ = ತಿನುತಿರ್ಪವನಲ್ಲಿ; ವಣಿಗಪ್ರತ್ಯಯಂ = ವಣಿಗ ಎಂಬ ಪ್ರತ್ಯಯಂ; ಕೈಕೊಳ್ವುದು = ಸ್ವೀಕಾರವಪ್ಪುದು.

ವೃತ್ತಿ.—ಇಲ್ಲಿ ಈ ವಸ್ತುವುಂಟೆಂಬರ್ಥದೊಳ್ ಉಳ್ಳವೊಡೆಯವಂತಪ್ರತ್ಯಯಮಕ್ಕುಂ; ಊಟಮೇ ಜೀವಿತಮಾಗಿ ಬಾಳ್ವಿನೊಳ್ ವಣಿಗಪ್ರತ್ಯಯಮಕ್ಕುಂ.

ಪ್ರಯೋಗಂ.—ಉಳ್ಳಪ್ರತ್ಯಯಕ್ಕೆ—ಧನಮುಳ್ಳಂ; ಧಾನ್ಯಮುಳ್ಳಂ; ಗುಣಮುಳ್ಳಂ; ಓದುಳ್ಳಂ; ತೇಜಮುಳ್ಳಂ.

ಒಡೆಯಪ್ರತ್ಯಯಕ್ಕೆ—ಪೆರ್ಮೆಯೊಡೆಯಂ; ಜಗದೊಡೆಯಂ; ನೆಲನೊಡೆಯಂ; ಕೊಡೆಯೊಡೆಯಂ; ಜಾಣೊಡೆಯಂ.

ವಂತಪ್ರತ್ಯಯಕ್ಕೆ—ಸಿರಿವಂತಂ; ಜಯವಂತಂ; ಜಸವಂತಂ; ಹೂನ್ಯವಂತಂ (Mdb. ಪೂಣ್ಯಾವಂತಂ).

ವಣಿಗಪ್ರತ್ಯಯಕ್ಕೆ—ಕೂಳ್ವಣಿಗಂ.

ಮತ್ತೆ ಕೆಲವಱೊಳುಂಟು—ಲಂಚವಣಿಗಂ; ಸಾಲವಣಿಗಂ.

ಸೂತ್ರಂ.

The Suffix ಅನೆಯ is used for denoting grades in quantity and number; ವೆ for denoting so and so many times.

ಅನೆಯಪ್ರತ್ಯಯಮನಿತಿನಿ
ತೆನಿತೆಂಬ ಲಸತ್ಪ್ರಮಾಣಪೂರಣದೊಳ್ಕೆ ।
ಟ್ಟನೆ ಸಂಖ್ಯಾಪೂರಣದೊಳ್
ಜನಿಯಿಪುದು ವೆಯೆಂಬುದಕ್ಕುಮೆಣಿಸುವ ಸೂಱೊಳ್
|| 207 ||

ಪದಚ್ಛೇದಂ.—ಅನೆಯಪ್ರತ್ಯಯಂ ಅನಿತು ಇನಿತು ಎನಿತು ಎಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು; ಮೆ ಎಂಬುದು ಅಕ್ಕುಂ ಎಣಿಸುವ ಸೂಟಿೊಳ್.

ಅನ್ವಯಂ.—ಅನಿತಿನಿತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಅನೆಯಪ್ರತ್ಯಯಂ ಜನಿಯಿಪುದು; ಎಣಿಸುವ ಸೂಟಿೊಳ್ ಮೆಯೆಂಬುದಕ್ಕುಂ.

ಟೀಕು.—ಅನಿತು = ಅನಿತೆಂದು; ಇನಿತು = ಇನಿತೆಂದು; ಎನಿತು = ಎನಿತೆಂದು; ಎಂಬ = ಎಂಬ; ಲಸತ್ = ಒಪ್ಪಲ್ಪಟ್ಟ; ಪ್ರಮಾಣಪೂರಣದೊಳ್ = ಪ್ರಮಾಣಪೂರಣದಲ್ಲಿ; ನೆಟ್ಟನೆ = ವ್ಯಕ್ತವಾಗಿ; ಸಂಖ್ಯಾ = ಲೆಕ್ಕದ; ಪೂರಣದೊಳ್ = ಪೂರಣದಲ್ಲಿ; ಅನೆಯಪ್ರತ್ಯಯಂ = ಅನೆಯ ಎಂಬ ಪ್ರತ್ಯಯಂ; ಜನಿಯಿಪುದು = ಹುಟ್ಟುವುದು; ಎಣಿಸುವ ಸೂಟಿೊಳ್ = ಎಣಿಸುವ ಸೂಟಿಲ್ಲಿ; ಮೆ ಎಂಬುದು = ಮೆ ಎಂಬ ಪ್ರತ್ಯಯಂ; ಅಕ್ಕುಂ = ಆಗುವುದು.

ವೃತ್ತಿ.—ಅನಿತಿನಿತೆನಿತೆಂಬ ಪ್ರಮಾಣಪೂರಣದೊಳಂ ಸಂಖ್ಯಾಪೂರಣದೊಳಮ್ ಅನೆಯಪ್ರತ್ಯಯಮಕ್ಕುಂ; ಎಣಿಸುವ ಸೂಟಿೊಳ್ ಮೆಯೆಂಬುದಕ್ಕುಂ.

ಪ್ರಯೋಗಂ.—ಅನೆಯಪ್ರತ್ಯಯಕ್ಕೆ—ಅನಿತನೆಯಂ; ಇನಿತನೆಯಂ; ಎನಿತನೆಯಂ; ಒಂದನೆಯಂ; ಎರಡನೆಯಂ; ಮೂಱನೆಯಂ; ಪದಿನಾಱನೆಯಂ; ನೂಱನೆಯಂ; ಐನೂಱನೆಯಂ.

ಮೆಪ್ರತ್ಯಯಕ್ಕೆ—ಒರ್ಮೆ; ಇರ್ಮೆ; ಮೂರ್ಮೆ; ಸಾಸಿರ್ಮೆ; ಪಲರ್ಮೆ.

## ಸೂತ್ರಂ.

In forming Feminines chiefly from bases with final ಅ, the Suffixes ಇತಿ, ತಿ, ಅಳ್ or ಎ are added.

ಕಾಂತಾವಿಷಯದೊಳಾದಮು
ದಂತಕ್ಕಿತಿಯುಂ ತದಾದಿಲೋಪಮುಮಕ್ಕುಂ ।
ಭ್ರಾಂತೇನಳಂತಮುಂ ನೆಗ
ೞ್ಗುಂ ತೋಱಿದದರ್ಕದಂತದಲ್ಲಿ ವಿಕಲ್ಪಂ ॥ 208 ॥

ಪದಚ್ಛೇದಂ.— ಕಾಂತಾವಿಷಯದೊಳ್ ಆದಂ ಅದಂತಕ್ಕೆ ಇತಿಯುಂ ತದಾದಿಲೋಪಮುಂ ಅಕ್ಕುಂ; ಭ್ರಾಂತೆಂ, ಅಳಂತಮುಂ ನೆಗಟ್ದುಂ, ತೋಱದು ಅದರ್ಕೆ ಅದಂತದಲ್ಲಿ ವಿಕಲ್ಪಂ.

ಅನ್ವಯಂ.—ಅದರ್ಕೆ ಅದಂತದಲ್ಲಿ ವಿಕಲ್ಪಂ ತೋಱದು ಎಂಬುದನ್ವಯಂ.

ಟೀಕು.—ಕಾಂತಾವಿಷಯದೊಳ್ = ಸ್ತ್ರೀವಿಷಯಲ್ಲಿ; ಆದಂ = ಆದಂ ಎಂಬ ಪೀನಗ್ರಹಣದಿಂದೆ; ಅದಂತಕ್ಕೆ = ಅಕಾರಾಂತಕ್ಕೆ; ಇತಿಯುಂ = ಇತಿಯೆಂಬ ಪ್ರತ್ಯಯವುಂ; ತದಾದಿಲೋಪಮುಂ = ಆ ಇತಿಪ್ರತ್ಯಯದಾದಿಗೆ ಲೋಪವುಂ; ಅಕ್ಕುಂ = ಅಪ್ಪದಕ್ಕೆ; ಭ್ರಾಂತೆಂ = ಭ್ರಮೆಯೆಂ; ಅಳಂತಮುಂ = ಅಳ್ ಎಂಬ ಪ್ರತ್ಯಯಾಂತಮುಂ; ನೆಗಟ್ದುಂ = ಪ್ರಸಿದ್ಧಿವಡೆವುದು; ಅದರ್ಕೆ = ಆ ಅಳ್ ಎಂಬ ಪ್ರತ್ಯಯಕ್ಕೆ; ಅದಂತದಲ್ಲಿ = ಅಕಾರಾಂತದಲ್ಲಿ; ವಿಕಲ್ಪಂ = ವಿಕಲ್ಪಂ; ತೋಱದು = ಬಾರದು.

ವೃತ್ತಿ.—ಸ್ತ್ರೀವಿಷಯದೊಳದಂತಕ್ಕೆ ಇತಿಪ್ರತ್ಯಯಮುಮ್, ಆದಿಯಿತ್ವಕ್ಕೆ ಲೋಪಮುಮ್, ಆದವೆಂಬುದಱಿಂ ಕೆಲವೆಡೆಯೊಳವ್ ಅದಂತಮಲ್ಲದಲ್ಲಿಯುಮ್, ಅದಂತಕ್ಕೆ ವಿಕಲ್ಪಮಿಲ್ಲದಳ್ಪ್ರತ್ಯಯಮುಮ್ ಆದವೆಂಬುದಱಿಂದಂತಕ್ಕೆತ್ವಮುಮಕ್ಕುಂ.

ಪ್ರಯೋಗಂ.—ಇತಿಗೆ—ಚಾಮರಿಗಿತಿ; ಮದ್ದಳಿಗಿತಿ; ಆವುಜಿಗಿತಿ; ಕನ್ನಡಿಗಿತಿ; [?]ಪಾಳಿಗಿತಿ; ಪಂಚಮಿಗಿತಿ; ವೇರಡಿಗಿತಿ; ಕುಱುಂಬತಿ; ತೆಲುಂಗಿತಿ (Mḍb. Ms. ತೆಲ್ಲಿಗಿತಿ); ಚಿಪ್ಪಿಗಿತಿ; ಒಕ್ಕಲಿಗಿತಿ, ಒಕ್ಕಲಿತಿಯೆಂದುಮುಂಟು.

> ಒಕ್ಕಲಿತಿ ಜೋಡೆಯಾದಂ
> ತಕ್ಕುಮವಳ್ ಸಿತಗೆ ಪತಿಗೆ ಮಿಗೆಕಾಯ್ವಳ್ ನೋ ।
> ಟಕ್ಕೆ ಕಡುಸೊಂದಿ ನಾಣಿಲಿ
> ಬಕ್ಕಂಬಯಲೊಳವುದಾರುಮಂ ಭಂಜಿಸುವಳ್ ॥ ಕಂದಂ ॥

ಅದಂತಮಲ್ಲದಲ್ಲಿಯುಂ—ಅಕ್ಕಸಾಲಿತಿ; ಒಕ್ಕಲಿತಿ.

ಇತ್ವಲೋಪಕ್ಕೆ—ಮಣಿಗಾರ್ತಿ; ಕಂಚಗಾರ್ತಿ; ಗಾಡಿಗಾರ್ತಿ (Mḍb. Ms. ಗಾಡಿಕಾರ್ತಿ; ಬೇಟಕಾರ್ತಿ; ಘಟ್ಟಿವಳ್ತಿ, ಸೆಜ್ಜೆವಳ್ತಿ. ಪೊಲತಿ, ನರತಿ, ಎಡತಿ ಎಂಬ ಮೂಱು ಶಬ್ದದೆತ್ವಕ್ಕೆ ಸಮಾಸದಂತಿರತ್ವಂ.

ವಿಕಲ್ಪಮಿಲ್ಲದ ಅಳ್ಪ್ರತ್ಯಯಕ್ಕೆ—ಅವಳ್, ಇವಳ್, ಉವಳ್; ಆವಳ್; ಪೆಱಳ್; ಕಿಱಿಯಳ್; ಪಿರಿಯಳ್; ಅಸಿಯಳ್; ಇನಿಯಳ್; ಇಂಮಿದಳ್; ಕಂಮಿದಳ್.

ಕೃತ್ತಿನೊಳಮಪ್ಪುದರ್ಕೆ—ಓಸರಿಸಿದಳ್; ರಾಗಿಸಿದಳ್; ಭೋಗಿಸಿದಳ್; ಪಾಡಿಸಿದಳ್; ನೋಡಿದಳ್; ಒಸೆದಳ್; ಬೆಸೆದಳ್.

ಎತ್ವಕ್ಕೆ—ಜೋಡೆ; ಸಿತಗೆ; ಚದುರೆ; ಪಾಣ್ಬೆ.

## ಸೂತ್ರಂ.

In the formation of Secondary nominal bases there appears an Elision of vowels and consonants, and a Changing of consonants similar to what we see in Compounds and Verbs.

ಚರಮಸ್ವರಕ್ಕೆ ಚರಮಾ
ಕ್ಷರಕಕ್ಕುಂ ಲೋಪಮಗ್ರದೊಳ್ ತದ್ಧಿತಮೊಂ।
ದಿರೆ ತನ್ನೊಳಾ ಸಮಾಸಾಂ
ತರದಾಖ್ಯಾತಕದ ಲಕ್ಷಣಂ ವ್ಯವಹರಿಕುಂ || 209 ||

ಪದಚ್ಛೇದಂ.—ಚರಮಸ್ವರಕ್ಕೆ ಚರಮಾಕ್ಷರಕೆ ಅಕ್ಕುಂ ಲೋಪಂ, ಅಗ್ರದೊಳ್ ತದ್ಧಿತಂ ಒಂದಿ ಇರೆ; ತನ್ನೊಳ್ ಆ ಸಮಾಸಾಂತರದ ಆಖ್ಯಾತಕದ ಲಕ್ಷಣಂ ವ್ಯವಹರಿಕುಂ.

ಅನ್ವಯಂ.—ಅಗ್ರದೊಳ್ ತದ್ಧಿತಂ ಒಂದಿರೆ, ಚರಮಸ್ವರಕ್ಕೆ ಚರಮಾಕ್ಷರಕೆ ಲೋಪಂ ಅಕ್ಕುಂ; ತನ್ನೊಳ್ ಆ ಸಮಾಸಾಂತರದ ಆಖ್ಯಾತಕದ ಲಕ್ಷಣಂ ವ್ಯವಹರಿಕುಂ.

ಟೀಕು.—ಅಗ್ರದೊಳ್ = ಮುಂದೆ; ತದ್ಧಿತಂ = ತದ್ಧಿತಪ್ರತ್ಯಯಂ; ಒಂದಿರೆ = ಕೂಡಿರೆ; ಚರಮಸ್ವರಕ್ಕೆ = ಅಂತ್ಯದ ಸ್ವರಕ್ಕೆ; ಚರಮಾಕ್ಷರಕೆ = ಅಂತ್ಯದಕ್ಷರಕ್ಕೆ; ಲೋಪಂ = ಅದರ್ಶನಂ; ಅಕ್ಕುಂ = ಅಪ್ಪುದು; ತನ್ನೊಳ್ = ತದ್ಧಿತಮೊಂದಿದ ಪದಂ ತನ್ನಲ್ಲಿ; ಆ ಸಮಾಸಾಂತರದ = ಆ ಸಮಾಸಪ್ರಕರಣಮಧ್ಯದ; ಆಖ್ಯಾತಕದ = ಆಖ್ಯಾತಪ್ರಕರಣದ; ಲಕ್ಷಣಂ = ಲಕ್ಷಣವಾದ ಸೂತ್ರಂ; ವ್ಯವಹರಿಕುಂ = ವ್ಯವಹರಿಸುವುದು.

ವೃತ್ತಿ.—ತದ್ಧಿತಪ್ರತ್ಯಯಂ ಪರದೊಳಿರೆ, ಅಂತ್ಯಸ್ವರಕ್ಕಮಂತ್ಯಾಕ್ಷರಕ್ಕಂ ಲೋಪಂ; ಸಮಾಸಾಂತರಾಳಲಕ್ಷಣಮುಮ್ ಆಖ್ಯಾತಲಕ್ಷಣಮುಂ ತದ್ಧಿತದೊಳೆ ವ್ಯವಹರಿಸುಗುಂ.

ಪ್ರಯೋಗಂ.—ಸ್ವರಲೋಪಕ್ಕೆ—ಘಟ್ಟಿವಳ್ತಿ; ಸೆಜ್ಜೆವಳ್ತಿ; ತೆಲುಂಗಿತಿ; ಜೋಸರಿಗಿತಿ (Mdb. Ms. ಜೋ—); ದೇಸಿಗಿತಿ; ಕಂಮಱಿತಿ; ನಾವಿದಿತಿ; ಹಾದರಿಗಿತಿ.

(ಱು, ದು ಎಂಬ) ಅಕ್ಷರಂಗಳ ಲೋಪಕ್ಕೆ—ಏಱುತಕ್ಕೆ ಏತಂ; ಓದಿಂಗೆ ಓತಂ.

ಸಮಾಸಲಕ್ಷಣಕ್ಕೆ— ಮಾಲೆಗಾಱನೆಂಬುದಱ ಱಕಾರಕ್ಕೆ ರೇಫಮಾದುದಾಗಿ ಮಾಲೆಗಾರ್ತಿ; ಕಂಚಗಾರ್ತಿ; ಪಂಚಗಾರ್ತಿ; ಬಲಗಾರ್ತಿ; ಜಾಲಗಾರ್ತಿ; ಬಳೆಗಾರ್ತಿ.

ಆಖ್ಯಾತಲಕ್ಷಣಕ್ಕೆ—ಆಟಂ; ಪಾಟಂ; ನೋಟಂ; ಕೂಟಂ.

ಸೂತ್ರಂ.

ಇತ್ವದೊಳುತ್ವದೊಳಾ ಹ್ರ
ಸ್ವೈತ್ವದೊಳೊಂದಿದ ವಕಾರಮಕ್ಕುಂ ಭಾವ |
ಕ್ಕತ್ವಂ ಪಿರಿದುಂ ಪೆಱಗುಂ
ಟತ್ವಂ ಹ್ರಸ್ವೈತ್ವತತ್ವಮದು ಕೆಲವೆಡೆಯೊಳ್ || 210 ||

One class of Abstract nouns (ಭಾವಾರ್ಥಂಗಳ್) is formed by adding ವಿ, ವು or ವೆ to (Verbal) themes, in which case ಅ frequently generates before the suffixes;—another class by adding ತ or ತೆ.

ಪದಚ್ಛೇದಂ.—ಇತ್ವದೊಳ್ ಉತ್ವದೊಳ್ ಆ ಹ್ರಸ್ವೈತ್ವದೊಳ್ ಒಂದಿದ ವಕಾರಂ ಆಕ್ಕುಂ ಭಾವಕ್ಕೆ; ಅತ್ವಂ ಪಿರಿದುಂ ಪೆಱಗೆ ಉಂಟು. ಅತ್ವಂ ಹ್ರಸ್ವೈತ್ವತತ್ವಂ ಅದು ಕೆಲವೆಡೆಯೊಳ್.

ಅನ್ವಯಂ.—ಭಾವಕ್ಕೆ ಇತ್ವದೊಳ್ ಉತ್ವದೊಳ್ ಆ ಹ್ರಸ್ವೈತ್ವದೊಳ್ ಒಂದಿದ ವಕಾರಂ ಆಕ್ಕುಂ; ಅತ್ವಂ ಪಿರಿದುಂ ಪೆಱಗೆ ಉಂಟು. ಕೆಲವೆಡೆಯೊಳ್ ಅತ್ವಂ ಹ್ರಸ್ವೈತ್ವತತ್ವಂ ಅದು.

ಟೀಕು.—ಭಾವಕ್ಕೆ = ಭಾವಾರ್ಥಕ್ಕೆ; ಇತ್ವದೊಳ್ = ಇಕಾರದಲ್ಲಿ; ಉತ್ವದೊಳ್ = ಉಕಾರದಲ್ಲಿ; ಆ ಹ್ರಸ್ವೈತ್ವದೊಳ್ = ಆ ಹ್ರಸ್ವವಾದೆಕಾರದಲ್ಲಿ; ಒಂದಿದ ವಕಾರಂ = ಕೂಡಿದ ವಕಾರಂ; ಆಕ್ಕುಂ = ಆಗುವದು; ಅತ್ವಂ = ಅಕಾರಂ; ಪಿರಿದುಂ = ವಿಶೇಷವಾಗಿ; ಪೆಱಗೆ = ಹಿಂದೆ; ಉಂಟು = ಉಂಟಾಗುವುದು; ಕೆಲವೆಡೆಯೊಳ್ = ಕೆಲವು ತಾವಿನಲ್ಲಿ; ಅತ್ವಂ ಹ್ರಸ್ವೈತ್ವತತ್ವಂ = ಅಕಾರಮುಂ ಹ್ರಸ್ವದೆಕಾರಮುಂ ಕೂಡಿದ ತಕಾರಂ; ಅದು = ಅದು ಅಗುವುದು.

ವೃತ್ತಿ.—ಇಕಾರದೊಳಂ ಉಕಾರದೊಳಂ ಏಕಾರದೊಳಂ ಕೂಡಿದ ಭಾವಾರ್ಥದ ವಕಾರಮಿರ್ದೊಡೆ ಅದಱ ಪಿಂದೆ ಅಕಾರಮಕ್ಕುಂ; ಅತ್ವಮೆತ್ವಮಂ ತಳೆದ ತಕಾರಂ ಕೆಲವೆಡೆಯೊಳಕ್ಕುಂ.

ಪ್ರಯೋಗಂ.—ವಕಾರಕ್ಕೆ—ತೊಱವಿ, ಅಳವಿ, ಬಳವಿ; ಉಱವು, ಪೆಳವು (ಪೆಱವು), ಕೆಳವು, ತೆರವು, ಎರವು: ಮಱವೆ, ತೆಱವೆ, ಪಳವೆ, ಎಳವೆ (Mdb. Ms. ಎಡವೆ).

ವ್ಯಂಜನದ ಮೇಲಣತ್ವಕ್ಕೆ—ನಿಲವು; ಒಲವು; ಬಲವು; ಕಳವು; ಸಲವು; ಗೆಲವು; ಇರವು; ಬರವು.

ಪಿರಿದೆಂಬುದಱಿಂದತ್ವಮಿಲ್ಲದಲ್ಲಿಯುಮ್ ಇವಾದುವು—ಉಱಿವು; ಕಳಿವು; ತಿಳಿವು; ಅಱಿವು; ಪಱಿವು.

ತಕಾರಕ್ಕೆ—ಅಱಿತಂ. ಕಡಿತಂ, ಉಱಿತಂ, ಏತಂ, ಓತಂ, ಎರ್ತಂ, ಪೋರ್ತಂ.

ತೆಕಾರಕ್ಕೆ—ಅಗಲ್ತೆ, ಪೊಗಲ್ತೆ, ನೆಗಲ್ತೆ, ಪುಗುತೆ.

## ಸೂತ್ರಂ.

**Further, Abstract nouns denoting distinction (ಚೇತನಂ) are formed by the Suffixes ಇಕೆ, ಇಕ್ಕೆ (being added to bases with a final vowel), and ತನ (not to be added to Samskṛita bases). Others are formed by means of ಉಮೆ, ಅಮೆ, ಗೆ, ಕೆ, ಮೆ, ಪು, ಪಿ and ಉ.**

ಪ್ರಕಟಂ ಚೇತನಭಾವದೊ
ಳಿಕೆ ತನಮುಮೆಯಕ್ಕುಮುಱಿದ ಭಾವದೊಳಮೆಯುಂ।
ಗೆ ಕೆ ಮೆಗಳುಮುತ್ವದಿತ್ವದ
ಪಕಾರಮುಂ ಮತ್ತುಕಾರಮುಂ ಸಮನಿಸುಗುಂ ||211||

ಪದಚ್ಛೇದಂ.— ಪ್ರಕಟಂ ಚೇತನಭಾವದೊಳ್ ಇಕೆ ತನಂ ಉಮೆ ಅಕ್ಕುಂ; ಉಱಿದ ಭಾವದೊಳ್ ಅಮೆಯುಂ ಗೆ ಕೆ ಮೆಗಳುಂ ಉತ್ವದ ಇತ್ವದ ಪಕಾರಮುಂ ಮತ್ತೆ ಉಕಾರಮುಂ ಸಮನಿಸುಗುಂ.

ಅನ್ವಯಂ.— ಚೇತನಭಾವದೊಳ್ ಇಕೆ ತನಂ ಉಮೆ ಪ್ರಕಟಂ ಅಕ್ಕುಂ.

ಟೀಕು.—ಚೇತನಭಾವದೊಳ್ = ಚೈತನ್ಯಭಾವದಲ್ಲಿ; ಇಕೆ = ಇಕೆ ಎಂಬ ಪ್ರತ್ಯಯಂ; ತನಂ = ತನಂ ಎಂಬ ಪ್ರತ್ಯಯಂ; ಉಮೆ = ಉಮೆ ಎಂಬ ಪ್ರತ್ಯಯಂ; ಪ್ರಕಟಂ = ಪ್ರಸಿದ್ಧಂ; ಅಕ್ಕುಂ = ಆಗುವುದು; ಉಱಿದ ಭಾವದೊಳ್ = ಚೈತನ್ಯಭಾವವಲ್ಲದುದಱಿದ ಭಾವದಲ್ಲಿ; ಅಮೆಯುಂ = ಅಮೆ ಎಂಬ ಪ್ರತ್ಯಯಮುಂ; ಗೆ ಕೆ ಮೆಗಳುಂ = ಗೆ ಪ್ರತ್ಯಯ, ಕೆ ಪ್ರತ್ಯಯ, ಮೆ

ಪ್ರತ್ಯಯಂಗಳ್; ಉತ್ವದ = ಉಕಾರದ; ಇತ್ವದ = ಇಕಾರದ; ಪಕಾರಮುಂ = ಪತ್ವಮುಂ; ಮತ್ತೆ = ಬಳಿ೯ಕಂ; ಉಕಾರಮುಂ = ಉ ಪ್ರತ್ಯಯಮುಂ; ಸಮನಿಸುಗುಂ = ಬರ್ಪುವು.

ವೃತ್ತಿ.—ಚೇತನಭಾವದೊಳಿಕೆಯೆಂಬುದುಂ ತನುವೆಂಬುದುಮ್ ಉಮೆಯೆಂಬುದುಮ್ ಅಕ್ಕುಂ; ಉಳಿದ ಭಾವದೊಳ್ ಅಮೆ ಎಂದುಂ ಗೆ ಎಂದುಂ ಕೆ ಎಂದುಂ ಮೆ ಎಂದುಂ ಪು ಎಂದುಂ ಪಿ ಎಂದುಂ ಉ ಎಂದುಮ್ ಅಕ್ಕುಂ.

ಪ್ರಯೋಗಂ.—ಇಕೆಗೆ—ಉನ್ನತಿಕೆ; ಉದ್ಧತಿಕೆ; ಆಯತಿಕೆ; ಪನ್ನತಿಕೆ; ಬಲ್ಗಂಡಿಕೆ; ಮಾನಸಿಕೆ (Mdb. Ms. ಮಾಸರಿಕೆ).

ಇಕೆಗೆ ದ್ವಿತ್ವಮುಂಟು—ಉನ್ನತಿಕ್ಕೆ; ಉದ್ಧತಿಕ್ಕೆ.

ವ್ಯಂಜನಾಂತದ ಮೇಲೆ ಇಕೆಯುಂ ಪತ್ತಿಸಲಾಗದು—ಕಾಣಿಕೆ, ಪೂಣಿಕೆ, ಜಾಣಿಕೆ, ತೆರಳಿಕೆ ಎಂದೊಡೆ ದೋಷಂ.

ತನಕ್ಕೆ—ಕಲಿತನಂ, ಚದುರತನಂ, ಆಳ್ತನಂ, (ಜಾತನಂ), ಎಗ್ಗತನಂ, ಮರುಳ್ತನಂ, ಪೆಣ್ತನಂ. ಸಂಸ್ಕೃತದೊಳಿದು ಸಲ್ಲದು; ಆರೋಹಕತನವೆಂಬುದಬದ್ಧಂ.

ಉಮೆಗೆ—ತಕ್ಕುಮೆ.

ಅಮೆಗೆ—ತೀರಮೆ; ಅಟ್ಕಿಮೆ.

ಗೆಕಾರಕ್ಕೆ—ಉಡುಗೆ; ಪಸುಗೆ; ಪೊಲ್ಗೆ; ಬಿಸುಗೆ; ಪಂಣುಗೆ; ಪತ್ತುಗೆ.

ಕೆಕಾರಕ್ಕೆ—ಮಡಿಕೆ; ಹಡಿಕೆ; ಕಾಣ್ಕೆ; ಪೂಣ್ಕೆ; ತೆರಳ್ಕೆ; ನಿರ್ಮಿಕೆ; ತೋರ್ಕೆ.

ಮೆಕಾರಕ್ಕೆ—ಒಲ್ಮೆ; ಬಲ್ಮೆ; ಜಾಣ್ಮೆ; ಕಡುಮೆ; ವೈಮೆ; ಕೂರ್ಮೆ; ಪೆರ್ಮೆ.

ಪುಕಾರಕ್ಕೆ—ಪಡೆಪು; ಪರೆಪು; ಕಡುಪು; ಬಲ್ಪು; ಮೆಲ್ಪು; ತಣ್ಪು; ನುಣ್ಪು; ಕರ್ಪು; ಪಸುರ್ಪು; ಕೆಂಪು; ಪೆಂಪು; ಬಿಸುಪು.

ಪಿಕಾರಕ್ಕೆ—ಕಲ್ಪಿ.

ಉಕಾರಕ್ಕೆ—ಉಗ್ಗು; ಸಿಗ್ಗು; ಎಗ್ಗು; ಕಿವುಡು; ಕೆಂಚು; ಗುಜ್ಜು; (ಬೆಜ್ಜು).

ಸೂತ್ರಂ.

The Noun ಪೆಂಪು mentioned under S. 211, is formed from ಪಿರಿದು.

ಪಿರಿದೆಂಬೀ ರೇಫಕ್ಕಾ
ಚರಿಪರ್ ಭಾವಾರ್ಥಮಪ್ಪುದೊಂದು ಪುಕಾರಂ |
ಪರಮಾಗೆ ಬಿಂದುವಂ ವಾ
ಕ್ಪರಿಣತರಿಂ ಸಿದ್ಧಮಾಯ್ತು ಪೆಂಪೆಂಬ ಪದಂ || 212 ||

ಪದಚ್ಛೇದಂ.—ಪಿರಿದು ಎಂಬ ಈ ರೇಫಕ್ಕೆ ಆಚರಿಪರ್, ಭಾವಾರ್ಥಂ ಅಪ್ಪುದು ಒಂದು ಪುಕಾರಂ ಪರಂ ಆಗೆ, ಬಿಂದುವಂ; ವಾಕ್ಪರಿಣತರಿಂ ಸಿದ್ಧಂ ಆಯ್ತು ಪೆಂಪು ಎಂಬ ಪದಂ.

ಅನ್ವಯಂ.—ಭಾವಾರ್ಥಂ ಅಪ್ಪುದು ಒಂದು ಪುಕಾರಂ ಪರಂ ಆಗೆ, ಪಿರಿದು ಎಂಬೀ ರೇಫಕ್ಕೆ ಬಿಂದುವಂ ಆಚರಿಪರ್; ವಾಕ್ಪರಿಣತರಿಂ ಪೆಂಪು ಎಂಬ ಪದಂ ಸಿದ್ಧಂ ಆಯ್ತು.

ಟೀಕು.—ಭಾವಾರ್ಥಂ = ಭಾವಾರ್ಥಂ; ಅಪ್ಪುದು = ಆಗುವುದು; ಒಂದು ಪುಕಾರಂ = ಒಂದು ಪುಪ್ರತ್ಯಯಂ; ಪರಮಾಗೆ = ಪರವಾಗೆ; ಪಿರಿದೆಂಬೀ ರೇಫಕ್ಕೆ = ಪಿರಿದು ಎಂಬ ಶಬ್ದದ ರೇಫೆಗೆ; ಬಿಂದುವಂ = ಸೊನ್ನೆಯಂ; ಆಚರಿಪರ್ = ಪೇೞ್ವರ್; ವಾಕ್ಪರಿಣತರಿಂ = ವಾಕ್ಪ್ರೌಢರಿಂದೆ; ಪೆಂಪೆಂಬ ಪದಂ = ಪೆಂಪು ಎಂಬ ಪದಂ; ಸಿದ್ಧಂ = ಪ್ರಸಿದ್ಧಂ; ಆಯ್ತು = ಆಯಿತ್ತು,

ವೃತ್ತಿ.—ಭಾವಾರ್ಥದ ಪುಕಾರಂ ಪರಮಾಗೆ, ಪಿರಿದೆಂಬ ರೇಫಕ್ಕೆ ಬಿಂದುವುಂ ಪೆಱಗಣೆತ್ವಕ್ಕೆತ್ವಮುಮಕ್ಕುಂ.

ಪ್ರಯೋಗಂ.—ಪೆಂಪು.—ಭಾವದೊಳ್ ಕಪ್ರತ್ಯಯಮುಂಟು. ಉಡುಕಂ ನಡುಕಮೆಂಬಂತೆ.

## ಸೂತ್ರಂ.

Besides, Abstract nouns are formed by changing the Verbal theme, viz. its penultimate; when ಇ, it may become ಎ; when ಉ, ಒ; when short, long; when ಡು, ಟು.—Also the Verbal theme itself may form an Abstract noun.

ಮೊದಲಿತ್ವಕ್ಕೆತ್ವಮುಮು
ತ್ವದೊಳೊತ್ವಮುಮೆಸೆವ ದೀರ್ಘಮುಂ ಚರಮಕ್ಕ |
ತ್ವದ ವಿಧಿಯುಂ ಧಾತುಗೆ ಭಾ
ವದೊಳಕ್ಕುಂ ಧಾತು ನಿಜದೆ ಭಾವಮದಕ್ಕುಂ || 213 ||

ಪದಚ್ಛೇದಂ.—ಮೊದಲ ಇತ್ವಕ್ಕೆ ಎತ್ವಮುಂ, ಉತ್ವದೊಳ್ ಒತ್ವಮುಂ, ಎಸೆವ ದೀರ್ಘಮುಂ, ಚರಮಕ್ಕೆ ಅತ್ವದ ವಿಧಿಯುಂ ಧಾತುಗೆ ಭಾವದೊಳ್ ಅಕ್ಕುಂ; ಧಾತು ನಿಜದೆ ಭಾವಂ ಅದು ಅಕ್ಕುಂ.

ಅನ್ವಯಂ.—ಧಾತುಗೆ ಭಾವದೊಳ್ ಮೊದಲ ಇತ್ವಕ್ಕೆ ಎತ್ವಮುಂ, ಉತ್ವದೊಳ್ ಒತ್ವಮುಂ, ಎಸೆವ ದೀರ್ಘಮುಂ, ಚರಮಕ್ಕೆ ಅತ್ವದ ವಿಧಿಯುಂ ಅಕ್ಕುಂ; ಧಾತು ಅದು ನಿಜದೆ ಭಾವಂ ಅಕ್ಕುಂ.

ಟೀಕು.—ಧಾತುಗೆ = ಧಾತುಗಳ್ಗೆ; ಭಾವದೊಳ್ = ಭಾವಾರ್ಥದಲ್ಲಿ; ಮೊದಲ = ಆದಿಯ; ಇತ್ವಕ್ಕೆ = ಇಕಾರಕ್ಕೆ; ಎತ್ವಮುಂ = ಎಕಾರಮುಂ; ಉತ್ವದೊಳ್ = ಉಕಾರದಲ್ಲಿ; ಒತ್ವ

ಮುಂ = ಒಕಾರಮುಂ; ಎಸೆವ = ಒಪ್ಪುವ; ದೀರ್ಘಮುಂ = ದೀರ್ಘವುಂ; ಚರಮಕ್ಕೆ = ಅಂತ್ಯಕ್ಕೆ; ಅತ್ವದ ವಿಧಿಯುಂ = ಅಕಾರದ ವಿಧಿಯುಂ; ಅಕ್ಕುಂ = ಅಪ್ಪುದು; ಧಾತು = ಧಾತು; ನಿಜದೆ = ನಿಜದಿಂದೆ; ಭಾವಂ = ಭಾವಾರ್ಥಂ; ಅಕ್ಕುಂ = ಆಗುವುದು.

ಭಾವದೊಳ್ಧಾತುವಿನ ಮೊದಲಿಕಾರಕ್ಕೇಕಾರಮುಂ ಉತ್ವದೊಳೋತ್ವಮುಂ ಹ್ರಸ್ವಕ್ಕೆ ದೀರ್ಘಮುಮಕ್ಕುಂ; ಧಾತುವಿನ ಕಡೆಯೊಳತ್ವಮಕ್ಕುಂ; ಸಹಜಧಾತುವುಂ ಭಾವಮಕ್ಕುಂ.

ಪ್ರಯೋಗಂ.—ಏತ್ವಕ್ಕೆ—(ಕಿಡು ಇಸು ಧಾತುಗಳ್ಗೆ) ಕೇಡು, ಏಸು.

ಒತ್ವಕ್ಕೆ—ತ್ರೋಡು; ಕೋಡು. ತೋಡೆಂಬುದು ಜೆಟ್ಟಿಯೊಳಮೆಣೆಯೊಳಮುಂಟು.

ದೀರ್ಘಕ್ಕೆ—ಈಡು; ಬೀಡು; ಸೂಡು.

ಕಡೆಯಣತ್ವಕ್ಕೆ—ಆಟಂ; ಪಾಟಂ; ತೀಟಂ; ನೋಟಂ.

ನಿಜಧಾತುಗ—ತಡೆ; ನಡೆ; ಬಿಸು; ಪೆರ್ಚು; ಮುರ್ಚು; ಉರ್ಕು; ಸೊರ್ಕು; ದಾಂಟು; ಕೂಂಟು.

## ಸೂತ್ರಂ.

ವೋಲ್ may form a Compound with ಅಂತೆ (ಅಂತೆವೋಲ್), or may become ವೊಲ್; following a word with final ಅ (and forming a kind of Compound) the Bindu is inserted and ವೋಲ್ becomes ಬೋಲ್.

ವೋಲೆಂಬಂತೆಂಬೆರಡುಂ
ಪೋಲಿಸುವೆಡೆಗಾದುವಂತೆವೋಲೆನಲಕ್ಕುಂ ।
ವೋಲೊಳ್ ಹ್ರಸ್ವಮುಮಕ್ಕುಂ
ಮೇಲತ್ವಕ್ಕುಂಟು ಬಿಂದು ವತ್ವಂ ಬತ್ವಂ ॥ 214 ॥

ಪದಚ್ಛೇದಂ.—ವೋಲ್ ಎಂಬ ಅಂತೆ ಎಂಬ ಎರಡುಂ ಪೋಲಿಸುವ ಎಡೆಗೆ ಆದುವು; ಅಂತೆವೋಲ್ ಎನಲ್, ಅಕ್ಕುಂ; ವೋಲೊಳ್ ಹ್ರಸ್ವಮುಂ ಅಕ್ಕುಂ; ಮೇಲೆ ಅತ್ವಕ್ಕೆ ಉಂಟು ಬಿಂದು, ವತ್ವಂ ಬತ್ವಂ.

ಅನ್ವಯಂ.—ಪೋಲಿಸುವೆಡೆಗೆ ವೋಲೆಂಬಂತೆಂಬೆರಡುಂ ಆದುವು ಅಂತೆವೋಲೆನಲ್, ಅಕ್ಕುಂ; ವೋಲೊಳ್ ಹ್ರಸ್ವಮುಂ ಅಕ್ಕುಂ; ಮೇಲೆ ಅತ್ವಕ್ಕೆ ಬಿಂದು ಉಂಟು, ವತ್ವಂ ಬತ್ವಂ.

ಟೀಕು.—ವೋಲಿಸುವೆಡೆಗೆ = ಪೋಲಿಸುವ ತಾವಿಂಗೆ; ವೋಲೆಂಬಂತೆಂಬೆರಡುಂ = ವೋಲ ಎಂಬ ಅಂತೆ ಎಂಬ ಎರಡುಂ; ಆದುವು = ಸಲುವಳಿಯಾದುವು; ಅಂತೆವೋಲೆನಲ್ = ಅಂತೆವೋಲ ಎಂದು, ಪೇಳಿಳ್; ಅಕ್ಕುಂ = ಆಗುವುದು; ವೋಲೊಳ್ = ವೋಲ್ ಎಂಬುದರಲ್ಲಿ; ಹ್ರಸ್ವಮುಂ = ಹ್ರಸ್ವಮುಂ; ಅಕ್ಕುಂ = ಆಗುವುದು; ಮೇಲೆ = ಆ ಮೇಲೆ; ಅತ್ವಕ್ಕೆ = ಅಕಾರಾಂತಶಬ್ದಕ್ಕೆ ಬಿಂದು = ಸೊನ್ನೆ; ಉಂಟು = ಉಂಟಾಗುವುದು; ವತ್ವಂ = ವಕಾರಂ; ಬತ್ವಂ = ಬಕಾರ ಆಗುವುದು.

ವೃತ್ತಿ.—ವೋಲೆಂಬುದುಮ್ ಅಂತೆ ಎಂಬುದುಮ್ ಉಪಮೆಯೊಳ್ ಪ್ರತ್ಯೇಕಂ ಪತ್ತುಗುಂ; ಅಂತೆವೋಲೆಂಬೆರಡುಮನೊಂದು ಮಾಡಿ ಪೇೞ್ದೊಡೆ ಪುನರುಕ್ತದೋಷಮಿಲ್ಲ; ವೋಲೆಂಬುದು ವಿಕಲ್ಪದಿಂ ಹ್ರಸ್ವಮುಮಕ್ಕುಂ ಅದಂತಕ್ಕೆ ಮುಂದೆ ವಕಾರಂ ಬಿಂದುವೆರಸುಬಕಾರಮಕ್ಕುಂ.

ಪ್ರಯೋಗಂ.—

ಜಲನಿಧಿಯು ವೋಲ್ ಗಭೀರಂ
ಬಲವೈರಿಯ ವೋಲ್ ಸಮಗ್ರವಿಭವಸನಾಥಂ |
ಕುಲಗಿರಿವೋಲ್ ನಿಷ್ಕಂಪಂ
ಬಲಿಯಂತೆವೊಲಧಿಕದಾನಿ ದಾನವಿನೋದಂ || ಕಂದಂ ||

ಗಿರಿಯಂತೆ ಬಿಣ್ಪಿದಂ ಸುರ
ಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ | ಕಂದಾರ್ಧಂ |
ರವಿಸುತನಂತೆವೊಲಧಿಕದಾನಿ
ಪರಾಕ್ರಮಿ ಸಿಂಗದಂತೆವೊಲ್ | ಕಂದಭಾಗಂ |
ಆ ಮುನೀಶ್ವರಂ ಶಾಂತರಸದ ಕಡಲ ವೋಲಿರ್ದಂ.

ನಿಜತೇಜಂ ನೀಳ್ದ ಕರ್ನೆಯ್ದಿಲ ವೊಲಿರೆ ತನುಚ್ಛಾಯೆಯಿಂ ಬ
ಯಂತೆ ವೊಲಧಿಕದಾನಿ ದಾನವಿನೋದಂ.

ಇಂದ್ರಂಬೋಲ್ ವಿಭವಯುತಂ
ಚಂದ್ರಂಬೋಲ್ ಕಾಂತಿವಂತನಾದಿತ್ಯಂಬೋಲ್ |
ಸಾಂದ್ರಪರಿಪೂರ್ಣತೇಜನು
ಪೇಂದ್ರಂಬೋಲ್ ನೀತಿನಿಪುಣನಾ ನರನಾಥಂ || ಕಂದಂ ||

ಸೂತ್ರಂ.

**The Author mentions two other Suffixes: ಆಯಿಲ (put as well to Saṁskṛita as Canarese bases) and ವಳಿ; and for further ones refers his readers to the writings of other grammarians.**

ಒದವಿರ್ಕುಂ ಸಂಸ್ಕೃತವೆಂ
ನದೆ ಕನ್ನಡವೆನ್ನದಾಯಿಲಪ್ರತ್ಯಯಮಂ |
ತದು ತಾನಿವು ಮೊದಲಾಗಱಿ
ವುದನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ || 215 ||

ಪದಚ್ಛೇದಂ.—ಒದವಿ ಇರ್ಕುಂ—ಸಂಸ್ಕೃತಂ ಎನ್ನದೆ ಕನ್ನಡಂ ಎನ್ನದೆ—ಆಯಿಲಪ್ರತ್ಯಯಂ ಅಂತು ಅದು ತಾಂ. ಇವು ಮೊದಲ್ ಆಗಿ ಅಱಿವುದು ಅನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ.

ಅನ್ವಯಂ. — ಸಂಸ್ಕೃತಂ ಎನ್ನದೆ ಕನ್ನಡಂ ಎನ್ನದೆ, ಆಯಿಲಪ್ರತ್ಯಯಂ ಅಂತು ಅದು ತಾಂ ಒದವಿರ್ಕುಂ. ಇವು ಮೊದಲ್ ಆಗಿ ಅನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ ಅಱಿವುದು.

ಟೀಕು.— ಸಂಸ್ಕೃತವೆನ್ನದೆ = ಸಂಸ್ಕೃತಶಬ್ದವೆನ್ನದೆ; ಕನ್ನಡವೆನ್ನದೆ = ಕರ್ಣಾಟಕಶಬ್ದವೆನ್ನದೆ; ಆಯಿಲಪ್ರತ್ಯಯಂ = ಆಯಿಲ ಎಂಬ ಪ್ರತ್ಯಯಂ; ಅಂತು = ಹಾಂಗೆ; ಅದು ತಾಂ = ತಾನದು; ಒದವಿರ್ಕುಂ = ಪ್ರಾಪ್ತಿಸಿರ್ಪುದು; ಇವು ಮೊದಲಾಗಿ = ಇವಾದಿಯಾಗಿ; ಅನ್ವಿತರ್ = ವಿದ್ವಾಂಸರ್; ಮಿಕ್ಕ ತದ್ಧಿತಪ್ರತ್ಯಯಮಂ = ಉೞಿದ ತದ್ಧಿತಪ್ರತ್ಯಯಂಗಳಂ; ಅಱಿವುದು = ತಿಳಿವುದು.

ವೃತ್ತಿ.—ಸಂಸ್ಕೃತವೆಂಬ ಕರ್ಣಾಟಕವೆಂಬ ವಿವರಣೆಯಿಲ್ಲದೆ ಆಯಿಲ ಪ್ರತ್ಯಯಮೆಲ್ಲಿಯುಂ ಪತ್ತುಗುಂ.

ಪ್ರಯೋಗಂ.—ಸಂಸ್ಕೃತಕ್ಕೆ, ಆಯಿಲಪ್ರತ್ಯಯಕ್ಕೆ—ಗಾಥಾಯಿಲಂ; ರೇಖಾಯಿಲಂ.

ಕನ್ನಡಕ್ಕೆ— ಓಜಾಯಿಲಂ; ಅಡ್ಡಾಯಿಲಂ; ಗೋಟಿಾಯಿಲಂ; ಪುಗ್ಗಾಯಿಲಂ (Mdb. Ms. ಪುಗರ್ಾಯಿಲಂ).

ಈ ಪೇೞ್ದಿವು ಮೊದಲಾಗಿ, ನಡೆವಳಿ ನುಡಿವಳಿ ಸಲ್ವಳಿ ಎಂಬಂತೆ, ವಳಿ ಪ್ರತ್ಯಯ ಮುಂತಾದುೞಿದ ಪ್ರತ್ಯಯಂಗಳಂ ಶಾಬ್ದಿಕರಿನನ್ವಿತರಱಿವುದು.

ಗದ್ಯಂ. — ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ನಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ತದ್ಧಿತಪ್ರತ್ಯಯನಿರೂಪಣಮೆಂಬ ಚತುರ್ಥಸಂಧಿ ಸಂಪೂರ್ಣಂ.

೪ನೆಯ ಅಧ್ಯಾಯಂ ಸಮಾಪ್ತಂ.



# ೫ನೆಯ ಅಧ್ಯಾಯಂ. V. CHAPTER.

## ಆಖ್ಯಾತಪ್ರಕರಣಂ.

## ON THE CONJUGATION OF VERBS.

### ಸೂತ್ರಂ.

ಕ್ರಿಯೆಯರ್ಥದ ಮೂಲಂ ಪ್ರ
ತ್ಯಯರಹಿತಂ ಧಾತುವದನಭಾವಕ್ರಿಯೆಯೊ
ಳ್ನಿಯತಂ ನಿಶ್ಚಯಿಪುದು ಬುಧ
ಚಯಮಾ ಧಾತುಗೆ ವಿಭಕ್ತಿಯಾಱಾಗಿರ್ಕುಂ || 216 ||

**The basis (ಮೂಲಂ) of a verb's meaning (ಕ್ರಿಯಾರ್ಥಂ) is that form of the verb which has no suffixes (ಪ್ರತ್ಯಯಂ, ವಿಭಕ್ತಿ); it is called the Root or Theme (ಧಾತು). This is found when the suffix ಅಂ of the 3rd Person Masculine Singular of the Negative (ಪ್ರತಿಷೇಧಂ) is removed [1].—There are 6 Personal Suffixes (ಪುರುಷವಿಭಕ್ತಿ, excepting the specific feminine and neuter ones).**

ಪದಚ್ಛೇದಂ.—ಕ್ರಿಯೆಯ ಅರ್ಥದ ಮೂಲಂ ಪ್ರತ್ಯಯರಹಿತಂ ಧಾತು; ಅದಂ ಅಭಾವಕ್ರಿಯೆಯೊಳ್ ನಿಯತಂ ನಿಶ್ಚಯಿಪುದು ಬುಧಚಯಂ; ಆ ಧಾತುಗೆ ವಿಭಕ್ತಿ ಆಱು ಆಗಿ ಇರ್ಕುಂ.

ಅನ್ವಯಂ.—ನಿಯತಂ ಬುಧಚಯಂ ನಿಶ್ಚಯಿಪುದು ಎಂಬುದನ್ವಯಂ.

ಟೀಕು.—ಕ್ರಿಯೆಯ = ಕ್ರಿಯೆಯ; ಅರ್ಥದ = ಅರ್ಥಕ್ಕೆ; ಮೂಲಂ = ಮೊದಲಾದುದು; ಪ್ರತ್ಯಯ = ವಿಭಕ್ತಿಯಿಂದೆ; ರಹಿತಂ = ವಿರಹಿತವಾದುದು; ಧಾತು = ಧಾತುವೆನಿಸುವುದು; ಅದಂ = ಆ ಧಾತುವಂ; ಅಭಾವಕ್ರಿಯೆಯೊಳ್ = ಪ್ರತಿಷೇಧದ ಕ್ರಿಯೆಯಲ್ಲಿ; ನಿಯತಂ = ಕಟ್ಟಾಗಿ; ಬುಧಚಯಂ = ವಿದ್ವತ್ಸಮೂಹಂ; ನಿಶ್ಚಯಿಪುದು = ನಿಶ್ಚಯಿಸುವುದು; ಆ ಧಾತುಗೆ = ಆ ಧಾತುಗಳ್ಗೆ; ವಿಭಕ್ತಿ = ಪ್ರತ್ಯಯಂ; ಆಱಾಗಿ = ಆಱು ತೆಱನಾಗಿ; ಇರ್ಕುಂ = ಇರ್ಪುದು.

---

[1] **and an elided ಉ restituted.**

ವೃತ್ತಿ.—ಕ್ರಿಯಾರ್ಥದ ಮೂಲಂ ವಿಭಕ್ತಿರಹಿತಮುಂ ಧಾತುವೆಂಬುದು; ಆ ಧಾತುವಂ, ಪ್ರತಿಷೇಧಕ್ರಿಯೆಯ ವಿಭಕ್ತಿಯಂ ಕಳೆಯೆ, ಕಾಣಲಕ್ಕುಂ; ಆ ಧಾತುಗಳ್ಗೆ ವಿಭಕ್ತಿಗಳಾಱಿಂಗಿರ್ಪುವು.

ಪ್ರಯೋಗಂ.—ಧಾತು ನಿಶ್ಚಯಕ್ಕೆ—ಮಾಡಿದಂ ಎಂಬ ಕ್ರಿಯೆಗೆ ಪ್ರತಿಷೇಧಮಾಗೆ, ಮಾಡಂ ಎಂದಿರ್ಪುದು; ಅಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆಯೆ, ಮಾಡು ಎಂದೆ ನಿಲ್ವುದು. ಈ ತೆಱದಿಂ—ಕೂಡು, ನೋಡು, ತೀಡು, ಕಾಡು, ಸೂಡು ಎಂಬಿವಾದಿಯಾಗಱಿವುದು.[1]

## ಸೂತ್ರಂ.

The 6 Suffixes for the 3 Persons (ಪುರುಷಂ) are: *a.*, for the 2 first persons (ಉತ್ತಮಪುರುಷಂ): ಎನ್, ಎವು; *b.*, for the 2 second persons (ಮಧ್ಯಮಪುರುಷಂ): ಅಯ್, ಇರ್; *c.*, for the 2 third persons (ಪ್ರಥಮಪುರುಷಂ): ಅಮ್, ಅರ್.

ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕವಚನದೊಳ್ಪ್ರತ್ಯೇಕಂ
ಸಮನಿಸೆ ಯುಗಳತೆಯಾಖ್ಯಾ
ತಮಾರ್ಗದೊಳ್ನೆಲಸಿ ನಿಂದ ಪುರುಷತ್ರಯಕಂ ‖ 217 ‖

ಪದಚ್ಛೇದಂ.—ಅಮ್, ಅರ್, ಅಯ್, ಇರ್, ಎನ್ ಎವುಗಳ್ ಅಕ್ಕುಂ ಕ್ರಮದೆ ಏಕಾನೇಕವಚನದೊಳ್, ಪ್ರತ್ಯೇಕಂ ಸಮನಿಸೆ ಯುಗಳತೆ, ಆಖ್ಯಾತಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ.

ಅನ್ವಯಂ.—ಆಖ್ಯಾತಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ ಕ್ರಮದೆ ಏಕಾನೇಕವಚನದೊಳ್, ಪ್ರತ್ಯೇಕಂ ಯುಗಳತೆ ಸಮನಿಸೆ, ಅಮರಯಿರೆನೆವುಗಳ್ ಅಕ್ಕುಂ.

ಟೀಕು.—ಆಖ್ಯಾತಮಾರ್ಗದೊಳ್ = ಕ್ರಿಯಾಪದಸಿದ್ಧಿಯಂ ಮಾಡುವಾಖ್ಯಾತಮಾರ್ಗದಲ್ಲಿ; ನೆಲಸಿ = ನೆಲೆಗೊಂಡು; ನಿಂದ ಪುರುಷತ್ರಯಕಂ = ನಿಂದ ಪ್ರಥಮಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂಬ ಪುರುಷತ್ರಯಕ್ಕಯುಂ; ಕ್ರಮದೆ = ತಱುವಾಯಿಂದೆ; ಏಕಾನೇಕವಚನದೊಳ್ = ಏಕವಚನ ಬಹುವಚನಂಗಳಲ್ಲಿ; ಪ್ರತ್ಯೇಕಂ = ಬೇಱೆ ಬೇಱೆ; ಯುಗಳತೆ = ಎರಡೆರಡಾಗಿ; ಸಮನಿಸೆ = ಪ್ರಾಪ್ತಿಸೆ; ಅಮರಯಿರೆನೆವುಗಳ್ = ಅಮ್ ಅರ್, ಅಯ್ ಇರ್, ಎನ್ ಎವು ಎಂಬಾಱು ವಿಭಕ್ತಿಗಳ್; ಅಕ್ಕುಂ = ಅಪ್ಪುವು.

---

[1] This does not put in question the existence of verbal-themes ending in half-consonants.

ವೃತ್ತಿ.—ಆಖ್ಯಾತದೊಳ್ವರ್ತಿಪ ಪ್ರಥಮಮಧ್ಯಮೋತ್ತಮಪುರುಷಂಗಳ್ಗೆ ಅಮ್ ಅರ್, ಅಯ್ ಇರ್, ಎನ್ ಎವು ಎಂಬಾಱು ವಿಭಕ್ತಿಗಳ್ ಪರಿವಿಡಿಯಿಂ ದೇಕವಚನ ಬಹುವಚನಂಗಳೊೞ್ಪ್ರತ್ಯೇಕಮೆರಡೆರಡೊಂದಾಗಿ ಪತ್ತುವುವು.

ಪ್ರಯೋಗಂ.—ಅಂಗೆ—ಎಸೆದಂ, ಬೆಸೆದಂ, ಒಸೆದಂ, ಶೀಘ್ರಂ ಚಕ್ರಾಯುಧಂ ಎತ್ತಿ ನಡೆದಂ ವೈರೀಭಕಂಠೀರವಂ, ನುಡಿದಂ, ಒಗೆದಂ, ಒಗೆದಂ.

ಅರ್ಗೆ—ಆಡಿದರ್, ಪಾಡಿದರ್ ಕವಿಗಳ್ ಕೃತಿಬಂಧದೊಳ್ ಅಲ್ತೆ, ಕಟ್ಟಿದರ್, ಮುಟ್ಟಿದರ್, ಮೆಟ್ಟಿದರ್.

ಅಯ್ಗೆ—ತೆಗೆದಯ್ ಮೋಕ್ಷದ ಬಟ್ಟೆಯುಂ, ಬಗೆದಯ್, ಭೀಮ ಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್, ನೋಡಿದಯ್, ಪಾಡಿದಯ್, ಆಡಿದಯ್.

ಇರ್ಗೆ—ಪೊರ್ದುವಿರ್, ತಿರ್ದುವಿರ್; ವಿಹಂಗಮವಿಂದಿಂದೆ ಕಬ್ಬಿನಿನೇಱಿಪಿರ್.

ಎನ್ಗೆ—ಅನುರ್ಚಿದೆನ್; ನಿಮಿರ್ಚಿದೆನ್; ಜನೋದಯಂಗಿದಂ ಪೇೞಿಲೊಡರ್ಚಿದೆನ್; ಬಣ್ಣಿಪೆನ್ ಆನ್ ಜಯದಂಕಕಾಱಿನಂ.

ಎವುಗೆ—ಕೇಳ್ದೆವು; ಕಂಡೆವು; ಉಸಿರ್ದೆವು; ಆಂಪೆವು ಕೃಪನಂ ಸಂಗ್ರಾಮದೊಳ್; ಆಂಪೆವು ಅರಾತಿಯಂ ಎಂಬಂತೆ.

## ಸೂತ್ರಂ.

The Root ಬೆಳೆ is used only literally; when speaking figuratively, ಬಳೆ is used instead. (Shown by their respective abstract nouns.)

ಬೆಳೆಯೆಂಬ ಧಾತು ಸಸ್ಯಾ
ವಳಿಯೊಳ್ಬಳೆಯೆಂಬ ಧಾತು ಮಿಕ್ಕೆಡೆಯೊಳ್ಸಂ।
ಗಳಿಕುಂ ತಿಳಿಯಲ್ಬರ್ಪುದು
ಬೆಳೆಬಳವಿಗಳೆಂಬ ಭಾವವಚನದ್ವಯದೊಳ್ ॥218॥

ಪದಚ್ಛೇದಂ.—ಬೆಳೆ ಎಂಬ ಧಾತು ಸಸ್ಯಾವಳಿಯೊಳ್, ಬಳೆ ಎಂಬ ಧಾತು ಮಿಕ್ಕ ಎಡೆಯೊಳ್ ಸಂಗಳಿಕುಂ; ತಿಳಿಯಲ್ ಬರ್ಪುದು ಬೆಳೆ ಬಳವಿಗಳ್ ಎಂಬ ಭಾವವಚನದ್ವಯದೊಳ್.

ಅನ್ವಯಂ.—ಸಸ್ಯಾವಳಿಯೊಳ್ ಬೆಳೆ ಎಂಬ ಧಾತು, ಮಿಕ್ಕೆಡೆಯೊಳ್ ಬಳೆ ಎಂಬ ಧಾತು ಸಂಗಳಿಕುಂ; ಬೆಳೆ ಬಳವಿಗಳ್ ಎಂಬ ಭಾವವಚನದ್ವಯದೊಳ್ ತಿಳಿಯಲ್ ಬರ್ಪುದು.

ಟೀಕು.—ಸಸ್ಯಾವಳಿಯೊಳ್ = ಸಸಿಗಳ ಸಮೂಹದಲ್ಲಿ; ಬೆಳೆಯೆಂಬ ಧಾತು = ಬೆಳೆ ಎಂಬ ಧಾತು; ಸಂಗಳಿಕುಂ = ಬರ್ಪುದು; ಮಿಕ್ಕೆಡೆಯೊಳ್ = ಸಸ್ಯಾವಳಿಯಲ್ಲದುಟಿದ ತಾವಿನಲ್ಲಿ; ಬಳೆಯೆಂಬ ಧಾತು = ಬಳೆ ಎಂಬ ಧಾತು ಬರ್ಪುದು; ಬೆಳೆ ಬಳವಿಗಳ್ = ಬೆಳೆ ಬಳವಿಗಳೆಂದು; ಎಂಬ ಭಾವವಚನದ್ವಯದೊಳ್ = ಎಂಬ ಭಾವವಚನಂಗಳೆರಡಱಲ್ಲಿ; ತಿಳಿಯಲ್ಬರ್ಪುದು = ಅಱಿಯಲ್ಬರ್ಪುದು.

ವೃತ್ತಿ.—ಸಸ್ಯಾದಿತರುಲತಾವಳಿಯ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬೆಳೆಯೆನಲೇೞ್ಕುಂ, ಉೞಿದ ವಸ್ತುವಿನ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬಳೆಯೆಂದಕ್ಕುಂ. ಬೆಳೆಯೆಂಬ ಧಾತುವಿನ ಭಾವವಚನಂ ಬೆಳೆಯೆಂದುಂ ಬೆಳಸೆಂದುಮಿರ್ಪುದು; ಬಳೆಯೆಂಬ ಧಾತುವಿನ ಭಾವವಚನಂ ಬಳವಿಯೆಂದಿರ್ಪುದು.

ಪ್ರಯೋಗಂ.—ನೆಲ್ಲುಂ ಕೌಂಗುಂ ಮಾವುಂ ಮಲ್ಲಿಗೆಯುಂ ಬೆಳೆವುವಲ್ಲಿ ಕಬ್ಬಿನ ರಸದಿಂ. ಭಾಗಕ್ಕೆ—

ಬೆಳೆಗಳ್ಕಳನಂ ಪೊಕ್ಕುವು;
ಬೆಳಸುಂ ಕುಂದದು ಪಾೞಿನೊಳೆಂದುಂ.

ಬಳೆಯೆಂಬುದರ್ಕೆ—ಮೃದುಮುಗ್ಧಾಲಾಪಂ ಬಳೆದಂ ಸರಸ್ವತೀ ಮಣಿಹಾರಂ.

ಭಾವಕ್ಕೆ—ತನುಜನ ಬಳವಿಯನೆ ನೋಡಿ
ಜನಕಂ ನಲಿದಂ || ಕಂದಭಾಗಂ ||

## ಸೂತ್ರಂ.

Also Adjectives, Pronouns, Numerals and other Nouns are conjugated by adding the Personal Suffixes.

ವಿನುತಗುಣವಚನದೊಳ್ಸ
ರ್ವನಾಮದೊಳ್ಸಂಖ್ಯೆಯೊಳ್ಪ್ರವರ್ತಿಪುವಾಖ್ಯಾ
ತನಿಯುಕ್ತವಿಭಕ್ತಿಗಳವು
ಘನತರಸಂಸ್ಕೃತಗುಣೋಕ್ತಿಯೊಳಮುಮರ್ದಿರ್ಕುಂ
|| 219 ||

ಪದಚ್ಛೇದಂ.—ವಿನುತಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವು ಆಖ್ಯಾತನಿಯುಕ್ತವಿಭಕ್ತಿಗಳ್ ಅವು; ಘನತರಸಂಸ್ಕೃತಗುಣೋಕ್ತಿಯೊಳಂ ಅಮರ್ದಿರ್ಕುಂ.

ಅನ್ವಯಂ. — ವಿನುತಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಆಖ್ಯಾತನಿಯುಕ್ತವಿಭಕ್ತಿಗಳ್ ಅವು ಪ್ರವರ್ತಿಪುವು; ಘನತರಸಂಸ್ಕೃತಗುಣೋಕ್ತಿಯೊಳಂ ಅಮರ್ದುರ್ಇರ್ಕುರ್ಂ.

ಟೀಕು.— ವಿನುತ = ಕೊಂಡಾಡಲ್ಪಟ್ಟ; ಗುಣವಚನದೊಳ್ = ಗುಣವಚನಂಗಳಲ್ಲಿ; ಸರ್ವನಾಮದೊಳ್ = ಸರ್ವನಾಮಂಗಳಲ್ಲಿ; ಸಂಖ್ಯೆಯೊಳ್ = ಸಂಖ್ಯಾವಾಚಿಗಳಲ್ಲಿ; ಆಖ್ಯಾತ = ಆಖ್ಯಾತದಲ್ಲಿ; ನಿಯುಕ್ತ = ಕೂಡಲ್ಪಟ್ಟ; ವಿಭಕ್ತಿಗಳ್ = ಪ್ರತ್ಯಯಂಗಳ್; ಅವು = ಅವು; ಪ್ರವರ್ತಿಪುವು = ಪ್ರವರ್ತಿಸುವುವು; ಘನತರ = ದೊಡ್ಡಿತ್ತಾದ; ಸಂಸ್ಕೃತ = ಸಂಸ್ಕೃತದ; ಗುಣೋಕ್ತಿಯೊಳಂ = ಗುಣವಚನಂಗಳಲ್ಲಿಯುಂ; ಅಮರ್ದುರ್ = ಪೊರ್ದುರ್ಗೆಯಾಗಿ; ಇರ್ಕುರ್ಂ = ಇಪ್ಪುವು.

ವೃತ್ತಿ.—ಗುವಚನದೊಳಂ ಸರ್ವನಾಮದೊಳಂ ಸಂಖ್ಯೆಯೊಳಂ ಸಂಸ್ಕೃತಗುಣೋಕ್ತಿಯೊಳಮ್ ಆಖ್ಯಾತವಿಭಕ್ತಿಗಳ್ವರ್ತಿಸುಗುಂ.

ಪ್ರಯೋಗಂ.—ಕನ್ನಡಗುಣವಚನಕ್ಕೆ—ಒಳ್ಳಿದಂ, ಒಳ್ಳಿದರ್; ಒಳ್ಳಿದಯ್, ಒಳ್ಳಿದಿರ್, ಒಳ್ಳಿದರಿರ್; ಒಳ್ಳಿದೆನ್, ಒಳ್ಳಿದೆವು, ಒಳ್ಳಿದರೆವು.

ಸರ್ವನಾಮಕ್ಕೆ—ಪೆಱಂ, ಪೆಱರ್; ಪೆಱಯ್, ಪೆಱಿರ್, ಪೆಱರಿರ್; ಪೆಱೆನ್, ಪೆಱನೆನ್, ಪೆಱೆವು, ಪೆಱರೆವು.

ಸಂಖ್ಯೆಗೆ—ಒರ್ವಂ, ಒರ್ವರ್; ಒರ್ವಯ್. ಒರ್ವಿರ್, ಒರ್ವರಿರ್; ಒರ್ವೆನ್, ಒರ್ವನೆನ್; ಒರ್ವೆವು, ಒರ್ವರೆವು.

ಸಂಸ್ಕೃತಗುಣವಚನಕ್ಕೆ—ಉದ್ಧತಂ, ಉದ್ಧತರ್; ಉದ್ಧತಯ್, ಉದ್ಧತರಿರ್; ಉದ್ಧತನೆನ್, ಉದ್ಧತರೆವು.

ಸಮುಚ್ಚಯದಿಂ ಗುಣವಚನಮಲ್ಲದಲ್ಲಿಯುಮುಂಟು—ಕವಿಕೇಶವನೆಂ; ಮಲ್ಲಿಕಾರ್ಜುನಸುತನೆಂ; ದೌಹಿತ್ರನೆಂ; ಪೆಂಡತಿಯೆಂ.

### ಸೂತ್ರಂ.

ಆದೇಶವಾಗಿ ಮುಂಗ
ಳ್ಗಾದರುವದು ನಿಲ್ಕುಮಿರ್ಗಮೆವುಗಂ ಪೂರ್ವ |
ಕ್ಕಾದಿಗೆ ನತ್ವಮದೆನ್ಪರ
ಮಾದೊಡೆ ಕೆಲರಿಂದೆ ಬಿಂದುವೆವುವಿನ ವ್ಯಕ್ತಂ ||220||

Regarding S. 219 it is to be remarked that before the Suffixes ಇರ್ and ಎವು the syllable ಅರ್ may be inserted in Canarese words; when Saṁskṛita Adjectives (or Nouns) are conjugated this must be done. Further, before ಎನ್ the letter ನ (ನ್) may be inserted.—The ಎವು (1st Person Plural) may become ಎಂ (*i. e.* like the 1st Person Singular).

**ಪದಚ್ಛೇದಂ.**—ಆದೇಶಂ ಆಗಿ ಮುಂಗಳ್ಗೆ ಆದ ಅರು ಅದು ನಿಲ್ಕುಂ ಇರ್ಗಂ ಎವುಗಂ ಪೂರ್ವಕ್ಕೆ; ಆದಿಗೆ ನತ್ವಂ ಅದು ಎನ್ ಪರಂ ಆದೊಡೆ; ಕೆಲರಿಂದೆ ಬಿಂದು ಎವುವಿನ ವತ್ವಂ.

**ಅನ್ವಯಂ.**—ಮುಂಗಳ್ಗೆ ಆದೇಶಂ ಆಗಿ ಆದ ಅರು ಅದು ಇರ್ಗಂ ಎವುಗಂ ಪೂರ್ವಕ್ಕೆ ನಿಲ್ಕುಂ; ಎನ್ ಅದು ಪರಂ ಆದೊಡೆ ಆದಿಗೆ ನತ್ವಂ; ಕೆಲರಿಂದೆ ಎವುವಿನ ವತ್ವಂ ಬಿಂದು.

**ಟೀಕು.**—ಮುಂಗಳ್ಗೆ = ಮುಂನಿನ ಗಳಾಗಮಕ್ಕೆ; ಆದೇಶಮಾಗಿ = ಆದೇಶವಾಗಿ; ಆದರು = ಆದ ಅರು (ಅರ್) ಆಗಮಂ; ಅದು = ಅದು; ಇರ್ಗಂ = ಇರೆಂಬಾಖ್ಯಾತವಿಭಕ್ತಿಗಂ; ಎವುಗಂ = ಎವು ಎಂಬಾಖ್ಯಾತವಿಭಕ್ತಿಗಂ; ಪೂರ್ವಕ್ಕೆ = ಮೊದಲ್ಗೆ; ನಿಲ್ಕುಂ = ಆಗಮವಾಗಿ ನಿಲ್ವುದು; ಎನ್ = ಎನ್ ಎಂಬುದು; ಅದು = ಅದು; ಪರಮಾದೊಡೆ = ಪರವಾದೊಡೆ; ಆದಿಗೆ = ಮೊಡಲ್ಗೆ, ನತ್ವಂ = ನಕಾರವಪ್ಪುದು; ಕೆಲರಿಂದೆ = ಕೆಲಂಬರಿಂದೆ; ಎವುವಿನ = ಎವು ಎಂಬ ವಿಭಕ್ತಿಯ; ವತ್ವಂ = ವಕಾರಂ; ಬಿಂದು = ಸೊನ್ನೆಯಾಗುವದು.

**ವೃತ್ತಿ.**—ಪುರುಷಸ್ತ್ರೀವಿಷಯದೊಳ್ಬಹುವಚನದ ಗಳಾದೇಶಮಾಗಿ ಬಂದ ಅರ್ ಎಂಬುದು ಮಧ್ಯಮಪುರುಷದ ಇರ್ ಎಂಬುದಱಾದಿಯೊಳಮ್ ಉತ್ತಮಪುರುಷದೆವುವಿನಾದಿಯೊಳಂ ಕನ್ನಡದೊಳ್ವಿಕಲ್ಪದಿಂ ಪತ್ತುಗುಂ; ಸಂಸ್ಕೃತಗುಣವಚನದೊಳ್ನಿತ್ಯಂ; ಉತ್ತಮಪುರುಷದೆನ್ ಎಂಬುದಱಾದಿಗೆ ನತ್ವಮಕ್ಕುಂ.—ಎವುವಿನ ಉಕಾರಂ ಕೆಲರಿಂ ಬಿಂದುವಕ್ಕುಂ.

**ಪ್ರಯೋಗಂ.**—ಕನ್ನಡದೊಳ್ ವಿಕಲ್ಪದ ಅರ್ಗೆ—ಕೂರಿದರಿರ್ ಕಾಳೆಗದೊಳ್, ಕೂರಿದಿರ್; ನೇರಿದವಿರ್ ಕೂಡಿದವರೊಳೇನ್! ನೇರಿದಿರ್, ಪಿರಿಯರೆವು, ಪಿರಿಯೆವು, ಪಿರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ.

ಸಂಸ್ಕೃತದೊಳ್ ನಿತ್ಯದ ಅರ್ಗೆ—ಕುಲವೃದ್ಧರಿರ್, ಆಪ್ತರಿರ್, ಅತಿಬಲರಿರ್; ನಯವಿದರೆವು, ಸಹೋದರರೆವೆಂದೊಸೆದಾಳ್ವುದು ಭೃತ್ಯವಿತಾನಮಂ.

ನಕಾರಕ್ಕೆ—ಪಿರಿಯನೆನ್, ಅಸಿಯಂತೆವೊಲಸಿಯನೆನ್; ಆಂ ಪೆಱನೆನೆಂದು ಬಗೆಯಲಿವಿಾಗಳ್; ಆನ್ ಒರ್ವನೆನೊರ್ವನೆಂ ಸಮರಕೇಳಿಯೊಳ್; ಅತಿಚದುರನೆನ್; ಕಳಾಪಂಡಿತನೆನ್; ಕೃತಿಲಕ್ಷಣಾವಧಾನನೆನ್.

ಎವುವಿನೊಳ್ ಬಿಂದುವಿನ ವಿಕಲ್ಪಕ್ಕೆ—ನೋಡುವೆವು, ನೋಡುವೆಂ; ಪಾಡುವೆವು, ಪಾಡುವೆಂ; ಅವರಾರುಮೆಂಪಾಳ್ದನೆಡಱನಾಮೆ ತಿರ್ದುವೆಂ. ಏಕವಚನದೆಂಗಾದ ಬಿಂದುವುಮ್ ಆ ಬಹುವಚನದೆವುಗಾದ ಬಿಂದುವುಂ ತವ್ಮೊಳೇಕರೂಪಮಾಗಿರ್ಪುವು; ಅವಂ ಕ್ರಮಂಣದಿನಱವುದು—ಕೋಂಟೆಯುಂ ಪತ್ತುವೆಂ; ವ್ಯಾಕರಣಮನೆಲ್ಲರುಂ ಕೇಳ್ವೆಂ ತಿಳಿವಿಸಂ ಎಂಬಂತೆ.

## ಸೂತ್ರಂ.

ದದಪವಕಾರಂಗಳ್ತ
ಪ್ಪದೆ ಕಾಲತ್ರಯವಿಭಕ್ತಿಮೂಲದೊಳಕ್ಕುಂ ।
ದದಪಾದಿಗಿದಾಗಮವು
ಪ್ಪುದು ವತ್ವಕ್ಕಿಲ್ಲದುಂ ತ್ರಿವಚನಾನುಗತಂ ॥ 221 ॥

Of the 3 Tense-augments (ಕಾಲಾಗಮಂ) ದ is used for the Past (Imperfect), ದಪ for the Present, and ವ for the Future.—Verbs ending in ಉ insert ಇತ್ (ಇ) before ದ and ದಪ.

ಪದಚ್ಛೇದಂ.— ದ ॥ ದಪ ॥ ವಕಾರಂಗಳ್, ತಪ್ಪದೆ, ಕಾಲತ್ರಯವಿಭಕ್ತಿಮೂಲದೊಳ್ ಅಕ್ಕುಂ; ದದಪಾದಿಗೆ ಇದಾಗಮವುಂ ಅಪ್ಪುದು; ವತ್ವಕ್ಕೆ ಇಲ್ಲ; ಅದುಂ ತ್ರಿವಚನಾನುಗತಂ.

ಅನ್ವಯಂ.—ಕಾಲತ್ರಯವಿಭಕ್ತಿಮೂಲದೊಳ್, ತಪ್ಪದೆ, ದ ॥ ವಪ ॥ ವಕಾರಂಗಳ್ ಅಕ್ಕುಂ; ದದಪಾದಿಗೆ ಇದಾಗಮವುಂ ಅಪ್ಪುದು; ವತ್ವಕ್ಕೆ ಇಲ್ಲ; ಅದುಂ ತ್ರಿವಚನಾನುಗತಂ.

ಟೀಕು.—ಕಾಲತ್ರಯವಿಭಕ್ತಿಮೂಲದೊಳ್ = ಭೂತಕಾಲ ವರ್ತಮಾನಕಾಲ ಭವಿಷ್ಯತ್ಕಾಲಂಗಳೆಂಬ ಕಾಲತ್ರಯದ ವಿಭಕ್ತಿಗಳ ಮೊದಲಲ್ಲಿ; ತಪ್ಪದೆ = ತೊಲಗದೆ; ದದಪವಕಾರಂಗಳ್ = ದಕಾರ ದಪಕಾರ ವಕಾರಂಗಳ್; ಅಕ್ಕುಂ = ಅಪ್ಪುವು; ದದಪಾದಿಗೆ = ದಕಾರ ದಪಕಾರಂಗಳ ಮೊದಲ್ಗೆ; ಇದಾಗಮುಂ = ಇತ್ ಎಂಬಾಗಮವುಂ; ಅಪ್ಪುದು = ಉಕಾರಾಂತಧಾತುವಿಂಗೆ ಆಗುವುದು; ವತ್ವಕ್ಕೆ = ಭವಿಷ್ಯಂತಿಯ ವಕಾರಕ್ಕೆ; ಇಲ್ಲ = ಇದಾಗಮವುಂ ಬಾರದು; ಅದುಂ = ಆ ಇದಾಗಮವುಂ; ತ್ರಿವಚನ = ಏಕವಚನ ದ್ವಿವಚನ ಬಹುವಚನಗಳೆಂಬ ತ್ರಿವಚನಂಗಳಲ್ಲಿ; ಅನುಗತಂ = ಎಯ್ದಲ್ಪಡುವುದು.

ವಿಚಾರಂ.—ಉಕಾರಾಂತಧಾತುಗಳ್ಗೆ ಇದಾಗಮುಂ ಬರ್ಪುದು.

ವೃತ್ತಿ.— ದ ದಪ ವ ಎಂಬಾಗಮಂಗಳ್ ಪೋದ ವರ್ತಿಪ ಬರ್ಪ ಕಾಲತ್ರಯಂಗಳ್ಗೆ ಸೂಚಕಂಗಳಾಗಿ, ಪುರುಷತ್ರಯಂಗಳ ವಿಭಕ್ತಿಗಳ ಮೊದಲೊಳಪ್ಪುವು; ದ ದಪಂಗಳ ಪೆಱಗೆ, ವಚನತ್ರಯದ ಮೇರೆಯಿಲ್ಲದೆ, ಉಕಾರಾಂತಕ್ಕೆ ಇದಾಗಮಮಕ್ಕುಂ; ಭವಿಷ್ಯಂತಿಯ ವಕಾರಕ್ಕೆಯುಮ್ ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಪರಮಾದ ದ ದಪಂಗಳ್ಗೆಯುಮ್ ಇದಾಗಮಮಿಲ್ಲ.

ಪ್ರಯೋಗಂ.— ದಕಾರಕ್ಕೆ—ಪಡೆದಂ ರಜೋಧಿಕಂ ಬಿಱಿಪೆಡೆವಣಿಯಂ ಫಣಿಯ. ಒರ್ಬನೆ ಗೆಲ್ದಂ. ಕಡಿದಂ, ಇಡಿದಂ, ಕೇಳ್ದಂ.

ದಪಕ್ಕೆ— ಎತ್ತಿದಪಂ, ಒತ್ತಿದಪಂ; ವಸಂತರಾಜನೆತ್ತಿಂದಪನಿಂದು ನಾಳೆ ಬರ್ದುಕಿಲ್ಲ ವಿಯೋಗಿಗೆ. ಮಾಡಿದಪಂ ಖಳಸಮಿತಿಗೆ ಕೇಡಂ.

ವಕಾರಕ್ಕೆ— ಕುಡುವಂ, ಉಡುವಂ, ನಡುವಂ. ಬಿಡುವಂತೆ ಕೈದುವಿಡಿವಂ. ವಿಷ್ಣು ಪಡೆವಂ ಮತ್ರ್ಯಾರ್ಥತಾರಕ್ಕೆ.

ಉಕಾರಾಂತಕ್ಕೆ ಇದಾಗಮಮಪ್ಪುದರ್ಕೆ — ನೋಡಿದಂ, ಬೇಡಿದಂ, ತೂಗಿದಂ, ಬಾಗಿದಂ; ಒರ್ಬನೆ ಮತ್ಸ್ಯಸಂತಳುರೆ ತಾಗಿದನಾಜಿಯೊಳ್. ಆ ನೃಪತಿ ಕೆಡಿಸಿದನಾ ನಾಡಂ. ಸಾರಿಸಿದಂ; ಅಂಜಿಸಿದಪಂ ಮೂಲೋಕಮನ್ನಾರಕಂ; ಮಾಡಿದಪಂ, ಎತ್ತಿದಪಂ; ಸಾಧಿಸಿದಪನಿಂತು ಕನ್ನು ವಿರಹಿವ್ರಜಮಂ.

ಭವಿಷ್ಯಂತಿಯ ವಕಾರಕ್ಕೆಯುಂ ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಇದಾಗಮಮಿಲ್ಲದುದರ್ಕೆ—ಬಿಗಿವಂ, ಜಿರಿವಂ, ಮುಚ್ಚುವಂ; ಇನಂ ತುಹಿನಾದ್ರೀನ್ದ್ರಮನೊತ್ತುಗೊಂಡು ನಡೆವಂ; ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ;—ಪಡೆದಂ, ಪಡೆದಪಂ; ಸಿಡಿದಂ, ಸಿಡಿದಪಂ; ಕಟಿಲ್ದಂ, ಕಟಿಲ್ದಪಂ.

## ಸೂತ್ರಂ.

The Negative with its Personal suffixes is used for all tenses, even also for the Past.

ಪರಿಭಾವಿಸೆ ಕಾಲತ್ರಯ
ಪರಿಣಾಮಿಗಳೆನಿಸಿ ನೆಗಟ್ದ ಮೂಱುಂ ಕ್ರಿಯೆಯೊಳ್ ।
ನಿರುತಂ ಪ್ರತಿಷೇಧಕ್ರಿಯೆ
ಬರೆ ಭೂತಾರ್ಥದೊಳೆ ಸಲ್ವುದೆಂಬರ್ಪಿರಿಯರ್ ॥222॥

ಪದಚ್ಛೇದಂ. — ಪರಿಭಾವಿಸೆ, ಕಾಲತ್ರಯಪರಿಣಾಮಿಗಳ್ ಎನಿಸಿ ನೆಗಟ್ದ ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ, ಭೂತಾರ್ಥದೊಳೆ ಸಲ್ವುದು ಎಂಬರ್ ಪಿರಿಯರ್.

ಅನ್ವಯಂ.—ಪ್ರತಿಷೇಧಕ್ರಿಯೆ ಬರೆ, ಪಿರಿಯರ್ ಭೂತಾರ್ಥದೊಳೆ ಸಲ್ವುದು ಎಂಬರ್.

ಟೀಕು. —ಪರಿಭಾವಿಸೆ = ವಿಚಾರಿಸೆ; ಕಾಲತ್ರಯದ = ಕಾಲತ್ರಯದಲ್ಲಿ; ಪರಿಣಾಮಿಗಳ್ = ಪರಿಣಾಮವುಳ್ಳವು; ಎನಿಸಿ = ಎನಿಸಿ; ನೆಗಟ್ದ ಮೂಱುಂ ಕ್ರಿಯೆಯೊಳ್ = ಪ್ರಸಿದ್ಧವಡೆದ ಮೂಱೂ ಕ್ರಿಯೆಗಳಲ್ಲಿ; ನಿರುತಂ = ನಿಶ್ಚಯವಾಗಿ; ಪ್ರತಿಷೇಧಕ್ರಿಯೆ = ಪ್ರತಿಷೇಧಕ್ರಿಯೆ; ಬರೆ = ಬಂದೊಡೆ; ಪಿರಿಯರ್ = ವಿದ್ವಾಂಸರ್; ಭೂತಾರ್ಥದೊಳೆ = ಭೂತಕಾಲದರ್ಥದಲ್ಲಿಯೆ; ಸಲ್ವುದು = ಸಲ್ವುದೆಂದು; ಎಂಬರ್ = ಪೇಳ್ವರ್.

ವೃತ್ತಿ.—ಕಾಲತ್ರಯಂಗಳಂ ಪೇೞ್ವ ಮೂಱು ಕ್ರಿಯಾಪದಂಗಳಲ್ಲಿ ಪ್ರತಿಷೇಧಕ್ರಿಯೆ ಬರೆ, ಭೂತವತಿಯಾಗಿಯೇ ಸಲ್ವುದು.

ಪ್ರಯೋಗಂ.—ಮಾಡಿದನೆಂಬುದರ್ಕೆ ಮಾಡಂ, ಮಾಡಿದಪನೆಂಬುದರ್ಕಂ ಮಾಡಂ.

ಸೂತ್ರಂ.

Each of the 3 Persons, when by itself with its respective Pronoun, is quite independent.

ಪುರುಷತ್ರಯಮುಂ ಸ್ವಾರ್ಥೋ-
ಚ್ಚರಿತಂಗಳ್ ಯುಗಪದುಕ್ತಿಗುತ್ತಮಪುರುಷಂ ।
ಪರಮದನುೞಿದಿರೆ ಮಧ್ಯಮ
ಪುರುಷಂ ಕ್ರಮಗಣನಮಿರೆಯುಮೊಲ್ದಂತಿರೆಯುಂ
॥ 223 ॥

When, in a sentence, all the 3 Persons (Indicated by their personal pronouns) are made the Subject, the Predicate stands in the 1st Person Plural; when the 2nd and 3rd Persons only form the Subject, the Predicate is put in the 2nd Person Plural.

ಪದಚ್ಛೇದಂ.—ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್; ಯುಗಪದುಕ್ತಿಗೆ ಉತ್ತಮಪುರುಷಂ ಪರಂ; ಅದಂ ಉೞಿದು ಇರೆ, ಮಧ್ಯಮಪುರುಷಂ; ಕ್ರಮಗಣನಂ ಇರೆಯುಂ ಒಲ್ದು ಅಂತೆ ಇರೆಯುಂ.

ಅನ್ವಯಂ.—ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್; ಕ್ರಮಗಣನಂ ಇರೆಯುಂ ಒಲ್ದಂತೆ ಇರೆಯುಂ, ಯುಗಪದುಕ್ತಿಗೆ ಉತ್ತಮಪುರುಷಂ ಪರಂ; ಅದಂ ಉೞಿದು ಇರೆ ಮಧ್ಯಮಪುರುಷಂ.

ಟೀಕು.—ಪುರುಷತ್ರಯಮುಂ = ಪ್ರಥಮಮಧ್ಯಮೋತ್ತಮಂಗಳೆಂಬ ಪುರುಷತ್ರಯಮುಂ; ಸ್ವಾರ್ಥೋಚ್ಚರಿತಂಗಳ್ = ಸ್ವತಂತ್ರಂಗಳಾಗಿ ತಮ್ಮರ್ಥದಲ್ಲಿ ಉಚ್ಚರಿಸಲ್ಪಟ್ಟುವು; ಕ್ರಮಗಣನಂ = ಕ್ರಮದಿಂ ಗಣನೆಯಾಗಿ; ಇರೆಯುಂ = ಇರ್ದೊಡೆಯುಂ; ಒಲ್ದಂತೆ = ಪಲ್ಲಟವಾಗಿ, ಇಚ್ಛೆ ಬಂದಂತೆ; ಇರೆಯುಂ = ಇರ್ದೊಡೆಯುಂ; ಯುಗಪದುಕ್ತಿಗೆ = ಒಂದಾಗಿ ನುಡಿಯುವದರ್ಕೆ; ಉತ್ತಮಪುರುಷಂ = ಉತ್ತಮಪುರುಷಂ; ಪರಂ = ಮುಖ್ಯಂ; ಅದಂ = ಆ ಉತ್ತಮಪುರುಷಮಂ; ಉೞಿದರೆ = ಬಿಟ್ಟರೆ; ಮಧ್ಯಮಪುರುಷಂ = ಮಧ್ಯಮಪುರುಷಂ ಮುಖ್ಯವಾಗುವದು.

ವೃತ್ತಿ.—ಪುರುಷತ್ರಯಂಗಳ್ ತಂತಮ್ಮರ್ಥಂಗಳೊಳ್ ಸ್ವತಂತ್ರಂಗಳ್; ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆ

ಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ; ಉತ್ತಮಪುರುಷಂ ಕಳೆದುೞಿದ ಪ್ರಥಮಮಧ್ಯಮಪುರುಷಂಗಳನುಕ್ರಮದಿನಿರ್ದೊಡಂ ವ್ಯತ್ಯಯದಿನಿರ್ದೊಡಂ ಮಧ್ಯಮಪುರುಷಕ್ಕೆ ಮುಖ್ಯತ್ವಂ; ಯುಗಪದುಕ್ತಿಯೊಳ್ಪ್ರಥಮಪುರುಷಕ್ಕೆ ಮುಖ್ಯತ್ವಮಿಲ್ಲ.

ಪ್ರಯೋಗಂ.—ಸ್ವತಂತ್ರಾರ್ಥಕ್ಕೆ—ತಾನಿರ್ದಂ, ತಾಮಿರ್ದರ್; ನೀನ್ ಕಂಡಯ್, ನೀಂ ಕಂಡಿರ್; ಆನ್ ಕೇಳ್ದೆಂ, ಆಂ ಕೇಳ್ದೆವು.

ಉತ್ತಮಪುರುಷಮುಖ್ಯತ್ವಕ್ಕೆ—ಆತನುಂ ನೀನುಂ ಆನುಂ ಪೊೞಗಾಗಿ ರ್ದಪೆವುರ್ವಿಪತಿಗೆ ಪಿಸುಣರಿಂ.

ವ್ಯತ್ಯಯಕ್ಕೆ—ನೀನುಮಾತನುಮಾನುಂ ಮಣಿಕೂಟನಗರಕ್ಕೆ ಪೋಪೆವು; ಆತನುಮಾನುಂ ನೀನುಂ ಕಜ್ಜದ ತೆಱವನಱಿದು ಪೇೞ್ದೆವು; ಆನುಂ ನೀನು ಮಾತನುಂ ಬೆಸಕೆಯ್ವೆವು.

ಮಧ್ಯಮಪುರುಷಮುಖ್ಯತ್ವಕ್ಕೆ—ಆತನುಂ ನೀನುಂ ಕೂಡಿದಿರ್ಪೊಡೆ ಆಹವಕ್ಕೆ ಕಿಚ್ಚುಂ ಗಾಳಿಯುಂ ಕೂಡಿದಂತೆ.

ವ್ಯತ್ಯಯಕ್ಕೆ—ನಾಳಿನ ದಿನದೊಳ್ನೀನುಮಾತನುಂ ಕೂಡಿದಪಿರ್.

### ಸೂತ್ರಂ (not found in the Mdb. Ms.).

ತಾಂ, ನೀಂ, ಆಂ are the forms of the 3 Personal Pronouns, for the Singular and Plural, on which the 3 Personal Suffixes depend.

ತಿಳಿ ತಾಂ ನೀನಾನೆಂಬ
ರ್ಥಳಂಬಿಗಳ್ಪ್ರಥಮಮಧ್ಯಮೋತ್ತಮಪುರುಷಂ |
ಗಳವೇಕವಚನಮೊರ್ವನ
ಬೞಿಕೆಗೆ ಬಹುವಚನಮೆಲ್ಲರಂ ಪೇೞ್ವೆಡೆಯೊಳ್ || 224 ||

ಪದಚ್ಛೇದಂ.—ತಿಳಿ, ತಾಂ ನೀಂ ಆಂ ಎಂಬ ಅರ್ಥಳಂಬಿಗಳ್ ಪ್ರಥಮಮಧ್ಯಮೋತ್ತಮಪುರುಷಂಗಳ್; ಅವು ಏಕವಚನಂ ಒರ್ವನ ಬೞಿಕೆಗೆ, ಬಹುವಚನಂ ಎಲ್ಲರಂ ಪೇೞ್ವೆಡೆಯೊಳ್.

ಅನ್ವಯಂ.— ತಾಂ ನೀಂ ಆಂ ಎಂಬರ್ಥಳಂಬಿಗಳ್ ಪ್ರಥಮಮಧ್ಯಮೋತ್ತಮಪುರುಷಂಗಳ್, ತಿಳಿ! ಅವು ಒರ್ವನ ಬೞಿಕೆಗೆ ಏಕವಚನಂ, ಎಲ್ಲರಂ ಪೇೞ್ವೆಡೆಯೊಳ್ ಬಹುವಚನಂ.

ಟೀಕು.— ತಾಂ = ತಾನೆಂದು; ನೀಂ = ನೀನೆಂದು; ಆಂ = ಆನೆಂದು; ಎಂಬ = ಎಂಬ; ಅರ್ಥ = ಅರ್ಥದಲ್ಲಿ; ಳಂಬಿಗಳ್ = ಆಲಂಬಮುಳ್ಳ ಶಬ್ದಂಗಳ್; ಪ್ರಥಮಮಧ್ಯಮೋತ್ತಮಪುರುಷಂಗಳ್ = ಪ್ರಥಮಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂದು; ತಿಳಿ = ಅಱಿ; ಅವು = ಆ ಪುರುಷತ್ರಯಂಗಳ್; ಒರ್ವನ = ಒರ್ವನ; ಬಱಿಕೆಗೆ = ಹೇೞುವುದರ್ಕೆ; ಏಕವಚನಂ = ಏಕವಚನಂ ಬರ್ಪುದು; ಎಲ್ಲರಂ = ಸರ್ವರಂ; ಪೇೞ್ವೆಡೆಯೊಳ್ = ಹೇೞ್ವ ತಾವಿನಲ್ಲಿ; ಬಹುವಚನಂ = ಬಹುವಚನಂ ಬರ್ಪುದು.

ವೃತ್ತಿ.—ತಾನ್ ನೀನ್ ಆನ್ ಎಂಬರ್ಥಮನಾಶ್ರಯಿಸಿ, ಪುರುಷತ್ರಯಂಗಳಿರ್ಪುವು; ಅಲ್ಲಿಯೊರ್ವನಂ ಪೇೞ್ವೆಡೆಯೊಳೇಕವಚನಮಕ್ಕುಂ, ಪಲಂಬರಂ ಪೇೞ್ವೆಡೆಯೊಳ್ಬಹುವಚನಮಕ್ಕುಂ.

ಪ್ರಯೋಗಂ.—ತಾಂ ಎಂಬುದರ್ಕೆ—ತಾನೆಚ್ಚಂ ಪೊಚ್ಚಮಲ್ಲದರಿವಾಹಿನಿಯಂ; ತಾಂ ಸವ್ಯಸಾಚಿಯೊಳೆ ತೊಡರ್ದಿಱಿಯರ್.

ನೀಂ ಎಂಬುದರ್ಕೆ—ರಣಕ್ಕೆನ್ನಿಂದೆ ನೀಂ ಮುಂಚಿದಯ್; ನೀಂ ಪೇೞ್ವಿರ್; ನೀಂ ಬಂದಿರ್; ಮೊನಿಯೊಳ್ಪೊಲ್ತಿಡವಾಯ್ತು, ನೀಮಿರೆ ಮತ್ತವಾರಣಮುಂ ತಾರಕಚಕ್ರವರ್ತಿಗೆ; ದೇವಾಸುರಮುಂ ಕೇಳಿರೆ ದೇವಾ. ।

ಆ ಎಂಬುದರ್ಕೆ—

ಆನಱಿವೆಂ ಪೃಥೆಯಱಿವಳ್
ದಾನವರಿಪುವಱಿವನರ್ಕನಱಿವಂ ದಿವ್ಯ ।
ಜ್ಞಾನಿಸಹದೇವನಱಿವಂ
ನೀನಾರ್ಗೆನ್ದಾರುಮಱಿಯುರಂಗಾಧಿಪತೀ ॥ ಕಂದಂ ॥
ಆಮಱಿವೊಡಮುಸಿರಲಶ್ಮೆವಾಳ್ದನ ಗತಿಯುಂ.

ಸೂತ್ರಂ.

For the 3rd Person Singular and Plural the Neuter personal suffixes respectively are:

ಉದುವುವುವೆಂಬಾದೇಶಂ
ಪುದಿದಿರ್ಕುಂ ಪ್ರಥಮಪುರುಷದೇಕಬಹುತ್ವ ।
ಕ್ಕೊದವಿರ್ದ ನಪುಂಸಕಲಿಂ
ಗದೊಳುದು ಭಾವಾರ್ಥದಲ್ಲಿಯುಂ ಸಂಗಳಿಕುಂ ॥225॥

ಉದು, ಉವು.—The form with ಉದು is used also as an Abstract noun, and in the sense of the Imperative.

ಪದಚ್ಛೇದಂ.—ಉದು ಉವು ಎಂಬ ಆದೇಶಂ ಪುದಿದು ಇರ್ಕುಂ ಪ್ರಥಮಪುರುಷದ ಏಕಬಹುತ್ವಕ್ಕೆ ಒದವಿ ಇರ್ದ ನಪುಂಸಕಲಿಂಗದೊಳ್; ಉದು ಭಾವಾರ್ಥದಲ್ಲಿಯುಂ ಸಂಗಳಿಕುಂ.

ಅನ್ವಯಂ.—ಒದವಿ ಇರ್ದ ನಪುಂಸಕಲಿಂಗದೊಳ್ ಪ್ರಥಮಪುರುಷದ ಏಕಬಹುತ್ವಕ್ಕೆ ಉದು ಉವು ಎಂಬಾದೇಶಂ ಪುದಿದು ಇರ್ಕುಂ; ಉದು ಭಾವಾರ್ಥದಲ್ಲಿಯುಂ ಸಂಗಳಿಕುಂ.

ಟೀಕು.—ಒದವಿರ್ದ = ಪ್ರಾಪ್ತಿಸಿ ಇರ್ದ; ನಪುಂಸಕಲಿಂಗದೊಳ್ = ನಪುಂಸಕಲಿಂಗದಲ್ಲಿ; ಪ್ರಥಮಪುರುಷದ = ಅನ್ಯಪುರುಷದ; ಏಕಬಹುತ್ವಕ್ಕೆ = ಏಕವಚನ ಬಹುವಚನಂಗಳ್ಗೆ; ಉದು = ಉದು ಎಂದು; ಉವು = ಉವು ಎಂದು; ಎಂಬಾದೇಶಂ = ಎಂಬಾದೇಶಂ; ಪುದಿದು = ಪ್ರವೇಶವಾಗಿ; ಇರ್ಕುಂ = ಇರ್ಪುವು; ಭಾವಾರ್ಥದಲ್ಲಿಯುಂ = ಭಾವಾರ್ಥದೊಳಂ; ಉದು = ಉದು ಎಂಬುದು; ಸಂಗಳಿಕುಂ = ಸಂಬಂಧವಾಗುವುದು. ಉಂ ಎಂಬ ಸಮುಚ್ಚಯದಿಂ ವಿಧ್ಯರ್ಥದಲ್ಲಿಯುಂ ಬರ್ಪುದೆಂಬರ್ಥಂ.

ವೃತ್ತಿ.—ಪ್ರಥಮಪುರುಷದೇಕವಚನಬಹುವಚನಕ್ಕಾದೇಶಮಾಗಿ ನಪುಂಸಕಲಿಂಗದೊಳುದುವೆಂಬುದುಂ ಉವುವೆಂಬುದುಮಪ್ಪುವು. ಭಾವಾರ್ಥದೊಳುದುವುಂಟು.

ಪ್ರಯೋಗಂ.—ಏಕವಚನಕ್ಕೆ—ಬರೆದುದು; ನೆರೆದುದು; ಕರೆದುದು; ಜಲಗಂ ಪರೆದುದು. ಮುತ್ತುದು ನೇಸಱ ತೇಜಂ ಸತ್ತುದು ದಾವಾಗ್ನಿ.

ಬಹುವಚನಕ್ಕೆ—

ನಿಮಿರ್ದುವು ಪೊಳೆದುವಳುಂಕಿದು
ಪಮುರ್ದುವು ಚುಂಬಿಸಿದುವಪೀಡುವು ಸಂಭ್ರಮದಿಂ |
ಸಮದೃಷ್ಟಿಯಾಗಿ ಸಿಲ್ಕಿದು
ವೆಮೆಯಿಕ್ಕಲ್ಮಱೆದುವವಳ ಧವಳಕಟಾಕ್ಷಂ || ಕಂದಂ ||

ಭಾವಕ್ಕೆ—ಈವುದು ಕರ್ಣಂಗೆ ಸಹಜಮಾರೋಪಿತಮೆ; ಕೂರ್ಪುದು; ಇರ್ಪುದು; ಮಾಱ್ಪುದು.

ಸಮುಚ್ಚಯವಶದಿಂ ವಿಧ್ಯರ್ಥದೊಳುದುವುಂಟು—ರಕ್ಷಿಪುದೆಂನಂ; ಅವಧರಿಪುದು ಬಿಂನಪಮಂ ಎಂಬಂತೆ.

## ಸೂತ್ರಂ.

Instead of the ಉದು (S. 225) for the 3rd Person Neuter Singular also ಇತು, ಇತ್ತು, ಅತ್ತು are in use.

ನೆಗಱ್ದ ನಪುಂಸಕೈಕೋ
ಕ್ತಿಗೆ ಕೆಲರಿತುವಿತ್ತುವತ್ತುವೆಂದುಸಿರ್ವರ್ ನೆ |
ಟ್ಟಗೆ ಪುಗಿಸುವರಂತೇಕೋ
ಕ್ತಿಗೆ ತಾಂ ಸ್ತ್ರೀವಿಷಯಮಾಗಳಂತಸ್ಥಿತಿಯಂ || 226 ||

The Feminine Personal suffix for the 3rd Person Singular is ಅಳ್.

ಪದಚ್ಛೇದಂ.—ನೆಗಱ್ದ ನಪುಂಸಕೈಕೋಕ್ತಿಗೆ ಕೆಲರ್, ಇತು ಇತ್ತು ಅತ್ತು ಎಂದು, ಉಸಿರ್ವರ್; ನೆಟ್ಟಗೆ ಪುಗಿಸುವರ್ ಅಂತು ಏಕೋಕ್ತಿಗೆ ತಾಂ, ಸ್ತ್ರೀವಿಷಯಂ ಆಗೆ, ಅಳಂತ ಸ್ಥಿತಿಯಂ.

ಅನ್ವಯಂ.—ಸ್ತ್ರೀವಿಷಯಂ ಆಗೆ, ಅಂತು ಏಕೋಕ್ತಿಗೆ ಅಳಂತಸ್ಥಿತಿಯಂ ತಾಂ ನೆಟ್ಟಗೆ ಪುಗಿಸುವರ್ ಎಂಬುದನ್ವಯಂ.

ಟೀಕು.—ನೆಗಱ್ದ = ಪ್ರಸಿದ್ಧವಡೆದ; ಆ ನಪುಂಸಕೈಕೋಕ್ತಿಗೆ = ಆ ಉದುವೆಂಬ ನಪುಂಸಕಲಿಂಗದ ಏಕವಚನಕ್ಕೆ; ಕೆಲರ್ = ಕೆಲಂಬರ್; ಇತು = ಇತು ಎಂದು; ಇತ್ತು = ಇತ್ತು ಎಂದು; ಅತ್ತು = ಅತ್ತು ಎಂದು; ಉಸಿರ್ವರ್ = ಬಹುಳದಿಂ ಪೇೞ್ವರ್; ಸ್ತ್ರೀವಿಷಯಂ = ಸ್ತ್ರೀಲಿಂಗದ ವಿಷಯಂ; ಆಗೆ = ಆಗೆ; ಅಂತು = ಹಾಂಗೆ; ಏಕೋಕ್ತಿಗೆ = ಏಕವಚನಕ್ಕೆ; ಅಳಂತಸ್ಥಿತಿಯಂ = ಅಳ್ ಎಂಬ ಪ್ರತ್ಯಯಾಂತದ ಸ್ಥಿತಿಯಂ; ತಾಂ = ವಿದ್ವಾಂಸರ್ ತಾಂ; ನೆಟ್ಟಗೆ = ವ್ಯಕ್ತವಾಗಿ; ಪುಗಿಸುವರ್ = ಪ್ರವೇಶವಂ ಮಾಡುವರ್.

ವಿಚಾರಂ (not found in the Mḍb. Ms.)—ನಪುಂಸಕಲಿಂಗದ ಭೂತಕಾಲದ ಪ್ರಥಮಪುರುಷದೇಕವಚನಕ್ಕೆ ಇತು ಇತ್ತು ಅತ್ತು ಎಂಬಿವರ್ಕೆ ಆ ಭೂತಕಾಲದ ದಕಾರಂ ಬಹುಳವಾಗಿ ಬರ್ಪುದು; ಅದೆಂತೆಂದೊಡೆ—ಈ, ಓ, ಕಾ, ಕೀ, ಕೇ, ಪೂ, ಬೇ, ಬಾ, ಮೇ ಎಂಬೇಕಾಕ್ಷರಧಾತುಗಳ್ಗೆ ಪರದಲ್ಲಿ ದಕಾರಂ ನಿತ್ಯಂ; ಏಕಾರಾಂತಂಗಳಲ್ಲಿ ಇತು ಇತ್ತು ಎಂಬೆರಡರ್ಕೆ ದತ್ವಮಿಲ್ಲ; ವರ್ಗತೃತೀಯಾಂತದ ವರ್ಗಪ್ರಥಮಂಗಳಾಗುವಲ್ಲಿ ನಿತ್ಯಂ; ಇಕಾರಾಂತಗಳಲ್ಲಿ ವಿಕಲ್ಪಂ; ವ್ಯಂಜನಾಂತಂಗಳಲ್ಲಿ ಬಹುಳಂ; ಸರ್ವಧಾತುಗಳಲ್ಲಿಯುಂ ಅತ್ತು ಎಂಬುದರ್ಕೆ ದತ್ವಂ ನಿತ್ಯವಾಗಿ ಬರ್ಪುದು. ಇವನುದಾಹರಣೆಯ ಮುಖದಿಂದಱಿವುದು.

ವೃತ್ತಿ.—ನಪುಂಸಕಲಿಂಗದೇಕವಚನಕ್ಕೆ ಇತುವೆಂದುಂ ಇತ್ತುವೆಂದುಂ ಅತ್ತುವೆಂದುಮ್ ಅಕ್ಕುಂ; ಪ್ರಥಮಪುರುಷದೇಕವಚನಕ್ಕೆ, ಸ್ತ್ರೀವಿವಕ್ಷೆಯಾಗೆ, ಅಳ್ ಎಂದಕ್ಕುಂ.

ಪ್ರಯೋಗಂ.—

ಇತುಗೆ—ಮುಟ್ಟಿತು; ಮೆಟ್ಟಿತು.

ಮುಟ್ಟಿತು ಮುಟ್ಟದು ದಿವಮಂ
ಮೆಟ್ಟಿತು ಮೆಟ್ಟದು ರಸಾತಳಾಗ್ರಮನೆಮ್ಮೊ।
ಳ್ಬಿಟ್ಟಳಮಾಗಿರೆ ದಿವಿಜರ
ದಿಟ್ಟಿಗೆ ಸೊಗಯಿಪುದು ಮುಂದೆ ಮಂದರಶೈಲಂ ॥ ಕಂದಂ ॥

ಇತ್ತುಗೆ—ಅಲ್ಲಾಡಿತ್ತು; ಓಡಿತ್ತು. ಈಶ್ವರನ ಮನಮಲ್ಲಾಡಿತ್ತೋಡಿತ್ತು ಕಿನ್ನರಸೈನ್ಯಂ.

ಅತ್ತುಗೆ—ಇರ್ದತ್ತು; ಪಸರಿಸಿದತ್ತು. ಶಿರಃಕರೋಟಿ ನಗುವಂತಿರ್ದತ್ತು ರಾಗಾಧರನಂ; ಪಸರಿಸಿದತ್ತು ಮೂಡದೆಸೆಯೊಳ್ ಬೆಳರ್ಗೆಂಪು.

ಅಳ್ಗೆ—ಕಡೆದಳ್; ತಡೆದಳ್; ಪಡೆದಳ್; ಅಱಿದಳ್ ಪಾಂಡುತನೂಜರ ತೆಱನೆಲ್ಲಮನೀಕೆ.

## ಸೂತ್ರಂ.

There are two other Affixes for the 3rd Person: ಗುಂ and ಕುಂ. The forms created by them (are, like the forms with ಉದು of S. 225, a sort of verbal noun, and) may be used for all tenses, even also the Past, for all numbers and all genders.

ಸವಣ್ಣಾಗಿ ಭೂತದೊಳ್ ಲಿಂ
ಗವಚನದೊಳ್ತಳ್ತು ವರ್ತಮಾನಭವಿಷ್ಯ।
ದ್ವ್ಯವಹೃತಿಗಳ ಗುಂ ಕುಂ ಸ
ಲ್ವುವು ತಾವನ್ಯೈಕವಚನದೊಳ್ನೆಲಸಿರ್ದುಂ ॥ 227 ॥

ಪದಚ್ಛೇದಂ.—ಸವಂ ಆಗಿ ಭೂತದೊಳ್ ಲಿಂಗವಚನದೊಳ್ ತಳ್ತು, ವರ್ತಮಾನಭವಿಷ್ಯದ್ವ್ಯವಹೃತಿಗಳ ಗುಂ ಕುಂ ಸಲ್ವುವು, ತಾಂ ಅನ್ಯೈಕವಚನದೊಳ್ ನೆಲಸಿ ಇರ್ದುಂ.

ಅನ್ವಯಂ.—ವರ್ತಮಾನಭವಿಷ್ಯದ್ವ್ಯವಹೃತಿಗಳ ಗುಂ ಕುಂ, ತಾಂ ಅನ್ಯೈಕವಚನದೊಳ್ ನೆಲಸಿ ಇರ್ದುಂ, ಭೂತದೊಳ್ ಲಿಂಗವಚನದೊಳ್ ತಳ್ತು, ಸವಂ ಆಗಿ ಸಲ್ವುವು.

ಟೀಕು.—ವರ್ತಮಾನ = ವರ್ತಮಾನಕಾಲದ; ಭವಿಷ್ಯತ್ = ಭವಿಷ್ಯತ್ಕಾಲದ; ವ್ಯವಹೃತಿಗಳ = ವ್ಯವಹಾರಂಗಳ; ಗುಂ = ಗುಂಕಾರಂ; ಕುಂ = ಕುಂಕಾರಂ; ತಾಃ = ತಾಂ; ಅನ್ಯ = ಪ್ರಥಮಪುರುಷದ; ಏಕವಚನದೊಳ್ = ಏಕವಚನದಲ್ಲಿ; ನೆಲಸಿರ್ದುಂ = ನೆಲೆಗೊಂಡಿರ್ದುಂ; ಭೂತದೊಳ್ = ಭೂತಕಾಲದಲ್ಲಿ; ಲಿಂಗವಚನದೊಳ್ = ಲಿಂಗತ್ರಯ ವಚನತ್ರಯಂಗಳಲ್ಲಿ; ಸವನಾಗಿ = ಸಮಾನವಾಗಿ; ತಳ್ತು = ಪೊರ್ದುಗೆಯಾಗಿ; ಸಲ್ವುವು = ಸಲುವಳಿಯಪ್ಪುವು.

ವೃತ್ತಿ.—ಭೂತಕಾಲವೆನ್ನದೆ, ಲಿಂಗತ್ರಯವಚನತ್ರಯವೆನ್ನದೆ, ವರ್ತಮಾನಭವಿಷ್ಯತ್ಕಾಲಂಗಳೊಳ್ ವರ್ತಿಸುವ ಗುಂ ಕುಮ್ ಎಂಬಿವು ಪ್ರಥಮದೇಕವಚನಕ್ಕಮಾದೇಶಮಪ್ಪುವು.

ಪ್ರಯೋಗಂ.—ಗುಮೆಂಬುದರ್ಕೆ ಭೂತಕಾಲಕ್ಕೆ—ಅಂದು ಮಾಡುಗುಂ, ಅಂದು ಮಾಟ್ಕುಂ.

ಲಿಂಗತ್ರಯಕ್ಕೆ—

ಅಸವಸದಿಂ ಪಳಗೆಯ್ದುಂ
ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನ ವೋಲ್ |
ಸಸಿಯಂ ನೋಡಿ ತಳೋದರಿ
ಬಿಸುಸುಯ್ಗುಂ ಬಯ್ಗುಮಿಂತು ಮಾಡಿದ ಬಿದಿಯಂ || ಕಂದಂ ||

ಭೂವಳಯಾಧಿಪಂ ನುಡಿಗುಮಾ ದೂತಂಗೆ ಸ್ವಚಿತ್ತಗತಾರ್ಥಮಂ. ಕೋಗಿಲೆಯುಲಿಗುಂ ನಯದಿಂದ. ಬೀಸುಗುಂ ಗಂಧವಾಹಂ.

ವಚನತ್ರಯಕ್ಕೆ—ಒರ್ವನೆ ಗೆಲ್ಗುಂ ಕಿರೀಟಿ ಕೌರವಬಲಮಂ. ಬಲನಾರಾಯಣರಿರ್ವರುಂ ನುಡಿಗುಂ ಆ ದೂತಂಗೆ. ಮೂದೇವರುಮಂಮೂಱು ಕೋಣೆವುಗಿಸುಗುಮಸುರರ್. ಎಮಗೀಗಳೆ ಸೂಚಿಸುಗುಮವರ್ ನಾಳೆ ಕಾಣ್ಗುಂ.

ಕುಮಿಂಗೆ—ಕೇಳ್ವಾತನ ಕಿವಿಯುಂ ಕನಲ್ ಕರಿಮುರಿವೋಕುಂ (?)

ಅರ್ಕೇಂದುಗಳಂ ತವೆ ನುಂ
ಗಿರ್ಕುಂ ಕಲ್ತಿಲೆ ಸಿಡಿಲ್ಗಳೆಱಗುಗುಮತ್ತಂ |
ಬಕ್ರುಂ ನಿನ್ನೋಪಳಭಯ
ಮಿರ್ಕುಮೆ ನೀನಿರ್ಪ ಮನದೊಳುಗ್ರತುಳಾಕಾ (o. r.—
ತಳಕರ್ಾ) || ಕಂದಂ ||.

ಇದುಮದಱಿಂತೆ ಸಲ್ವುದು. ಶ್ರಾವ್ಯಮಾದೊಡೇಕಪದದೊಳೆರಡುಂ ಪತ್ತುಗುಂ—ಸೂಚಿಸುಗುಂ, ಸೂಚಿಕುಂ; ಮಾೞ್ಕುಂ, ಮಾಡುಗುಂ.

## ಸೂತ್ರಂ.

When the ಕುಂ (S. 227) is joined to ಇಸು, the suffix of causation (ಹೇತು), the ಸು is dropped. The ಕ in ಕುಂ may be doubled.

ಇಸುವಿನ ಸುಕಾರಮಂ ಲೋ
ಪಿಸುವರ್ ಕುಂ ಪರದೊಳಾಗೆ ಕುಂಮಿಂಗೆ ಕೆಲ |
ರ್ಪೊಸಯಿಸುವರ್ ದ್ವಿರ್ಭಾವಮ
ನೆಸಗಲದಂ ಬೇಡ ಕಿವಿಗೆ ಸೊಗಯಿಸದೆಡೆಯೊಳ್ ||228||

ಪದಚ್ಛೇದಂ.—ಇಸುವಿನ ಸುಕಾರಮಂ ಲೋಪಿಸುವರ್, ಕುಂ ಪರದೊಳ್ ಆಗೆ; ಕುಂಮಿಂಗೆ ಕೆಲರ್ ಪೊಸಯಿಸುವರ್ ದ್ವಿರ್ಭಾವಮಂ; ಎಸಗಲ್ ಅದಂ ಬೇಡ ಕಿವಿಗೆ ಸೊಗಯಿಸದ ಎಡೆಯೊಳ್.

ಅನ್ವಯಂ.—ಕುಂ ಪರದೊಳ್ ಆಗೆ, ಇಸುವಿನ ಸುಕಾರಮಂ ಲೋಪಿಸುವರ್; ಕೆಲರ್ ಕುಂಮಿಂಗೆ ದ್ವಿರ್ಭಾವಮಂ ಪೊಸಯಿಸುವರ್; ಕಿವಿಗೆ ಸೊಗಯಿಸದೆಡೆಯೊಳ್ ಅದಂ ಎಸಗಲ್ ಬೇಡ.

ಟೀಕು. — ಕುಂ = ಕುಂಕಾರಂ; ಪರದಲ್ಲಿ = ಧಾತುಗಳ ಪರದಲ್ಲಿ; ಆಗೆ = ಪೊರ್ದುಗೆಯಾಗೆ; ಇಸುವಿನ = ಇಸುಪ್ರತ್ಯಯದ; ಸುಕಾರಮಂ = ಸುತ್ವವಂ; ಲೋಪಿಸುವರ್ = ಲೋಪವಂ ಮಾಡುವರ್; ಕೆಲರ್ = ಕೆಲಂಬರ್; ಕುಂಮಿಂಗೆ = ಕುಂಕಾರಕ್ಕೆ; ದ್ವಿರ್ಭಾವಮಂ = ದ್ವಿತ್ವವಂ; ಪೊಸಯಿಸುವರ್ = ಪೊರ್ದುಗೆಯಂ ಮಾಡುವರ್; ಕಿವಿಗೆ = ಕರ್ಣಕ್ಕೆ; ಸೊಗಯಿಸದೆಡೆಯೊಳ್ = ಹಿತವಾಗದ ತಾವಿನಲ್ಲಿ; ಅದಂ = ಆ ಕುಂಕಾರದ ದ್ವಿತ್ವವಂ; ಎಸಗಲ್ ಬೇಡ = ಮಾಡ ಬೇಡ.

ವೃತ್ತಿ.—ಹೇತುವಿನೊಳಾದ ಇಸುವಿನ ಸುಕಾರಕ್ಕೆ ಕುಂ ಪರಮಾಗೆ, ಆ ಸುತ್ವಂ ಲೋಪಮಕ್ಕುಂ; ಕೆಲರಾ ಕುಂಮಿಂಗೆ ದ್ವಿತ್ವಮಂ ಪೇೞ್ವರ್; ಅದಂ ಶ್ರವಣಕ್ಕೆ ಶೋಭನವಾಗದ ತಾಣದೊಳ್ ಪೇೞಲಾಗದು.

ಪ್ರಯೋಗಂ.—ಸುಕಾರಲೋಪಕ್ಕೆ—ಈ ಯೋಗದೊಳಾವ ರೋಗಮಂ ಪರಿಹರಿಕುಂ; ಸಮನಿಕುಮಾಕಾರಂಮೇಣಿವರ್ಣ; ಇಂದಿನ ದಿನದೊಳ್ ರಂಭೆ ಕೇಳಿಕುಂ ಪೆಕ್ಕಣಮುಂ; ಭಾವಿಕುಂ; ಮಾಣಿಕುಂ.

ದ್ವಿತ್ವಕ್ಕೆ—ಪುರುಡಿಕ್ಕುಂ; ಪೊಗೞಿಕ್ಕುಂ; ರಂಜಿಕ್ಕುಂ; ಪಾಲಿಕ್ಕುಂ ಜಗವೆಲ್ಲಮಂ ಕಮಲಭವಂ.

ಶ್ರಾವ್ಯಮಲ್ಲದುದರ್ಕೆ—ಬಿಡಿಕ್ಕುಂ, ಕೆಡಿಕ್ಕುಂ, ಸೊಪ್ಪಿಕ್ಕುಮೆನ ಬೇಡ. ಸಂಸ್ಕೃತದೊಳಿಂತಿದು ಮನೋಹರಂ.

### ಸೂತ್ರಂ.

Regarding the Imperative (ವಿಧಿ) there are the Suffixes ಗೆ and ಕೆ (ಕ್ಕೆ, *cf. S.* 228)

ಸೊಗಯಿಪುವು ಗೆ ಕೆಗಳನ್ಯೋ
ಕ್ತಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮಪುರುಷ ।
ಪ್ರಗತಬಹೂಕ್ತಿಯೊಳಿಮಮೆಂ
ದೊಗೆತರ್ಕುಂ ಯುಗಪದುಕ್ತಿಯೊಳ್ಕ್ರಮದಿಂದಂ ‖ 229 ‖

for the Singular and Plural of the 3rd Person (the Elision regarding ಇಸು also occurring here); ಇಂ for the 2nd Person Plural; and ಅಂ for the 1st Person Plural.

ಪದಚ್ಛೇದಂ.— ಸೊಗಯಿಪುವು ಗೆ ಕೆಗಳ್ ಅನ್ಯೋಕ್ತಿಗೆ ವಿಧ್ಯರ್ಥಕ್ಕೆ; ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳ್, ಇಂ ಅಂ ಎಂದು, ಒಗೆತರ್ಕುಂ, ಯುಗಪದುಕ್ತಿಯೊಳ್ ಕ್ರಮದಿಂದಂ.

ಅನ್ವಯಂ.— ವಿಧ್ಯರ್ಥಕ್ಕೆ ಅನ್ಯೋಕ್ತಿಗೆ ಗೆ ಕೆಗಳ್ ಸೊಗಯಿಪುವು; ಯುಗಪದುಕ್ತಿಯೊಳ್ ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳ್ ಕ್ರಮದಿಂದಂ, ಇಂ ಅಂ ಎಂದು, ಒಗೆತರ್ಕುಂ.

ಟೀಕು.—ವಿಧ್ಯರ್ಥಕ್ಕೆ = ವಿಧಿಯರ್ಥಕ್ಕೆ; ಅನ್ಯ = ಪ್ರಥಮಪುರುಷದ; ಉಕ್ತಿಗೆ = ಅಂ ಅರ್ ಎಂಬೇಕವಚನಬಹುವಚನಕ್ಕೆ; ಗೆ ಕೆಗಳ್ = ಗೆಕಾರ ಕೆಕಾರಂಗಳ್; ಸೊಗಯಿಪುವು = ಹಿತವಾಗವುವು; ಯುಗಪದುಕ್ತಿಯೊಳ್ = ಒಂದಾಗಿ ನುಡಿವುದಾದ; ಮಧ್ಯಮ = ಮಧ್ಯಮಪುರುಷದಲ್ಲಿ; ಉತ್ತಮ = ಉತ್ತಮಪುರುಷದಲ್ಲಿ; ಪ್ರಗತ = ವಿಶೇಷವಾಗಿ ಎಯ್ದಲ್ಪಟ್ಟ; ಬಹೂಕ್ತಿಯೊಳ್ = ಇರ್, ಎವು ಎಂಬ ಬಹುವಚನದಲ್ಲಿ; ಕ್ರಮದಿಂದಂ = ತಱುವಾಯಿಂದೆ; ಇಂ = ಇಂ ಎಂದು; ಅಂ = ಅಂ ಎಂದು; ಒಗೆತರ್ಕುಂ = ಬರ್ಪುವು.

ವೃತ್ತಿ.— ಪ್ರಥಮಪುರುಷದೇಕವಚನಕ್ಕಂ ಬಹುವಚನಕ್ಕಂ ವಿಧ್ಯರ್ಥದೊಳ್ ಗೆ ಎಂದುಂ ಕೆ ಎಂದುಮಕ್ಕುಂ; ಕೆಕಾರಕ್ಕೆ ಕುಮ್ಮಿನಂತೆ ದ್ವಿತ್ವವಿಕಲ್ಪಂ. ಮಧ್ಯಮೋತ್ತಮಪುರುಷಂಗಳ ಬಹುವಚನಕ್ಕೆ ಯುಗಪದುಕ್ತಿಯೊಳ್ಪರಿವಿಡಿಯಿಂ ಇಮ್ ಅಮ್ ಎಂಬಿವಕ್ಕುಂ.

ಪ್ರಯೋಗಂ.—ಗೆಕಾರಕ್ಕೆ—ಅವಂ ಕುಡುಗೆ; ಅವಂ ಪಡೆಗೆ; ಅವಂ ತರ್ಕೆ; ಅವಂ ಬರ್ಕೆ; ಪಾಳಿಸುತ್ತಿರ್ಕೆ ವಿಷ್ಣು; ಪರಿಪಾಳಿಕೆ ಜಿಷ್ಣುವಲಂಕರಿಷ್ಣು.

ಬಹುವಚನಕ್ಕೆ—ಅವರ್ಮೂಱಿಕ್ಕೆ; ಅವತ್ತೊರ್ೞ್ಕೆ.

ಕೆಕಾರಕ್ಕೆ ದ್ವಿತ್ವವಿಕಲ್ಪಂ—ರಕ್ಷಿಕೆ, ರಕ್ಷಿಕ್ಕೆ; ಪೂಜಿಕೆ, ಪೂಜಿಕ್ಕೆ; ಪೆರ್ಚಿಕೆ, ಪೆರ್ಚಿಕ್ಕೆ; ನರನಾಥನಾ ತೆಱದಿಂ ಪೆರ್ಚಿಕ್ಕೆ ದೇಶಂಗಳಂ.

ಇಂಗೆ—ಸಮಕಟ್ಟಿಂ! ಇರಿಸಿಂ! ತರಿಸಿಂ! ವ್ಯಾಳದನ್ನಿಕುಲಮಂ ಸಮಕಟ್ಟಿಂ.

ಅಂಗೆ—ನೆನೆಯದ ಕಜ್ಜದ ಬಿಣ್ಪಂ
ಮುನಿವಯ್ ನೀನೊರ್ಬನೆಂಬ ಹರಿಗಮಸಾಧ್ಯಂ ।
ಮನುಜಪ್ರಾಕಾರಾಂಕನೊ
ಳನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್! ॥ ಕಂದಂ ॥

ಏಗೆಯ್ವಂ ಪೇೞಿಮೆಂದೊಡೆಂದರ್ಭೀಷ್ಮರ್.

## ಸೂತ್ರಂ.

Further, the form of the 2nd Person Singular Imperative is the Verbal theme or root; the root ಇರ್ may become ಇರು.—Remark: ವೆಂ is the suffix for the 1st Person Singular Imperative, ವಂ for the 1st Person Plural.—The Imperative may be put twice (*cf.* S. 195).

ಪರಿಣಮಿಸಿರ್ಕುಂ ಪ್ರಕೃತಿ
ಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್ ।
ದೊರೆಕೊಳ್ಗುಮುತ್ವಮಿರ್ಗಂ
ಕುರಿಪುದು ವಿಧಿಯಾ ಕ್ರಿಯಾಸಮಭಿಹಾರದೊಳಂ ॥ 230 ॥

ಪದಚ್ಛೇದಂ.— ಪರಿಣಮಿಸಿ ಇರ್ಕುಂ ಪ್ರಕೃತಿಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್; ದೊರೆಕೊಳ್ಗುಂ ಉತ್ವಂ ಇರ್ಗೆ; ಅಂಕುರಿಪುದು ವಿಧಿ ಆ ಕ್ರಿಯಾಸಮಭಿಹಾರದೊಳಂ.

ಅನ್ವಯಂ.— ವಿಧಿಯೊಳ್ ಮಧ್ಯಮೈಕವಚನಂ ಪ್ರಕೃತಿಸ್ವರೂಪದಿಂ ಪರಿಣಮಿಸಿ ಇರ್ಕುಂ; ಇರ್ಗೆ ಉತ್ವಂ ದೊರೆಕೊಳ್ಗುಂ; ಆ ಕ್ರಿಯಾಸಮಭಿಹಾರದೊಳಂ ವಿಧಿ ಅಂಕುರಿಪುದು.

ಟೀಕು.— ವಿಧಿಯೊಳ್ = ವಿಧ್ಯರ್ಥದಲ್ಲಿ; ಮಧ್ಯಮೈಕವಚನಂ = ಅಯ್ ಎಂಬ ಮಧ್ಯಮಪುರುಷದೇಕವಚನಂ; ಪ್ರಕೃತಿಸ್ವರೂಪದಿಂ = ಧಾತುಸ್ವರೂಪದಿಂದೆ; ಪರಿಣಮಿಸಿರ್ಕುಂ = ಪರಿಣಮಿಸಿರ್ಪುದು; ಇರ್ಗೆ = ಇರ್ ಎಂಬ ಧಾತುವಿಂಗೆ; ಉತ್ವಂ = ಉಕಾರಂ; ದೊರೆಕೊಳ್ಗುಂ = ಪ್ರಾಪ್ತಿಸುವುದು; ಆ ಕ್ರಿಯಾಸಮಭಿಹಾರದೊಳಂ = ಆ ಕ್ರಿಯೆಯನಭಿಮುಖವಾಗಿ ಮಾಡಿ ಕೊಂಬಲ್ಲಿಯುಂ; ವಿಧಿ = ವಿಧ್ಯರ್ಥಂ; ಅಂಕುರಿಪುದು = ಅಂಕುರವಾಗುವುದು, ಬರ್ಪುದೆಂಬುದರ್ಥಂ.

ವಿಚಾರಂ (it is not in the Mdb. Ms.) — ಇಲ್ಲಿ, ಮಾಡು, ಕರಣೇ ಎಂದು, ಧಾತುವಿರೆ, ಪ್ರಥಮಪುರುಷದೇಕವಚನ ಬಹುವಚನಂಗಳ್ಗೆ — ಅವಂ ಮಾಡುಗೆ, ಅವರ್ ಮಾಡುಗೆ; ಅವಂ ಮಾಳ್ಕೆ, ಅವರ್ ಮಾಳ್ಕೆ ಎಂದಾಯ್ತು. ಮಧ್ಯಮಪುರುಷದೇಕಬಹುವಚನಕ್ಕೆ — ನೀಂ ಮಾಡು! ನೀವೆಲ್ಲರ್ ಮಾಡಿಂ! ಎಂದಾಯ್ತು.

ಉತ್ತಮಪುರುಷದೇಕವಚನಕ್ಕೆ ಪೇೞಲಿಲ್ಲಾಗಿ, ಬಹುವಚನಕ್ಕೆ ಭವಿಷ್ಯಂತಿಗೆ ಬರ್ಪ ವಕಾರದ ಮೇಲೆ ಅಂ ಎಂಬುದು ಪತ್ತಿ—ಆವೆಲ್ಲರ್ ಮಾಡುವಂ! ಎಂದು, ಆಯ್ತು. ಏಕವಚನಕ್ಕೆ ಹ್ಯಾಂಗೆಂದೊಡೆ— ಭವಿಷ್ಯಂತಿಯ ವಕಾರದ ಮೇಲೆ ಎನ್ ಎಂಬುದು ಪತ್ತಿದಂತೆ ಆನ್ ಮಾಡುವೆಂ ಎಂದಪ್ಪುದಾಗಿ ಪೇೞಲಿಲ್ಲೆಂದಱಿವುದು.

ಶಬ್ದಾನುಶಾಸನದಲ್ಲಿ — ‖ ಆಶೀರ್ವಿಧಿನಿಮಂತ್ರಣಾಮಂತ್ರಣಾಧ್ಯೇಷಣಸಂಪ್ರಶ್ನಪ್ರೇಷಣವಿಜ್ಞಾಪನಾಜ್ಞಾಪನಪ್ರಾರ್ಥನೇ ಗೆತ್ ‖ 4, 24 ‖ ಆಶೀರಾದಿವಿವಕ್ಷಾಯಾಂ ಧಾತೋಃ ಪರಯೋರ್ ಅಮ್ ಅರ್ ಇತ್ಯೇತಯೋರ್ ಗೆದ್ ಇತ್ಯಾದೇಶೋ ಭವತಿ ‖ ಎಂದುದಾಗಿ ಆಶೀರಾದಿವಿವಕ್ಷೆಯಲ್ಲಿ ಧಾತುವಿನತ್ತಣಿಂ ಪರಂಗಳಾದ ಅಮ್ ಅರ್ ಎಂಬಿವರ್ಕೆ ಗೆತ್ (ಗೆ) ಎಂಬಾದೇಶಂ ಬರ್ಪುದು. ತಕಾರಂ ಇತ್ತು, ಗೆ ಎಂದು ಉೞಿವುದು—ಅವಂ ಮಾಡುಗೆ; ಅವರ್ಮಾಡುಗೆ.

‖ ಅಯಿರೋಶ್ಬೋದುಃ ‖ 4, 25 ‖ ಎಂದುದಾಗಿ ಧಾತುವಿನತ್ತಣಿಂ ಪರಂಗಳಾದ ಅಮ್ ಅರ್ ಎಂಬವರ್ಕಂ ಅಯ್ ಇರ್ ಎಂಬಿವರ್ಕಂ ಉದು ಎಂಬಾದೇಶಂ ಬರ್ಪುದು, ಆಶೀರಾದಿವಿಷಯದಲ್ಲಿ — ಅವಂ ಮಾಳ್ಪುದು, ಅವರ್ಮಾಳ್ಪುದು; ನೀಂ ಮಾಳ್ಪುದು, ನೀವೆಲ್ಲರ್ ಮಾಳ್ಪುದು. ಮಾಡುವುದು ಎಂದುಂ ವಿಕಲ್ಪಂ.

‖ ಆಯೋಲೋಪೌ ‖ 4, 27 ‖ ಧಾತೋಃ ಪರಸ್ಯ ಅಯಃ । ಅಕಾರೋ ಲೋಪಶ್ಚಾದೇಶೌ ಭವತ ಆಶೀರಾದಿವಿಷಯೇ ‖ ಎಂದುದಾಗಿ ಧಾತುವಿನತ್ತಣಿಂ ಪರದ ಅಯ್ ಎಂಬುದರ್ಕೆ ಅಕಾರಾದೇಶಮುಂ ಲೋಪಮುಮಕ್ಕುಂ — ನೀಂ ಮಾಡ! ನೀಂ ಮಾಡು!

‖ ಇರ ಇಮ್ ‖ 4, 26 ‖ ಧಾತೋಃ ಪರಸ್ಯ ಇರ ಇಮ್ ಇತ್ಯಾದೇಶೋ ಭವತ್ಯಾಶೀರಾದಿವಿಷಯೇ ‖ ಎಂದುದಾಗಿ ಧಾತುವಿನತ್ತಣಿಂ ಪರದ ಇರ್ ಎಂಬುದರ್ಕೆ ಇಮ್ ಎಂಬಾದೇಶಮಕ್ಕುಂ ಆಶೀರಾದಿವಿಷಯದಲ್ಲಿ — ನೀವೆಲ್ಲರ್ ಮಾಡಿಂ! ಗುರುಗಳಿರಾ, ಮುದದಿನೆಮಗೆ ಬೆಸಸಿಮಾ ಕಥೆಯಂ! ಶಿವ ಸುಖಮಂ ಮಾಡಿಮೆಮಗೆ!

‖ ಎನೋ ವೆನ್ ‖ 4, 30 ‖ ಧಾತೋಃ ಪರಸ್ಯ ಎನ್ಪ್ರತ್ಯಯಸ್ಯ ವೆನ್ ಇತ್ಯಾದೇಶೋ ಭವತಿ ‖ ಎಂದುದಾಗಿ ಧಾತುವಿನತ್ತಣಿಂ ಪರ ಎನ್ ಎಂಬುದರ್ಕೆ ವೆನ್ ಎಂಬಾದೇಶಂ ಬರ್ಪುದು, ಆಶೀರಾದಿವಿಷಯದಲ್ಲಿ — ಆನಿದಂ ಮಾಳ್ಪೆಂ! ಆಂ ಶಿವನಂ ಪೂಜಿಸುವೆಂ!

‖ ಎವೋರ್ವಂ ‖ 4, 29 ‖ ಧಾತೋಃ ಪರಸ್ಯ ಎವುಪ್ರತ್ಯಯಸ್ಯ ವಮ್ ಇತ್ಯಾದೇಶೋ ಭವತಿ ಆಶೀರಾದಿವಿಷಯೇ ‖ ಎಂದುದಾಗಿ ಧಾತುವಿನತ್ತಣಿಂ ಪರದ ಎವು ಎಂಬುದರ್ಕೆ ವಮ್ ಎಂಬಾದೇಶಂ ಬರ್ಪುದು ಆಶೀರಾದಿವಿಷಯದಲ್ಲಿ — ಆಮೆಲ್ಲರೀಗಳಶ್ವಮೇಧವಂ ಮಾಡುವಂ!

ಇಂತು ಪೇೞ್ದುದಾಗಿ ಆಶೀರ್ವಿಧಿಗಳಾದಿಯಾದುವಱಲ್ಲಿ ಪ್ರಥಮೈಕವಚನಂ—ಆತಂ ಮಾಡುಗೆ, ಆತಂ ಮಾೞ್ಕೆ; ಆತಂ ಮಾಡುವುದು, ಆತಂ ಮಾೞ್ಪುದು.

ಬಹುವಚನಂ—ಅವರ್ ಮಾಡುಗೆ, ಮಾೞ್ಕೆ; ಅವರ್ ಮಾಡುವುದು, ಮಾೞ್ಪುದು.

ಮಧ್ಯಮೈಕವಚನಂ—ನೀಂ ಮಾಡ! ನೀಂ ಮಾಡು! ಮಾಡುವುದು! ಮಾೞ್ಪುದು!

ಬಹುವಚನಂ—ನೀವೆಲ್ಲರ್ ಮಾಡುವುದು! ಮಾೞ್ಪುದು! ಮಾಡಿಂ!

ಉತ್ತಮಪುರುಷೈಕವಚನಂ—ಆಂ ಮಾಡುವೆಂ! ಮಾೞ್ಪೆಂ!

ಬಹುವಚನಂ—ಆವೆಲ್ಲರ್ ಮಾಡುವಂ! ಮಾೞ್ಪಂ! ಎಂದಿಂತಱಿವುದು.

ವೃತ್ತಿ.—ಧಾತುಸ್ವರೂಪದಿಂ ಮಧ್ಯಮಪುರುಷದೇಕವಚನಂ ವಿಧ್ಯರ್ಥವಾಗಿ ಪರಿಣಮಿಸುಗುಂ; ಇರ್ ಎಂಬ ಧಾತುವೊಂದರ್ಕವುುತ್ವಮಕ್ಕುಂ; ವಿಧ್ಯರ್ಥಂ ಕ್ರಿಯಾಸಮಭಿಹಾರದೊಳಮಕ್ಕುಂ.

ಪ್ರಯೋಗಂ.—ಧಾತುಸ್ವರೂಪಕ್ಕೆ—ಸುಡಿ, ಸುಡಿಯೆ ಚಲಂ ಮಂಗುೞಿ ಬೇೞ್ಪುದೆ ಬೇೞ್ಪುದು. ಪಾಡೆಲೆ ತುಂಬಿ! ಬಗ್ಗಿಸೆಲೆ ಕೋಗಿಲೆ! ತೀಡೆಲೆ ಗಂಧವಾಹ! ಹರಿ, ಕೇಳ್! ಧೂಮಪತಾಕೆ, ಕೇಳ್! ನಿರುತಿ, ಕೇಳ್!

ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋ
ಪಾಯದಡಂಗು ನಿಲ್ ಭ್ರಮರಿವೊಲ್ ಭ್ರಮಿಯಂತಿರೆ ಬೆಚ್ಚರಾಗು ಖ!
ಡ್ಗಾಯುಧಚಾಮರಂಪೊಳೆವ ಮಿಂಚನೆ ಪೋಲ್ತಿರೆ ಬೀಸು ನೀಂ ಖಳ
ನ್ಯಾಯದಿನೆಲ್ಲಮಂ ನೆಱಿಯೆ ಕಲ್ತುಪದೇಶಕನಾಗು ಲೋಕದೊಳ್ ||

ಉತ್ಪಲಮಾಲಿಕಾವೃತ್ತಂ ||

ಇರ್ಗೆ—ಇರು ಮರುಳೆ ಶುಷ್ಕವೈಯಾಕರಣಂಗಂ!

ಕ್ರಿಯಾಸಮಭಿಹಾರದ ವಿಧಿಗೆ—ಬಿಡುಬಿಡೆಂದು, ಬಿಡಿಸಿದಂ.

ಕೊಳ್ಕೊಳ್ಳೆಂದ್ಲೊಡನೊಡನೆಯೆ
ತುಳ್ಕುವ ಯುವತಿಯರ ಕರಪರಿಚ್ಯುತಸಲಿಲಂ |
ಗಳ್ಕೊಳೆ ಬಿಡೆ ಕೆದಱುವ ಕಿಂ
ಜಳ್ಕದಿನಾದುದು ಸರೋವರಂ ಕಪಿಶಜಳಂ || ಕಂದಂ ||

ನಡೆ ನಡೆಯೆಂದೇಂ ನಡೆದುದೊಪಡೆ ಪಡೆದಚ್ಚರಿಯಂ.

## ಸೂತ್ರಂ.

ಧಾತುಗಿಸು ಕನ್ನಡಕ್ಕಾ
ಹೇತುವಿನೊಳ್ ಸ್ವಪರಕರ್ತೃವೊಳ್ ಸಂಸ್ಕೃತದಾ |
ಧಾತುಗನೇಕಾಕ್ಷರಕಿಸು
ಜಾತಂ ನಿಜಕರ್ತೃವೊಳ್ ಪ್ರಯೋಜನದೆಡೆಯೊಳ್ || 231 ||

By the Suffix ಇಸು such verbs are formed from Canarese verbal themes, etc. as denote 1, that the agent causes another to do something or causes something to be done or happen (ಪರಕರ್ತೃ, ಅನ್ಯ—, ಭಿನ್ನ—, ಹೇತು—), or 2, that the agent does that which the word expresses (ಸ್ವಕರ್ತೃ, ಸ್ವಯಂಕರ್ತೃ, ನಿಜಕರ್ತೃ) also when a special aim or purpose of the agent is meant. Saṃskṛita polysyllables also serve for the formation of verbs with ಇಸು that are like the Canarese ones under No. 2.

ಪದಚ್ಛೇದಂ.— ಧಾತುಗೆ ಇಸು ಕನ್ನಡಕ್ಕೆ ಆ ಹೇತುವಿನೊಳ್ ಸ್ವಪರಕರ್ತೃವೊಳ್, ಸಂಸ್ಕೃತದ ಆ ಧಾತುಗೆ ಅನೇಕಾಕ್ಷರಕೆ ಇಸು ಜಾತಂ ನಿಜಕರ್ತೃವೊಳ್ ಪ್ರಯೋಜನದ ಎಡೆಯೊಳ್.

ಅನ್ವಯಂ.—ಕನ್ನಡಕ್ಕೆ ಧಾತುಗೆ ಆ ಹೇತುವಿನೊಳ್ ಸ್ವಪರಕರ್ತೃವೊಳ್ ಇಸು ಜಾತಂ, ಸಂಸ್ಕೃತದ ಆ ಧಾತುಗೆ ಅನೇಕಾಕ್ಷರಕೆ ನಿಜಕರ್ತೃವೊಳ್ ಪ್ರಯೋಜನದ ಎಡೆಯೊಳ್ ಇಸು.

ಟೀಕು.—ಕನ್ನಡಕ್ಕೆ = ಕನ್ನಡವಾದ; ಧಾತುಗೆ = ಧಾತುಗಳ್ಗೆ; ಆ ಹೇತುವಿನೊಳ್ = ಆ ಕಾರಣದಲ್ಲಿ; ಸ್ವಪರಕರ್ತೃವೊಳ್ = ಸ್ವಕರ್ತೃಪರಕರ್ತೃವಿನಲ್ಲಿ; ಇಸು = ಇಸುಪ್ರತ್ಯಯಂ; ಜಾತಂ = ಹುಟ್ಟುವುದು; ಸಂಸ್ಕೃತದ = ಸಕ್ಕದದ; ಆ ಧಾತುಗೆ = ಆ ಧಾತುಗಳ್ಗೆ; ಅನೇಕಾಕ್ಷರಕೆ = ಬಹುವರ್ಣಕ್ಕೆ; ನಿಜಕರ್ತೃವೊಳ್ = ಸ್ವಕರ್ತೃವಿನಲ್ಲಿ; ಪ್ರಯೋಜನದೆಡೆಯೊಳ್ = ಪ್ರಯೋಜನದ ತಾವಿನಲ್ಲಿ; ಇಸು = ಇಸುವೆಂಬ ಪ್ರತ್ಯಯಂ ಹುಟ್ಟುವುದು.

ವೃತ್ತಿ.—ಕನ್ನಡದ ಧಾತುವಿಂಗೆ ಹೇತುವಿನೊಳಂ ಸ್ವಯಂಕರ್ತೃಕಪರಕರ್ತೃಕದೊಳಂ ಇಸುವಕ್ಕುಂ; ಸಂಸ್ಕೃತದನೇಕಾಕ್ಷರಧಾತುಗೆ ಸ್ವಯಂಕರ್ತೃವಿನೊಳಿಸುವಕ್ಕುಂ; ಪ್ರಯೋಜನವಸ್ತುವಿನೊಳ್ಕರ್ತೃವಿವಕ್ಷೆಯಾಗೆ, ಇಸುವಕ್ಕುಂ.

ಪ್ರಯೋಗಂ.—ಹೇತುಗೆ—ಮಾತಿಂ ನಗಿಸಿದಂ; ಮೃಗಗಣಮಂ ಪೋದ ಪೆಜ್ಜೆಯಿಂ ಕಾಣಿಸಿದಂ.

ಸ್ವಯಂಕರ್ತೃವಿವಕ್ಷೆಯಾಗೆ—ನಿಟ್ಟಿಸಿದಂ; ಕಂಟಿಸಿದಂ; ತುಟ್ಟಿಸಿದಂ; ಘೃತಾಹುತಿವಡೆದನಲಂತೆ ಮಿಗೆ ದಳ್ಳಿಸಿದಂ.

ಅನ್ಯಕರ್ತೃಗೆ—ನುಡಿಯಿಸಿದಂ; ಮುಡಿಯಿಸಿದಂ; ಕಡೆಯಿಸಿದಂ ಸುರರಿನಸುರರಿಂ ಪಾಲ್ಗಡಲಂ.

ಏಕಾಕ್ಷರದೊಳ್ ಅನ್ಯಕರ್ತೃಗೆ—ಈಯಿಸಿದಂ; ತೀಯಿಸಿದಂ (Mdb. Ms. ತೇ—); ನೋಯಿಸಿದಂ; ಜಗುನೆಯ ತಡಿಯಲ್ಲಿ ತುಱುಗಳಂ ಮೇಯಿಸಿದಂ.

ಸಂಸ್ಕೃತಧಾತುವಿನ ಸ್ವಯಂಕರ್ತೃಗೆ—ಬರ್ಪಂಬಂ ನಿಶಿತವಿಶಿಖದಿಂ ಖಂಡಿಸಿದಂ, ಖಂಡಿಸಿದಪಂ.—ಭಿನ್ನಕರ್ತೃವಿನೊಳಿಸುವಿಲ್ಲ.

ಪ್ರಯೋಜನವಸ್ತುವಿಂಗೆ ಸಂಸ್ಕೃತಕ್ಕೆ—ಚಿತ್ರಿಸಿದಂ; ಮುದ್ರಿಸಿದಂ.

ಕನ್ನಡಕ್ಕೆ—ಪೊಂಗಿಸಿದಂ; ಸೊಪ್ಪಿಸಿದಂ.

## ಸೂತ್ರಂ.

ನೆಗಱ್ದಿರ್ದ ರೇಫಱಱಿನಾಂ
ತಗಾಂತಸಾಂತೋತ್ವದಿದಿರ ವತ್ವಂ ಪತ್ವಂ ।
ಪುಗುಗುಂ ದ್ವಿತ್ವಂ ಮೇಣ್ ಸುಗು
ಯುಗಕ್ಕೆ ಲೋಪೋಕ್ತಿ ನಾಂತಣಾಂತಂ ಬತ್ವಂ ॥ 232 ॥

The ವ of the Future tense (S. 221), when preceded by ರ್ (F), ಱ್ (F), ಟ್, ನ್, ಗ್, ಸ್ and ಒ, becomes ಪ, and this ಪ may be doubled. Under such circumstances ಗ್ and ಸ್ must be elided. The ವ preceded by ನ್ (as an exception) and ಣ್ becomes ಬ.

ಪದಚ್ಛೇದಂ.—ನೆಗಱ್ದು ಇರ್ದ ರೇಫಱಱನಾಂತಗಾಂತಸಾಂತೋತ್ವದ ಇದಿರ ವತ್ವಂ ಪತ್ವಂ; ಪುಗುಗುಂ ದ್ವಿತ್ವಂ ಮೇಣ್; ಸುಗುಯುಗಕ್ಕೆ ಲೋಪೋಕ್ತಿ; ನಾಂತಣಾಂತಂ ಬತ್ವಂ.

ಅನ್ವಯಂ.—ನೆಗಱ್ದಿರ್ದ ರೇಫಱಱನಾಂತಗಾಂತಸಾಂತೋತ್ವದ ಇದಿರ ವತ್ವಂ ಪತ್ವಂ; ಮೇಣ್ ದ್ವಿತ್ವಂ ಪುಗುಗುಂ; ಸುಗುಯುಗಕ್ಕೆ ಲೋಪೋಕ್ತಿ; ನಾಂತಣಾಂತಂ ಬತ್ವಂ.

ಟೀಕು.—ನೆಗಱ್ದಿರ್ದ = ಪ್ರಸಿದ್ಧಿವಡೆದಿರ್ದ; ರೇಫ = ರೇಫೆಯ; ಱ = ಱಕಾರದ; ಱ = ಱಕಾರದ; ನಾಂತ = ನಕಾರಾಂತದ; ಗಾಂತ = ಗಕಾರಾಂತದ; ಸಾಂತ = ಸಕಾರಾಂತದ; ಒತ್ವದ = ಒಕಾರದ; ಇದಿರ = ಮುಂದಣ; ವತ್ವಂ = ಭವಿಷ್ಯಂತಿಯ ವಕಾರಂ; ಪತ್ವಂ = ಪಕಾರವಪ್ಪುದು; ಮೇಣ್ = ವಿಕಲ್ಪದಿಂದೆ; ದ್ವಿತ್ವಂ = ದ್ವಿರ್ಭಾವಂ; ಪುಗುಗುಂ = ಪ್ರವೇಶವಾಗುವುದು; ಸುಗುಯುಗಕ್ಕೆ = ಸುಕಾರ ಗುಕಾರಂಗಳ್ಗೆ; ಲೋಪೋಕ್ತಿ = ಲೋಪದ ವಾಕ್ಯಂ ಬರ್ಪುದು; ನಾಂತಣಾಂತಂ = ನಕಾರಾಂತ ಣಕಾರಾಂತವಾಗೆ; ಬತ್ವಂ = ವಕಾರಂ ಬಕಾರಮಪ್ಪುದು.

ವೃತ್ತಿ.—ರೇಫೞಕಾರಱಕಾರನಕಾರಗಕಾರಸಕಾರಒಕಾರಾಂತದ ಧಾತು ವಿನ ಪರದ ಭವಿಷ್ಯಂತಿಯ ವಕಾರಕ್ಕೆ ಪಕಾರಮಕ್ಕುಂ; ಅದರ್ಕೆ ವಿಕಲ್ಪದಿಂ ದ್ವಿತ್ವಮುಮಕ್ಕುಂ; ಗಾಂತಸಾಂತಧಾತುವಿನ ಕಡೆಗೆಲ್ಲಿಯುಂ ಲೋಪಮಕ್ಕುಂ; ನಾಂತಣಾಂತಂಗಳ ಪರದವತ್ವಕ್ಕೆ ಬತ್ವಮಕ್ಕುಂ.

ಪ್ರಯೋಗಂ.—ರೇಫಕ್ಕೆ—ಕೂರ್ಪಂ, ಬರ್ಪಂ, ತರ್ಪಂ, ಇರ್ಪಂ; ಆ ಪುರ ದೊಳಿರ್ಪನಿನಕುಲದೀಪಂ ವಿಪುಲಪ್ರತಾಪಂ.

ೞಕಾರಕ್ಕೆ—ಆರ್ಪಂ, ತೋರ್ಪಂ, ಮೂರ್ಪಂ, ಮಾರ್ಪಡೆಗೆ ತೋಳ ಬಾಳ ಕೂರ್ಪಂ ತೋರ್ಪಂ.

ಱಕಾರಕ್ಕೆ—ಅಱ್ಪಂ, ಅಗಱ್ಪಂ, ಕೀಱ್ಪಂ.

ಡಕಾರಕ್ಕಾದೇಶವಾದ ಱಕಾರಕ್ಕೆ—ಬೆಗಱ್ಪಂ, ಬಿಸುಱ್ಪಂ, ನೋಱ್ಪಂ, ಬೇಱ್ಪಂ, ಮಾಱ್ಪಂ.

ನಕಾರಕ್ಕೆ—ಆಂಪಂ, (ಆನ್ಪಂ), ನೋಂಪಂ, ಸೀಂಪಂ; ಮಲೆದು ನರನೊ ಳಾಂಪಂ ಗಾನ್ಪಂ.

ಗಾಂತಕ್ಕೆ—ಪೋಪಂ, ತಾಪಂ, ತೂಪಂ, ತೊಳಪ ದಂತಮರೀಚಿಸಂತತಿ ಪರ್ವೆ ಬಳ್ಪಳಂ ನೀಳ್ದು, ಮಿಱುಪಂ, ಲಲಾಟದೊಳ್ ಮಿಱುಪ ಕಣ್ಣುರಿಯಂತೆ.

ಸಾಂತಕ್ಕೆ—ತರಿಪಂ, ಬರಿಪಂ, ಇರಿಪಂ, ಬೆಸಪಂ, ಕಾಪಂ; ನಿನ್ನೊಡ ನೊಂದು ಭಾಗಮಂ ಬರಿಪುದು (Mdb. Ms. ಚರಿಪುದು).

ಒಕಾರಕ್ಕೆ—ಓಪಂ.

ದ್ವಿತ್ವಕ್ಕೆ—ತೊಳಪ್ಪಂ; ಬೆಳಪ್ಪಂ; ಉದಯಿಪ್ಪಂ. ಉದ್ಯಯಿಪ್ಪ ಗಂಡ ಮಾರ್ತಣ್ಡನಲರ್ಚುಗೆಮ್ಮಂ ಗೆಲ್ದು ಬೆಳಪ್ಪನೀಗೆ ಬೀರರಿಗಳಂ.

ಗಕಾರ ಸಕಾರಂಗಳ ಲೋಪಕ್ಕೆ—ಪೋಪಂ, ತಾಪಂ, ಮಿಱುಪಂ;— ತರಿಪಂ, ಬರಿಪಂ, ಇರಿಪಂ.

ಬಕಾರಕ್ಕೆ—ನಾಂಬಂ, ಎಂಬಂ, ತಿಂಬಂ; ಅದು ಪಣ್ಣದು ಪೋಗು ನೀನು ಮಾನುಂ ತಿಂಬಂ.—ಉಣ್ಬಂ, ಕಾಣ್ಬಂ, ಮಾಣ್ಬಂ, ಪೂಣ್ಬಂ. ತಿರಿದುಣ್ಬಂ ಹರನನ್ನಿ ಕಾಡ ಕಸವಂ ತಿಂದಿರ್ದಂ.

## ಸೂತ್ರಂ.

Also the ಪ in ದಪ (the suffix for the Present, *S.* 221) may be doubled.— The two roots ನೋ and ಬೇ, when followed by ದ (the suffix for the Past, *S.* 221) or ದಪ, insert ನ್, and becomes short.

ದಪದ ಪಕಾರಕ್ಕಂ ಸಂ
ದಿಪುದು ವಿಕಲ್ಪದೆ ಬುಧರ್ಕಳಿಂ ದ್ವಿತ್ವಂ ಸಂ।
ದಿಪುದು ನಕಾರಂ ನೋಧಾ
ತುಪರದೊಳಾ ದದಪವೊದವೆ ನೋಗಂ ಹ್ರಸ್ವಂ ॥233॥

ಪದಚ್ಛೇದಂ.—ದಪದ ಪಕಾರಕ್ಕಂ ಸಂದಿಪುದು ವಿಕಲ್ಪದೆ ಬುಧರ್ಕಳಿಂ ದ್ವಿತ್ವಂ. ಸಂದಿಪುದು ನಕಾರಂ, ನೋಧಾತುಪರದೊಳ್ ಆ ದದಪಂ ಒದವೆ; ನೋಗಂ ಹ್ರಸ್ವಂ.

ಅನ್ವಯಂ.—ದಪದ ಪಕಾರಕ್ಕಂ ಬುಧರ್ಕಳಿಂ ದ್ವಿತ್ವಂ, ವಿಕಲ್ಪದೆ ಸಂದಿಪುದು. ನೋಧಾತುಪರದೊಳ್ ಆ ದದಪಂ ಒದವೆ, ನಕಾರಂ ಸಂದಿಪುದು; ನೋಗಂ ಹ್ರಸ್ವಂ.

ಟೀಕು.—ದಪದ = ದಪಕಾರದ; ಪಕಾರಕ್ಕಂ = ಪತ್ವಕ್ಕಂ; ಬುಧರ್ಕಳಿಂ = ವಿದ್ವಾಂಸರಿಂದೆ; ದ್ವಿತ್ವಂ = ದ್ವಿರ್ಭಾವಂ; ವಿಕಲ್ಪದೆ = ವಿಕಲ್ಪದಿಂದೆ; ಸಂದಿಪುದು =, ಸಂದಿಸುವುದು; ನೋಧಾತುಪರದೊಳ್ = ನೋ ಎಂಬ ಧಾತುವಿನ ಪರದಲ್ಲಿ; ಆ ದದಪಂ = ಆ ದಕಾರ ದಪಕಾರಂಗಳ್; ಒದವೆ = ಪ್ರಾಪ್ತಿಸೆ; ನಕಾರಂ = ನಕಾರಾಗಮಂ; ಸಂದಿಪುದು = ಬರ್ಪುದು; ನೋಗಂ = ನೋ ಎಂಬುದರ್ಕಂ; ಹ್ರಸ್ವಂ = ಹ್ರಸ್ವಂ ಬರ್ಪುದು.

ವೃತ್ತಿ.—ವಿಕಲ್ಪದಿಂ ದಪದ ಪಕಾರಕ್ಕಂ ದ್ವಿತ್ವಮಕ್ಕುಂ. ದ ದಪಂಗಳೊಧವೆ ನೋಧಾತುವಿನ ಪರದೊಳ್ ನಕಾರಮುಂ ನೋಗೆ ಹ್ರಸ್ವಮುಮ್ ಅಕ್ಕುಂ. ಸಮುಚ್ಚಯದಿಂಬೇ ಎಂಬ ಧಾತುಗಮಂತೆ.

ಪ್ರಯೋಗಂ.—ದ್ವಿತ್ವವಿಕಲ್ಪಕ್ಕೆ—ಬರೆದಪಂ, ಬರೆದಪ್ಪಂ; ಕರೆದಪಂ, ಕರೆದಪ್ಪಂ; ನಿಲಿಸಿದಪಂ, ನಿಲಿಸಿದಪ್ಪಂ; ಇೞಿದಪಂ, ಇೞಿದಪ್ಪಂ; ಇರಿಸಿದಪ್ಪಂ, ಮಗಧೇಶನಂ ನಿಲಿಸಿದಪ್ಪಂ ಚೋೞನಂ ಭಾಷೆಯಂ ಹರಿ ಕೇಳ್.

ನೋಬೇಧಾತುಗಳ್ಗೆ—ನೊಂದಂ, ನೊಂದಪಂ: ಬೆಂದಂ, ಬೆಂದಪಂ.

## ಸೂತ್ರಂ.

When the action of the second person of a prohibition (ಪ್ರತಿಷೇಧಂ) is changed into an order (ವಿಧಿ), ಅಲಿಂ (ಅಲ್ + ಇಂ) is used[1]. ಅಲ್ denotes *a*) prohibition, is used *b*) to express usefulness or fitness for, and *c*) to make an action the object of an action.

ಸತತಂ ಮಧ್ಯಮಪುರುಷ
ಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾ |
ಶ್ರಿತಹೇತುಕ್ರಿಯೆಯೊಳಮ
ನ್ವಿತಮಲ್ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆಗಳೊಳಂ
|| 234 ||

ಪದಚ್ಛೇದಂ.—ಸತತಂ ಮಧ್ಯಮಪುರುಷಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾಶ್ರಿತಹೇತುಕ್ರಿಯೆಯೊಳಂ ಅನ್ವಿತಂ ಅಲ್ ಕ್ರಿಯೆ ತಾಂ ಕ್ರಿಯಾರ್ಥಂ ಅಪ್ಪ ಎಡೆಗಳೊಳಂ.

ಅನ್ವಯಂ.—ಸತತಂ ಮಧ್ಯಮಪುರುಷಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾಶ್ರಿತಹೇತುಕ್ರಿಯೆಯೊಳಂ ಕ್ರಿಯೆ ತಾಂ ಕ್ರಿಯಾರ್ಥಂ ಅಪ್ಪೆಡೆಗಳೊಳಂ ಅಲ್ ಅನ್ವಿತಂ.

ಟೀಕು.—ಸತತಂ = ಆವಾಗಳುಂ; ಮಧ್ಯಮಪುರುಷ = ಮಧ್ಯಮಪುರುಷದ; ಪ್ರತಿಷೇಧದ = ಪ್ರತಿಷೇಧಾರ್ಥದ; ವಿಧಿಯೊಳಂ = ವಿಧಿಯಲ್ಲಿಯುಂ; ಪ್ರಯೋಜನವಸ್ತು = ಪ್ರಯೋಜನವಸ್ತುವಿನಲ್ಲಿ; ಆಶ್ರಿತ = ಆಶ್ರಯಿಸಲ್ಪಟ್ಟ; ಹೇತುಕ್ರಿಯೆಯೊಳಂ = ಕಾರಣಕ್ರಿಯೆಯಲ್ಲಿಯುಂ; ಕ್ರಿಯೆ = ಕ್ರಿಯೆ; ತಾಂ = ತಾಂ; ಕ್ರಿಯಾರ್ಥಂ = ಕ್ರಿಯಾಪ್ರಯೋಜನಂ; ಅಪ್ಪೆಡೆಗಳೊಳಂ = ಆಗುವೆಡೆಗಳಲ್ಲಿಯುಂ; ಅಲ್ = ಅಲ್ಲೆಂಬುದು; ಅನ್ವಿತಂ = ಕೂಡಲ್ಪಡುವುದು.

ವೃತ್ತಿ.—ಮಧ್ಯಮಪುರುಷಪ್ರತಿಷೇಧದ ಕ್ರಿಯೆ ವಿಧ್ಯರ್ಥಮಾದಲ್ಲಿಯುಂ ಪ್ರಯೋಜನವಸ್ತುವಿಂಗೆ ನಿಮಿತ್ತಮಪ್ಪ ಕ್ರಿಯೆಯೊಳಂ ಕ್ರಿಯೆ ತಾಂ ಕ್ರಿಯಾರ್ಥಮಂ ಪೇೞ್ವೆಡೆಯೊಳಂ ಅಲ್ ಅಕ್ಕುಂ.

ಪ್ರಯೋಗಂ.—ವಿಧ್ಯರ್ಥಮಾದಲ್ಲಿ—ಉಸಿರಲಿಂ; ಸಾರಲಿಂ ಬಲ್ಲೆಱಿಯನೆಂದುದೆ ಮಾತು; ಮಾಱಲಿಂ; ಏಳಿದಂ ಗೆಯ್ಯಲಿಮಾಗಳೆಮ್ಮೊಳ್; ಆರಯ್ದಾರುಂ ಸಾರಲಿಂ

---

[1] The 88th Sûtra of the 4th Pâda of the ಶಬ್ದಾನುಶಾಸನಂ says: || ಪ್ರಾಕ್ಪ್ರಯೋಗೇ ಚಾವಿಕೃತಾತ್ || ಅವಿಕೃತಾದಿಮಃ ಪ್ರಾಗ್ ಅಲ್‌ಭವತಿ ಬೇಡಂ ಬೇಡ ಇತ್ಯನಯೋಃ ಪ್ರಯೋಗೇ ಅಪ್ರಯೋಗೇ ಚ ವಿಷಯೇ || Examples: ಪೆಂಡಿರಂ ನಂಬಲಿಂ ಬೇಡಂ | ನಂಬಲಿಂ ಬೇಡ | ನಂಬಲಿಂ | ಅಕಾರ್ಯಮಂ ಮಾಡಲಿಂ ಬೇಡಂ | ಮಾಡಲಿಂ ಬೇಡ | ಮಾಡಲಿಂ | ಅವಿಕೃತಾದಿತಿ ಕಿಂ || ನೋಡಲ್ ಬೇಡ | etc.

ಪ್ರತಿಷೇಧಕ್ರಿಯೆಯೊಳ್ ಅಲ್ ಅಕ್ಕುಂ—ಪೆಱತೊಂದನಣಂಬಗೆಯಲ್ ಗಡ ನಿನಗೆ ಸುಮತಿ ಬೇಡಿಱಂ ಬೇಡಿಱೆ. ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ.

ಪ್ರಯೋಜನವಸ್ತುಕ್ರಿಯೆಗೆ — ಱಿಯಲ್ತಕ್ಕೆಳವತ್ಗಳ್ಗೆ; ಬಿಡದೀಯಲ್ತಕ್ಕ ಸಂಪತ್ತಿ ಮಾತಱಿಯಲ್ತಕ್ಕ ವಿವೇಕಂ.

ಕ್ರಿಯೆಗೆ — ಗೆಲಲ್ಬಗೆದಂ; ಪುಗಲ್ಬಂದಂ; ಮುತ್ತಲ್ವೇಟ್ಟಿಂ; ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ.

## ಸೂತ್ರಂ.

In the last two cases the Dative of ಅಲ್ (ಅಲ್ಕೆ) may be used, or the ಲ್ be dropped.

ಸಂದಿಪುದಲ್ವಿನ ಪರದೊಳ್
ಬಂದು ಕೆಕಾರಮುಮದೊರ್ಮೆ ವೈಕಲ್ಪಿಕದಿಂ |
ಸಂದಿಪುದಲ್ಗಂ ಲೋಪಂ
ಬಂದಾ ಪ್ರತಿಷೇಧವಿಧಿಯನೊದವದ ಪಕ್ಷಂ ||235||

ಪದಚ್ಛೇದಂ.— ಸಂದಿಪುದು ಅಲ್ವಿನ ಪರದೊಳ್ ಬಂದು ಕೆಕಾರಮುಂ ಅದು ಒರ್ಮೆ, ವೈಕಲ್ಪಿಕದಿಂ ಸಂದಿಪುದು ಅಲ್ಗಂ ಲೋಪಂ ಬಂದು, ಆ ಪ್ರತಿಷೇಧವಿಧಿಯುಂ ಒದವದ ಪಕ್ಷಂ.

ಅನ್ವಯಂ. — ಆ ಪ್ರತಿಷೇಧವಿಧಿಯಂ ಒದವದ ಪಕ್ಷಂ ಅಲ್ವಿನ ಪರದೊಳ್ ಕೆಕಾರಮುಂ ಅದು ಒರ್ಮೆ ಬಂದು ಸಂದಿಪುದು, ವೈಕಲ್ಪಿಕದಿಂ ಅಲ್ಗಂ ಲೋಪಂ ಬಂದು ಸಂದಿಪುದು.

ಟೀಕು. — ಆ ಪ್ರತಿಷೇಧವಿಧಿಯಂ = ಆ ಮಧ್ಯಮಪುರುಷದ ಪ್ರತಿಷೇಧದ ವಿಧಿಯಂ; ಒದವದ ಪಕ್ಷಂ = ಪ್ರಾಪ್ತಿಸದ ಪಕ್ಷದಲ್ಲಿ; ಅಲ್ವಿನ = ಅಲ್ ಎಂಬುದಱ; ಪರದೊಳ್ = ಮುಂದುಗಡೆಯಲ್ಲಿ; ಕೆಕಾರಮುಂ = ಕೆಕಾರಮುಂ; ಅದು = ಅದು; ಒರ್ಮೆ = ಒಂದು ಬಾರಿ; ಬಂದು = ಬಂದು; ಸಂದಿಪುದು = ಸಂದಿಸುವುದು; ವೈಕಲ್ಪಿಕದಿಂ = ವಿಕಲ್ಪದಿಂದೆ; ಅಲ್ಗಂ = ಅಲ್ ಎಂಬುದಱ ಲಕಾರಕ್ಕಂ; ಲೋಪಂ = ಅದರ್ಶನಂ; ಬಂದು ಸಂದಿಪುದು = ಬರ್ಪುದು.

ವೃತ್ತಿ.—ಪ್ರತಿಷೇಧದ ವಿಧಿ ಪೊರ್ದದೊಡಲುವಿನ ಮುಂದೊರ್ಮೆ ಕೆಕಾರಮಕ್ಕುಂ; ಅಯುಲ್ಗೆ ವಿಕಲ್ಪದಿಂ ಲೋಪಂ.

ಪ್ರಯೋಗಂ. — ಕೆಕಾರಕ್ಕೆ — ನುಡಿಯಲ್ಕೆ ಬಲ್ಲಂ; ಪೇೞಲ್ಕೆ ಕೇಳ್ದಂ; ಬೇಡಲ್ಕೆ ಬಂದಂ; ಬಿತ್ತರಿಸಲ್ಕೆವೇೞ್ ಸುವರ್ಣೋತ್ಕರಮಂ.

ಅಲುವಿನ ಲೋಪಕ್ಕೆ — ಉಡಲ್ವೇೞ್ ಉಡವೇೞ್; ತರಲ್ವೇೞ್, ತರವೇೞ್; ತರವೇೞ್ ಸನ್ನಿಧವಾಜಿಸಾಧನಮಂ.

## ಸೂತ್ರಂ.

The Terminations for the Past Participle (ಭೂತಕಾಲ ಕ್ರಿಯೆ) are ಉ and ಇ; those for the Present Participle (ವರ್ತಮಾನಕ್ರಿಯೆ) are ಉತುಂ, ಉತ್ತುಂ, ಉತ್ತೆ, ಉತೆ.

ಪ್ರತಿಪಾದ್ಯಮುತ್ವಮಿತ್ವಂ
ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗಾ ।
ಯುತುಮುತ್ತುಮುತ್ತೆಯುತೆಯೆಂ
ದು ತಗುಳ್ಗುಂ ವರ್ತಮಾನವಿಹಿತಕ್ರಿಯೆಯೊಳ್ ‖ 236 ‖

ಪದಚ್ಛೇದಂ.—ಪ್ರತಿಪಾದ್ಯಂ ಉತ್ವಂ ಇತ್ವಂ ಮತಿವಂತರಿಂ ಎಯ್ದೆ ಪೂರ್ವಕಾಲಕ್ರಿಯೆಗೆ; ಆ, ಉತುಂ ಉತ್ತುಂ ಉತ್ತೆ ಉತೆ ಎಂದು, ತಗುಳ್ಗುಂ ವರ್ತಮಾನವಿಹಿತಕ್ರಿಯೆಯೊಳ್.

ಅನ್ವಯಂ.—ಮತಿವಂತರಿಂ ಎಯ್ದೆ ಪೂರ್ವಕಾಲಕ್ರಿಯೆಗೆ ಉತ್ವಂ ಇತ್ವಂ ಪ್ರತಿಪಾದ್ಯಂ; ವರ್ತಮಾನವಿಹಿತಕ್ರಿಯೆಯೊಳ್ ಆ, ಉತುಂ ಉತ್ತುಂ ಉತ್ತೆ ಉತೆ ಎಂದು, ತಗುಳ್ಗುಂ.

ಟೀಕು.—ಮತಿವಂತರಿಂ=ಬುದ್ಧಿವಂತರಿಂದೆ; ಎಯ್ದೆ=ಚನ್ನಾಗಿ; ಪೂರ್ವಕಾಲಕ್ರಿಯೆಗೆ=ಮೊದಲ ಕಾಲದ ಕ್ರಿಯೆಗೆ; ಉತ್ವಂ=ಉಕಾರಂ; ಇತ್ವಂ=ಇಕಾರಂ; ಪ್ರತಿಪಾದ್ಯಂ=ಪ್ರತಿಪಾದಿಸಲ್ಪಡುವುದು; ವರ್ತಮಾನ=ವರ್ತಮಾನಕಾಲದಲ್ಲಿ; ವಿಹಿತ=ಕೂಡಲ್ಪಟ್ಟ; ಕ್ರಿಯೆಯೊಳ್=ಕ್ರಿಯೆಯಲ್ಲಿ; ಆಯುತುಂ=ಆ ಉತುಂ ಎಂದು; ಉತ್ತುಂ=ಉತ್ತುಂ ಎಂದು, ಉತ್ತೆ=ಉತ್ತೆ ಎಂದು; ಉತೆ=ಉತೆ ಎಂದು; ತಗುಳ್ಗುಂ=ಎಯ್ದುವದು.

ವಿಚಾರಂ (not in Mdb. Ms.).—ಈ, ಓ, ಕಾ, ಕೀ, ಕೇ, ನೋ, ಪೂ, ಬೇ, ಬಾ ಎಂಬೇಕಾಕ್ಷರ ಧಾತುಗಳ್ಗಂ ಇಕಾರಾಂತಂಗಳ್ಗಂ ಎಕಾರಾಂತಂಗಳ್ಗಂ ಉಕಾರಂ ಪತ್ತುವುದು. ಉಕಾರಾಂತಂಗಳ್ಗೆ ಇಕಾರಂ ಪತ್ತುವುದು. ವ್ಯಂಜನಾಂತಂಗಳ್ಗೆ ಎರಡುಂ ಪತ್ತುಗುಂ. ಅಲ್ಲಿ ಉತ್ವಂ ಪತ್ತಿದಲ್ಲಿ ಭೂತಕಾಲದ ದಕಾರಂ ಪತ್ತುವುದು, ಇತ್ವಂ ಪತ್ತಿದಲ್ಲಿ ದತ್ವಂ ಬಾರದು; ಆವಂ ಪ್ರಯೋಗಂಗಳಲ್ಲಿ ನೋಡಿ ತಿಳಿವುದು. ಬಂದಂ ಪೋದಂ ಎಂಬಲ್ಲಿ ಬಂದು ಪೋದಂ; ಪೋದಂ ಬಂದನೆಂಬಲ್ಲಿ ಪೋಗಿ ಬಂದಂ ಎಂಬಂತೆ.

ವೃತ್ತಿ.—ಭೂತಕಾಲಕ್ರಿಯೆಯೊಳುಕಾರಮುಮಿಕಾರಮುಮಕ್ಕುಂ; ವರ್ತಮಾನಕ್ರಿಯೆಯೊಳುತುಂ ಉತ್ತುಂ ಉತ್ತೆ ಉತೆ-ಎಂದು ನಾಲ್ಕು ರೂಪಮಕ್ಕುಂ.

ಭೂತಕಾಲದುಕಾರಕ್ಕೆ—ಕುಸಿದು ನಡೆದಂ; ಒಸೆದು ಕೊಟ್ಟಂ; ನೆನೆದು ಪೇಳ್ದಿಂ; ಮಿಂದುಂಡು ಕುಡಿದು ಪುಗುಳ್ದಿಂ ಬಂದಿರ್ಪೂಡಮಿರ್ಪ.

ಇಕಾರಕ್ಕೆ—ನಚ್ಚಿ ಬಂದಂ; ಮುಚ್ಚಿ ಪೊಗಳ್ದಿಂ; ಎತ್ತಿ ನಡೆದಂ; ಮುತ್ತಿ ಬಿಟ್ಟಂ, ತಿರ್ದಿ ನರನುದ್ದಮಿಸೆ ಬೇಡಿಕೊಳ್ದಿಂ.

ವರ್ತಮಾನದೊಳ್ ಉತುಗೆ—ನಗುತುಂ ಬಂದಂ; ಪುಗುತುಮಿರ್ದಂ; ಕರೆಯುತುಂ ಪೋದಂ; ಸೂಸುತುಂ ನದನದ್ಯಚ್ಛಜಲಂಗಳಂ.

ಉತ್ತುಗೆ—ಕಾದುತ್ತುಂ ಬಂದಂ; ಜಡಿಯುತ್ತುಂ ಪೊಡೆದಂ; ಕೆದಱುತ್ತುಂ ಮಣಲಂ; ಕಪಿಧ್ವಜಂ; ನಿಳ್ಕಿ ನಿವರ್ತಿಸುತ್ತುಮಿರೆ.

ಉತ್ತೆಗೆ—ಕೆತ್ತುತ್ತೆ ಕಡಿದಂ; ಪರಸುತ್ತೆ ಬಂದಂ; ಪೋಗು ಪೋಗು ಕಾದುತ್ತೆ ಬಂದಪೆಂ ಸಲ್ಲವೆಮ್ಮೊಳಿವು.

ಉತೆಗೆ—ಮಿಱುಗುತೆ ಪೋದಂ; ಎಷ್ಟುತೆ ನಿಂದಂ; ಇಸುತಿರ್ದಂ; ತನ್ನಾಜ್ಞೆಗೆ ಪೇಱುತಿರ್ಪರ್ (?).

## ಸೂತ್ರಂ.

When the roots ಮಿಾ, ತರ್, ಬರ್ ಕೊಲ್ and ಸಲ್ are followed by ದ and ದಪ, they become ಮಿನ್, ತನ್, ಬನ್, ಕೊನ್ and ಸನ್; ನಿಲ್ may keep its form.

ದ ದಪಂಗಳ್ಪರದೊಳ್ತಾ
ಮೊದವಿರೆ ಮಿಾಯೆಂಬುದರ್ಕೆ ತರ್ಬರ್ಗರ್ಗಳ್ಗಂ ।
ದಿದ ಕೊಲ್ಸಲ್ಗಳ್ಗಮರ್ದಿ
ರ್ಪುದು ನತ್ವಂ ನಿಲ್ಗೆ ಬಲ್ಲರಿಂದೆ ವಿಕಲ್ಪಂ ॥ 237 ॥

ಪದಚ್ಛೇದಂ.—ದ ದಪಂಗಳ್ ಪರದೊಳ್ ತಾಂ ಒದವಿ ಇರೆ, ಮಿಾ ಎಂಬುದರ್ಕೆ ತರ್ ಬರ್ಗಳ್ಗೆ ಒಂದಿದ ಕೊಲ್ ಸಲ್ಗಳ್ಗೆ ಅಮರ್ದು ಇರ್ಪುದು ನತ್ವಂ; ನಿಲ್ಗೆ ಬಲ್ಲರಿಂದೆ ವಿಕಲ್ಪಂ.

ಅನ್ವಯಂ.—ಪರದೊಳ್ ದ ದಪಂಗಳ್ ತಾಂ ಒದವಿರೆ, ಮಿಾ ಎಂಬುದರ್ಕೆ ತರ್ ಬರ್ಗಳ್ಗೆ ಒಂದಿದ ಕೊಲ್‌ಸಲ್ಗಳ್ಗೆ ನತ್ವಂ ಅಮರ್ದು ಇರ್ಪುದು; ನಿಲ್ಗೆ ಬಲ್ಲರಿಂದೆ ವಿಕಲ್ಪಂ.

ಟೀಕು.—ಪರದೊಳ್ = ಧಾತುವಿನ ಪರದಲ್ಲಿ; ದ ದಪಂಗಳ್ = ದಕಾರ ದಪಕಾರಂಗಳ್; ತಾಂ = ತಾಂ; ಒದವಿರೆ = ಪ್ರಾಪ್ತಿಸಿರೆ; ಮಿಾ ಎಂಬುದರ್ಕೆ = ಮಿಾ—ಸ್ನಾಪನೇ—ಎಂಬ ಧಾತುವಿಂಗೆ; ತರ್ಬರ್ಗಳ್ಗೆ = ತರ್ ಬರ್ ಎಂಬ ಧಾತುಗಳ್ಗೆ; ಒಂದಿದ ಕೊಲ್ಸಲ್ಗಳ್ಗೆ = ಕೂಡಿದ ಕೊಲ್ ಸಲ್ ಎಂಬ ಧಾತುಗಳ್ಗೆ; ನತ್ವಂ = ನಕಾರಂ; ಅಮರ್ದಿರ್ಪುದು = ಪೊರ್ದುಗೆಯಾಗಿರ್ಪುದು; ನಿಲ್ಗೆ = ನಿಲ್ ಎಂಬುದರ್ಕೆ; ಬಲ್ಲರಿಂದೆ = ಬಲ್ಲ ವಿದ್ವಾಂಸರಿಂದೆ; ವಿಕಲ್ಪಂ = ವಿಕಲ್ಪವಾಗಿ ಬರ್ಪುದು.

ವಿಚಾರಂ (not in Mdb. Ms.).—ಶಬ್ದಾನುಶಾಸನದಲ್ಲಿ ಸೂತ್ರಂ— ॥ ಕೊಲ್ಸಲೋರ್ ನಃ ॥ 4, 50 ॥ ಕೊಲ್ಸಲ್ ಇತ್ಯೇತಯೋರ್ಧಾತ್ವೋರ್ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಪರೇ ॥ ಎಂದುದಾಗಿ ಕೊಲ್ ಸಲ್ ಎಂಬ ಧಾತುಗಳ್ಗೆ ನಕಾರಾದೇಶಮುಕ್ಕುಂ

ದಕಾರಾದಿಪ್ರತ್ಯಯಂ ಪರಮಾಗೆ. ‖ ತರ್ಬರೋರ್ ಇಮಿ ಚ ‖ 4, 51 ‖ ತರ್ಬರ್ ಇತ್ಯೇತ ಯೋರ್ಧಾತ್ವೋರ್ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಇಮಿ ಚ ಪರೇ ‖ ಎಂದು ದಾಗಿ ತರ್·ಬರ್ ಎಂಬ ಧಾತುಗಳ್ಗೆ ನಕಾರಾದೇಶಮಕ್ಕು, ದಕಾರಾದಿಪ್ರತ್ಯಯಂ ಪರಮಾಗೆಯುಂ ಮಧ್ಯಮಪುರುಷದ ವಿಧ್ಯರ್ಥದ ಬಹುವಚನವಾದ ಇಮ್ ಎಂಬುದು ಪರಮಾಗೆಯುಂ; ಅದೆಂತೆಂದೊಡೆ— ತಂದಂ, ತಂದಪಂ, ತಂದು, ತನ್ನಿಂ; ಬಂದಂ, ಬಂದಪಂ, ಬಂದು, ಬನ್ನಿಂ ಎಂದರಿವುದು.

ವೃತ್ತಿ.—ದಪಂಗಳ್ಪರಮಾಗೆ, ಮಿಾ ಎಂಬುದರ್ಕಂ ತರ್ ಬರ್ಗಳ ರೇಫೆಗಂ ಕೊಲ್ ಸಲ್ಗಳ ಲತ್ವಕ್ಕಂ ನಕಾರಾದೇಶಂ; ನಿಲ್ ಎಂಬುದರ್ಕೆ ವಿಕಲ್ಪಂ.

ಪ್ರಯೋಗಂ.—ಕ್ರಮಪ್ರಯೋಗಕ್ಕೆ—ಅಲರ ಮೞೆಯೊಳ್ ಮಿಂದಂ ಭೂಪಾಳಮನ್ಮಥನಾಜಿಯೊಳ್; ನಡೆ ತಂದಂ ಮೇರೆದಪ್ಪಿ ಕವಿವಂಬುಧರಂ ಬೊಲ್; ಆವನ ಬೀಡಿನಭಿರಮ್ಯರೋಜವಾರ್ತಂದರಿದಂ (?); ಬಂದಂ ಪಲ್ಗುಣನಿಲ್ಲ ಸಂದಯಮಣಂ ತಾನಿಲ್ಲ; ಕೊಂದನಿಂನೆಗೊಂಡೆಗಳನೆಯ್ದುವು (?); ತಂತಮನೆ ಕೊಂದರೆಂದು ಪಡೆಯಾ ಸಕಳಂ; ಕೊಂದಂ ಕೊಳ್ವಂತೆ ರಸಮನಂ ಜನಸಿದ್ಧಂ; ಬೇಡರ ಪೋಲ್ ಮಸಗಿ ತುೞಿಗೊಳಲ್ ಬೞಿ ಸಂದಂ (Mdb. Ms. ತೞಿ—); ಮಿಂದಪಂ, ತಂದಪಂ, ಬಂದಪಂ, ಕೊಂದಪಂ, ಸಂದಪಂ.

ನಿಲ್ಗೆ—ನಿಂದಂ, ನಿಲ್ತಂ; ನಿಂದಪಂ, ನಿಲ್ತಪಂ. ಮಂಡಲವ್ಯೂಹಮನೊಡ್ಡಿ ನಿಂದು ನಿೞಿಯಲ್; ಬೆನ್ನೊಳ್ ನಿಲ್ತಂ ಗಾಂಡೀವಿ.

## ಸೂತ್ರಂ.

Further, before the affixes ದ and ದಪ, the roots ಇಸು, ಬಿಸು, ಗಿೞು, ಕಿೞು, ತಿೞು and ಕಿಡು, changing their ಇ into ಎ, become ಎಚ್, ಬೆಚ್, ಗೆತ್, ಕೆತ್, ತೆತ್, ಕೆಟ್; and the roots ಉಗು, ಪುಗು, ಕುಡು, ತುಡು, changing their ಉ into ಒ, become ಒಕ್, ಪೊಕ್, ಕೊಟ್, ತೊಟ್.—The ಅ in ತರ್ and ಬರ್ lengthened in the Negative (ವಿಲೋಮಕ್ರಿಯೆ).

ಪ್ರಕೃತಿಯ ಪೂರ್ವದಿಕಾರದೊ
ಳುಕಾರದೊಳ್ ಹ್ರಸ್ವದೆತ್ವಮೊತ್ವಂ ಬಹುಳಂ |
ಪ್ರಕಟಂ ತರ್ಬರ್ಗಳ ಮೊದ
ಲಕಾರದೊಳ್ದೀರ್ಘವಿಧಿ ವಿಲೋಮಕ್ರಿಯೆಯೊಳ್ ‖238‖

ಪದಚ್ಛೇದಂ. — ಪ್ರಕೃತಿಯ ಪೂರ್ವದ ಇಕಾರದೊಳ್ ಉಕಾರದೊಳ್ ಹ್ರಸ್ವದ ಎತ್ವಂ ಒತ್ವಂ ಬಹುಳಂ; ಪ್ರಕಟಂ ತರ್ ಬರ್ಗಳ ಮೊದಲ ಅಕಾರದೊಳ್ ದೀರ್ಘವಿಧಿ ವಿಲೋಮಕ್ರಿಯೆಯೊಳ್.

ಅನ್ವಯಂ.—ವಿಲೋಮಕ್ರಿಯೆಯೊಳ್ ತರ್‌ಬರ್ಗಳ ಮೊದಲ ಅಕಾರದೊಳ್ ದೀರ್ಘ ವಿಧಿ ಪ್ರಕಟಂ ಎಂಬುದನ್ವಯಂ.

ಟೀಕು.—ದ ದಪಂಗಳ್ಪರಪೂದ ಎಂಬುದನುವರ್ತನೆ—ಪ್ರಕೃತಿಯ = ದ ದಪಂಗಳ್ಪರ ವೂದ ಧಾತುವಿನ; ಪೂರ್ವದ = ವೊದಲ; ಇಕಾರದೊಳ್ = ಇಕಾರದಲ್ಲಿ; ಉಕಾರದೊಳ್ = ಉ ಕಾರದಲ್ಲಿ; ಹ್ರಸ್ವಪ = ಹ್ರಸ್ವದ; ಎತ್ವಂ = ಎಕಾರಂ; ಒತ್ವಂ = ಒಕಾರಂ; ಬಹುಳಂ = ಬಹುಳ ವಾಗಿ ಬರ್ಪುದು; ವಿಲೋಮಕ್ರಿಯೆಯೊಳ್ = ಪ್ರತಿಷೇಧದ ಕ್ರಿಯೆಯೊಳ್; ತರ್‌ಬರ್ಗಳ = ತರ್ ಬರ್ ಎಂಬ ಧಾತುಗಳ; ಮೊದಲ = ಆದಿಯ; ಅಕಾರದೊಳ್ = ಅತ್ವದಲ್ಲಿ; ದೀರ್ಘವಿಧಿ = ದೀ ರ್ಘದ ವಿಧಿ; ಪ್ರಕಟಂ = ಸಿದ್ಧವಾಗುವುದು.

ವಿಚಾರಂ.—ಇಸು, ಬಿಸು, ಗಿಱು, ಕಿಱು, ತಿಱು, ಕಿಡು, ಉಗು, ಪುಗು, ಕುಡು, ತುಡು ಎಂಬೀ ಹ್ರಸ್ವಾದಿದ್ವಿಸ್ವರಂಗಳಾದುಕಾರಾಂತಧಾತುಗಳ್ಗೆ ಕ್ರಮದಿಂದೆ ಆದಿಯ ಇಕಾರಕ್ಕೆಕಾರಂ ಉಕಾರಕ್ಕೊಕಾರಂ ಬರ್ಪುವೆಂದಱಿವುದು.

ವೃತ್ತಿ.—ದ ದಪಂಗಳ್ಪರಪೂದ ಧಾತುವಿನ ವೊದಲಿಕಾರದೊಳಮುಕಾರದೊಳಂ ಹ್ರಸ್ವಮಪ್ಪೆತ್ವಮುವೊತ್ವಮುಮಕ್ಕುಂ; ತರ್ ಬರ್ ಎಂಬ ಧಾತುಗಳ ವೊದಲಕಾರಕ್ಕೆ ಪ್ರತಿಷೇಧಕ್ರಿಯೆಯೊಳ್ ದೀರ್ಘಮಕ್ಕುಂ.

ಪ್ರಯೋಗಂ.—ಇತ್ವದೆತ್ವಕ್ಕೆ—ಬಿಸು, ಬೆಚ್ಚಂ; ತಿಱು, ತೆತ್ತಂ; ಗಿಱು, ಗೆತ್ತಂ; ಕಿಡು, ಕೆಟ್ಟಂ. ಮಱುಗುವಿನಂ ಮಾಣದೆಚ್ಚನರಿವಾಹಿನಿಯಂ; ಮುಗಿಲಂ ಮಾಱಾನೆಗೆತ್ತಂ.

ಉತ್ವದೊತ್ವಕ್ಕೆ—ಉಗು, ಒಕ್ಕಂ; ಪುಗು, ಪೊಕ್ಕಂ; ಕುಡು, ಕೊಟ್ಟಂ, ಎನಿತುವನಿತುಮಂ ಧರ್ಮಜಂ ಸೂಱೆಗೊಟ್ಟಂ; ತುಡು, ತೊಟ್ಟಂ, ತೊಟ್ಟಂ ಸಂಮೋಹನಮಂ.

ದಪದೊಳಂ—ಎಚ್ಚಪಂ, ಬೆಚ್ಚಪಂ, ತೊಟ್ಟಪಂ, ಕೊಟ್ಟಪಂ ಎಂಬಂತವರ್ಕಂ ಪತ್ತುಗುಂ.

ಬಹುಳದಿಂ ಕೆಲವಱೊಳೆತ್ವವೊತ್ವಮಿಲ್ಲ—ಇತ್ತಂ; ಇರ್ದಂ, ಪಸೆಯಿರ್ದಂ ಗರುಡವೇಗನೃಪನಂದನೆಯೊಳ್; ಇಟ್ಟಂ, ಬೇಟ್ಪಿರಿದಿರೊಳ್ ಚತ್ರಾವಿಚ್ಛಿನ್ನಂಗಳಂ ತರಿಸಿಟ್ಟಂ;—ಉಟ್ಟಂ; ಸುಟ್ಟಂ, ಜವದಿಂದಗಮಲೆಯಂ ಸುಟ್ಟಂ; ಕಲ್ಪ್ರಿತ್ತಿಯಿಂದುಟ್ಟಿಂ; ಉರ್ಕಿದಂ; ಸುರ್ಕಿದಂ. ಆಗಳೆ ಗಂಡುಡಿಗೆಯುಟ್ಟು ಬಿಟ್ಟು ಹಿಣಿಲಂ. ದಪಕ್ಕಮಂತೆ.

ದೀರ್ಘಕ್ಕೆ—ಪತಿಗೆಂದು ಯುದ್ಧದೊಳ್ ಬನ್ನಮುಂ ತಾರಂ. ನೃಪಂ ಬೆಂಬಿಟ್ಟಿಂ ದೂದಟ್ಟಿಯುಂ ಬಾರಂ.

ಬಹುಳದಿಂ ಪ್ರತಿಷೇಧಮಲ್ಲಿದಲ್ಲಿಯುಂ (ವಿಧಿಯೊಳ್) ದೀರ್ಘಮುಂ ಟು—ಬಾರ ಮರಾಳಿಕಾಗಮನೇ!

## ಸೂತ್ರಂ.

ಧಾತುವಿನಂತ್ಯದ ವರ್ಗೋ
ಪೇತತೃತೀಯಾಕ್ಷರಕ್ಕೆ ತಾಂ ಪ್ರಥಮತ್ವಂ |
ಮಾತೇಂ ವ್ಯಂಜನರೂಪದಿ
ನೇ ತೆಱದಿಂ ಸ್ವಂತಧಾತುಗಕ್ಕುಂ ಚತ್ವಂ || 239 ||

Further, as partly seen by S. 238, before the affixes ದ and ದಪ, the roots ಪುಗು, ನಗು, ಉಗು, ಮಿಗು, ಅಡು, ಸುಡು, ಕುಡು, ತುಡು, ಬಿಡು, ಉಡು, ನಡು, ಪಡು, ಇಡು, ಕಿಡು, ಮಡು, compound-verbs formed with them, and ಮುದು change their final soft consonant into the corresponding hard one; and ಇಸು, ಬಿಸು, ಪಸು their ಸ್ into ಚ್.

ಪದಚ್ಛೇದಂ.—ಧಾತುವಿನ ಅಂತ್ಯದ ವರ್ಗೋಪೇತತೃತೀಯಾಕ್ಷರಕ್ಕೆ ತಾಂ ಪ್ರಥಮತ್ವಂ, ಮಾತೇಂ, ವ್ಯಂಜನರೂಪದಿಂ; ಏ ತೆಱದಿಂ ಸ್ವಂತಧಾತುಗೆ ಅಕ್ಕುಂ ಚತ್ವಂ.

ಅನ್ವಯಂ.—ಧಾತುವಿನ ಅಂತ್ಯದ ವರ್ಗೋಪೇತತೃತೀಯಾಕ್ಷರಕ್ಕೆ ಪ್ರಥಮತ್ವಂ ತಾಂ, ಮಾತೇಂ, ವ್ಯಂಜನರೂಪದಿಂ ಅಕ್ಕುಂ; ಏ ತೆಱದಿಂ ಸ್ವಂತಧಾತುಗೆ ಚತ್ವಂ.

ಟೀಕು.—ದ ದಪಂಗಳ್ಪರದೊಳಿೂದವಿರೆ ಎಂಬುದನುವರ್ತನೆ—ಧಾತುವಿನ = ದ ದಪಂಗಳ್ಪರಮಾದ ಹ್ರಸ್ವಾದಿದ್ವಿಸ್ವರಂಗಳಾದುಕಾರಾಂತಧಾತುವಿನ; ಅಂತ್ಯದ = ಕಡೆಯಣ; ವರ್ಗ = ವರ್ಗಂಗಳಲ್ಲಿ; ಉಪೇತ = ಕೂಡಲ್ಪಟ್ಟ; ತೃತೀಯಾಕ್ಷರಕ್ಕೆ = ಮೂಱನೆಯಕ್ಷರಂಗಳ್ಗೆ; ಪ್ರಥಮತ್ವಂ = ಮೊದಲಕ್ಷರದ ಭಾವಂ; ತಾಂ = ತಾಂ; ಮಾತೇಂ = ಹೇೞ್ವುದೇಂ; ವ್ಯಂಜನರೂಪದಿಂ = ವ್ಯಂಜನದ ರೂಪಿನಿಂದೆ; ಅಕ್ಕುಂ = ಆಗುವುದು; ಏ ತೆಱದಿಂ = ಆವ ರೀತಿಯಿಂದೆಯುಂ; ಸ್ವಂತಧಾತುಗೆ = ಸುಕಾರಾಂತಧಾತುಗೆ; ಚತ್ವಂ = ಚಕಾರಂ ಆಗುವುದು.

ವಿಚಾರಂ (not in Mḍb. Ms.).—ಪುಗು, ನಗು, ಉಗು, ಮಿಗು ಎಂಬ ಗಾಂತಕ್ಕಂ—ಅಡು, ಸುಡು, ಕುಡು, ತುಡು, ಬಿಡು, ಉಡು, ನಡು, ಪಡು, ಇಡು, ಕಿಡು, ಮಡು ಎಂಬ ಡಾಂತಕ್ಕಂ—ಆಸೆವಡು, ಪಡಲಿಡು, ಮುಂಬಿಡು, ಹೊಲಬುಗಿಡು, ಒಡಂಬಡು, ಮೂಗುವಡು, ಅಚ್ಚಿಜಂಬಡು, ಕರುವಿಡು, ತಿಟ್ಟವಿಡು, ಉಬ್ಬಸಂಬಡು ಎಂಬಂತೆ ಬಹುಸ್ವರಯುಕ್ತಂಗಳಾದೊಡಂ ಇಡು, ಪಡು, ಮಡು, ಬಿಡು, ಕುಡು ಎಂಬ ಹ್ರಸ್ವಾದಿ ದ್ವಿಸ್ವರಂಗಳಾದುಕಾರಾಂತಧಾತುಗಳಂತ್ಯ

ವಾಗಿರ್ಪುದರಿಂದೆ ಈ ಕ್ರಿಯಾಸಮಾಸರೂಪಧಾತುಗಳ್ಗಂ—ಜಾಂತದಲ್ಲಿ ಮುದು || ವೃಧ್, to grow || ಎಂಬುದರ್ಕಂ ಪ್ರಥಮಾಕ್ಷರಂ ಬರ್ಕುಂ. ಇಸು ಬಿಸು ಪಸು ಎಂಬ ಸುಕಾರಾಂತಕ್ಕೆ ಚತ್ವಂ ಬರ್ಕುಂ.

ವೃತ್ತಿ.—ದ ದಪಂಗಳ್ಪರಮಾದ ಧಾತುವಿನ ಕಡೆಯ ವರ್ಗತೃತೀಯಾಕ್ಷರಕ್ಕೆ ವ್ಯಂಜನ ರೂಪದಿಂ ಮೊದಲಕ್ಕರಮಕ್ಕುಂ; ಸುಕಾರಾಂತಧಾತುವಿನ ಕಡೆಯ ಸುಕಾರಕ್ಕೆ ವ್ಯಂಜನಚಕಾರಮಕ್ಕುಂ

ಪ್ರಯೋಗಂ.—ಗಕಾರಕ್ಕೆ—ಉಗು, ಒಕ್ಕಂ; ಪುಗು, ಪೊಕ್ಕಂ; ನಗು, ನಕ್ಕಂ; ಮಿಗು, ಮಿಕ್ಕಂ. ತಕ್ಕೆಂದಱಿವೆಡೆಯೊಳ್ ಮಿಕ್ಕಂ ಕರ್ಣಾರ್ಜುನರ್ಕಳಂ (Mdb. Ms. ವಕ್ಕೆಂದಱಿ—); ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ.

ಡಕಾರಕ್ಕೆ—ನಡು, ನಟ್ಟಂ; ಮಡು, ಮಟ್ಟಂ; ಕಿಡು, ಕೆಟ್ಟಂ; ಕುಡು, ಕೊಟ್ಟಂ, ಪಿಡಿಯೆಂದಸಿತಾಳಪತ್ರಮಂ ಯತಿ ಕೊಟ್ಟಂ; ಗರುಂ (o. r. ಗುರುಂ) ನೆಲಿಲೊಳೆ ಪೋರ್ವಂತೆವೊಲ್ ದೆಸೆಗೆಟ್ಟಂ; ಸುಡು, ಸುಟ್ಟಂ; ಬಿಡು, ಬಿಟ್ಟಂ.

ದಕಾರಕ್ಕೆ—ಮುದು, ಮುತ್ತಂ. ಮುತ್ತುದು ನೇಸಱಿ ತೇಜಂ ಸತ್ತುದು ದಾವಾಗ್ನಿ.

ಸುಕಾರದ ಚತ್ವಕ್ಕೆ—ಪಸು, ಪಚ್ಚಂ; ಬಿಸು, ಬೆಚ್ಚಂ; ಇಸು, ಎಚ್ಚಂ; ಕಳ್ಳವೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ; ಮಾಱಾಂತೆಚ್ಚಂ ಮಹಾರಥಂ ನರಂ.
ದಪಕ್ಕಮಂತೆ.

## ಸೂತ್ರಂ.

Further, before the affixes ದ and ದಪ, final ಱ್ becomes ತ್, occasionally also ಅ.

ಱಾಂತದೊಳಂ ವ್ಯತಿದಾನಂ
ರ್ಥಾಂತದೊಳಂ ವ್ಯಂಜನದ ತಕಾರಂ ದೀರ್ಘಂ।
ಪಿಂತಿರೆ ಬರ್ಕುಂ ಹ್ರಸ್ವತೆ
ಱಾಂತಕ್ಕಂ ರೇಫಮೊರ್ಮೆ ತವುಗೆ ಪಕಾರಂ || 240 ||

ಸಾಯ್ and ಈ shortening their Vowel, also get final ತ್. This shortening of the Vowel before ದ and ದಪ appears, for instance, also in ಕಾಣ್, ಏಱ್, ಬೀಱ್, ಆಱ್. The ವ್ of ತವು becomes ಪ್.

ಪದಚ್ಛೇದಂ.—ಱಾಂತದೊಳಂ ವ್ಯತಿದಾನಾರ್ಥಾಂತದೊಳಂ ವ್ಯಂಜನದ ತಕಾರಂ ದೀರ್ಘಂ ಪಿಂತೆ ಇರೆ, ಬರ್ಕುಂ ಹ್ರಸ್ವತೆ; ಱಾಂತಕ್ಕಂ ರೇಫಂ ಒರ್ಮೆ; ತವುಗೆ ಪಕಾರಂ.

ಅನ್ವಯಂ.—ಪಿಂತೆ ದೀರ್ಘಮಿರೆ, ಹ್ರಸ್ವತೆ ಬರ್ಕುಂ; ಱಾಂತಕ್ಕಂ ಒರ್ಮೆ ರೇಫಂ; ತವುಗೆ ಪಕಾರಂ ಎಂಬುದನ್ವಯಂ.

ಟೀಕು.—ದ ದಪಂಗಳ್ಪರದೊಳಿರೆ ಎಂಬುದನುವರ್ತನೆ—ಱಾಂತದೊಳಂ = ರೇಫಾಂತ ಧಾತುಗಳಲ್ಲಿಯುಂ; ಮೃತಿದಾನಾರ್ಥಂತದೊಳಂ = ಸಾಯ್ ಈ ಎಂಬ ಮರಣಾರ್ಥದಾನಾರ್ಥದ ಧಾತುಗಳಂತ್ಯದಲ್ಲಿಯುಂ; ವ್ಯಂಜನದ = ವ್ಯಂಜನದ; ತಕಾರಂ = ತತ್ವಂ ಬರ್ಕ್ಕುಂ, ಱಾಂತಕ್ಕಂ ಸಾಯ್ ಎಂಬುದರ್ಕಂ ಆದೇಶವಾಗಿ, ಈ ಎಂಬುದರ್ಕಾಗಮವಾಗಿ ಬರ್ಪುದು; ಪಿಂತೆ = ಹಿಂತೆ; ದೀರ್ಘಂ = ದೀರ್ಘಾಕ್ಷರಂ; ಇರ = ಇರೆ; ಹ್ರಸ್ವತೆ = ಹ್ರಸ್ವತ್ವಂ; ಬರ್ಕುಂ = ಬರ್ಪುದು; ಱಾಂತಕ್ಕಂ = ರೇಫಾಂತಕ್ಕೆಯುಂ; ಒರ್ಮೆ = ಒಂದು ಬಾರಿ; ರೇಫಂ = ರೇಫೆ ಬರ್ಪುದು; ತವುಗೆ = ತವು ॥ ಕ್ಷಯೇ ॥ ಎಂಬ ಧಾತುಗೆ; ಪಕಾರಂ = ಪತ್ವಂ ಬರ್ಪುದು.

ವಿಚಾರಂ.—ಪೆಱು, ತೆಪ್ಪಱು, ಕಿಱು, ತಿಱು, ಗಿಱು, ಪೊಱು, ಎಬ್ಬಿಱು, ಆಸಱು, ಬೇಸಱು ಎಂಬೀ ಱಾಂತಕ್ಕೆ ತಕಾರಂ ಬರ್ಪುದು; ಉಳಿದ ಱಾಂತಕ್ಕೆ ಒರ್ಮೆ ಎಂಬುದಱಿಂ ವಿಕಲ್ಪದಿಂ ರೇಫೆಯಕ್ಕುಂ.

ವೃತ್ತಿ.—ದ ದಪಂಗಳ್ಪರಮಾದ ಧಾತುವಿನ ಕಡೆಯ ಱಕಾರಕ್ಕೆಯುಂ ಸಾಯಿಈಯೆಂಬ ಧಾತುಗಳ ಕಡೆಯೊಳಂ ವ್ಯಂಜನತಕಾರಮಕ್ಕುಂ; ಸಾಯಿಈಯೆಂಬವಱಾದಿದೀರ್ಘಕ್ಕೆ ಹ್ರಸ್ವಮಕ್ಕುಂ; ಱಕಾರಕ್ಕೊರ್ಮೆ ರೇಫಮಕ್ಕುಂ; ತವು ಎಂಬ ಧಾತುವಿನ ವಕಾರಕ್ಕೆ ಪಕಾರಮಕ್ಕುಂ.

ಪ್ರಯೋಗಂ.—ಱಕಾರದ ತಕಾರಕ್ಕೆ—ಕಿಱು, ಕೆತ್ತಂ; ತಿಱು, ತೆತ್ತಂ; ಗಿಱು, ಗೆತ್ತಂ; ಪೆಱು, ಪೆತ್ತಂ. ಜಾತವೇದಂ ಪಟುಕಪಟಮಯವ್ಯಾಜದಿಂ ಬೇಡಿ ಪೆತ್ತಂ; ಶಾಲಭಂಜಿಕೆವೆತ್ತರಸಂ ನೋಡಿದಂ ಲಲಾಟ ಕೋಮಲೆಯಂ.

ಸಾಯ್ ಈ ಎಂಬಿವರ್ಕೆ—ಸತ್ತಂ; ಇತ್ತಂ. ಕಾದಿ ನಿಂಸುಳ್ಳರುಂ ಬನ್ನಿತ್ತರ್ ಕೆಲರ್; ನಗೆಮೊಗದುಳುಗಿದು ಕವಚಮನಿಂದ್ರಗಿತ್ತಂ ಕರ್ಣಂ.

ಸಾಯಿಈಯೆಂಬವಱಿಂತೆ ಸಮುಚ್ಚಯವಶದಿಂ ಮತ್ತೆ ಕೆಲವಱಾದಿದೀರ್ಘಕ್ಕೆ ಹ್ರಸ್ವಮುಂಟು—(ಕಾಣ್) ಕಂಡಂ; (ಏಱ್) ಎಱ್ದಿಂ; (ಬೀಱ್) ಬಿಱ್ದಿಂ; (ಆಱ್) ಅಱ್ದಿಂ. ಇವು ಮೊದಲಾದುವು.

ಱಕಾರದ ರೇಫೆಗೆ—ಅಱು ಎಂಬುದರ್ಕೆ ಅರ್ತಂ, ವಿಕಲ್ಪದಿಂ ಅಱುತನೆಂದುಮುಂಟು—ಅರ್ತ ಕದಂಪು ಬತ್ತಿದ ಕಾಲುಂ ಹುರಿಯುಱಿದಱಿಮಿಳಿ

ಯೆಸದ ಸೆರೆಯುಂ. (ಆಱು ಎಂಬುದರ್ಕೆ) ಆರ್ತಂ; ಪಾರ್ತಪ್ಪ ತೆರೆಗಳಿಂ (Mḍb. Ms. ವೇಗದಿಂ) ತರಲಾರ್ತುದು ತನ್ನದಿಗೆ ಸುರನದಿವಿಭ್ರಮಮಂ.

ತವುಗೆ—ತಪ್ಪಂ, ತಪ್ಪಪಂ; ತಪ್ಪಂ ತಂನೊಳ್ ಪಳಂಚಿ ಕಿಡುಗುಟ್ಟಿ ತಪ್ಪ ವಂಬುಗಳರವಂ.

## ಸೂತ್ರಂ.

**Further, when the finals of verbal themes have undergone the changes into ಕ್, ಚ್, ಟ್, ತ್ or ಪ್,**

ನಿರುತಂ ಕ ಚ ಟ ತ ಪಂಗಳ
ಪರದ ದಕಾರಕ್ಕೆ ಪೂರ್ವರೂಪಮದಕ್ಕುಂ !
ಪರವರ್ಣಂ ಧಾತ್ವಂತ್ಯದೊ
ಳಿರೆ ಡತ್ವಂ ಮೇಣ್ ತಕಾರಮೊರ್ಮೆಯಕಾರಂ ‖ 241 ‖

**the following ದ assumes the same respective shape;—after ಉಣ್, ಕಾಣ್ and ಕೊಳ್ the ದ becomes ಡ;—after the roots ಕವಲ್, ಮಡಲ್, ಬಲ್, ಕಲ್, ಪೋಲ್, ಸಾಲ್, ಸೋಲ್, ಪೇಲ್, ನೂಲ್, ಕೂರ್, ಕಸರ್, ಕನರ್, ಕೊನರ್, ತಳಿರ್, ಬೆಳರ್, ಚಿಗುರ್. ಬೆಮರ್, ಅಱ್, ಉಱ್, ಕೀಱ್, ಚಳಿ, ಮೊಳೆ, ಅಱಿ, ಅಱಿ, ಮಱಿ, ಕುಱಿ, ಬಾ, ಕೀ, ಪೂ, ಬೀ, ಓ, ಕೂನ್, ಸೀನ್, ಪೇನ್, ಆನ್, ನೋನ್, ಈನ್ the ದ generally appears as ತ;—in ಬೆರಂಟಂ the ದ has disappeared.**

ಪದಚ್ಛೇದಂ.—ನಿರುತಂ ಕ ಚ ಟ ತ ಪಂಗಳ ಪರದ ದಕಾರಕ್ಕೆ ಪೂರ್ವರೂಪಂ ಆದು ಅಕ್ಕುಂ; ಪರವರ್ಣಂ ಧಾತ್ವಂತ್ಯದೊಳ್ ಇರೆ, ಡತ್ವಂ; ಮೇಣ್ ತಕಾರಂ; ಒರ್ಮೆ ಅಕಾರಂ.

ಯಥಾನ್ವಯಂ. ಟೀಕು.—ನಿರುತಂ = ನಿಶ್ಚಯವಾಗಿ; ಕ ಚ ಟ ತ ಪಂಗಳ = ಕಕಾರ ಚಕಾರ ಟಕಾರ ತಕಾರ ಪಕಾರಂಗಳ; ಪರದ = ಮುಂದಣ; ದಕಾರಕ್ಕೆ = ದತ್ವಕ್ಕೆ; ಪೂರ್ವರೂಪಂ = ಮೊದಲಕ್ಷರದ ರೂಪು; ಆದು = ಆದು; ಅಕ್ಕುಂ = ಆಗುವುದು; ಪರವರ್ಣಂ = ಕ ಚ ಟ ತ ಪಂಗಳಲ್ಲದ ಅನ್ಯವರ್ಣಂ; ಧಾತ್ವಂತ್ಯದೊಳ್ = ಧಾತುಗಳ ಕಡೆಯಲ್ಲಿ; ಇರೆ = ಇರ್ದೊಡೆ; ಡತ್ವಂ = ಡಕಾರಂ; ಮೇಣ್ = ಅದಲ್ಲದೆ; ತಕಾರಂ = ತತ್ವಂ; ಒರ್ಮೆ = ಒಂದು ಬಾರಿ; ಅಕಾರಂ = ಅತ್ವಂ ಆಗುವುದು.

ವಿಚಾರಂ (not in Mḍb. Ms.).—ಉಣ್ ಕಾಣ್ ಎಂಬ ಣಕಾರದ ಕೊಳ್ಧಾತುವಿನ ಣಕಾರದ ಮುಂದೆ ದತ್ವಂ ಡಕಾರವಾಗುವದು.

ಶಬ್ದಾನುಶಾಸನದಲ್ಲಿ ಸೂತ್ರಂ— ‖ ಕವಲಾದಿಭ್ಯಸ್ ತಃ ‖ 4, 66 ‖ ಕವಲಾದಿಭ್ಯೋ ಧಾತುಭ್ಯಃ ಪರಸ್ಯ ದಕಾರಸ್ಯ ತಕಾರಾದೇಶೋ ಭವತಿ ‖ ಎಂದುದಾಗಿ ಕವಲಾದಿಧಾತುಗಳತ್ತಣಿಂ ಪರದ ದಕಾರಕ್ಕೆ ತಕಾರಾದೇಶವಪ್ಪುದು; ಕವಲ್, ಮಡಲ್, ಬಲ್, ಕಲ್, ಪೋಲ್, ಸಾಲ್, ಸೋಲ್,

ಪೇಲ್, ಸೂಲ್, ಕೂರ್, ಕಸರ್, ಕನರ್, ಕೊನರ್, ತಳಿರ್, ಬೆಳರ್, ಚಿಗುರ್, ಬೆಮರ್, ಅಱ್, ಉಱ್, ಕೀಱ್, ಚಳಿ, ಮೊಳೆ, ಅಱಿ, ಆಱು, ಮಱೆ, ಕುಱು, ಬಾ, ಕೀ, ಪೂ, ಬೀ, ಓ, ಕೂನ್, ಸೀನ್, ಪೇನ್, ಆನ್, ನೋನ್, ಈನ್ ಎಂಬಿವು ಕವಲಾದ್ಯಾಕೃತಿಗಣಂ. ಇವಱಲ್ಲಿ ಆಱು, ಮಱೆ, ಬೆಮರ್, ಬೆಳರ್, ಕೀಱ್ ಎಂಬಿವಾದಿಯಾದುವರ್ಕೆ ವಿಕಲ್ಪದಿಂ ತಕಾರಮಪ್ಪುದಾಗಿ, ಇವು ಪ್ರಯೋಗಗಮ್ಯಂಗಳಿಂದಱಿವುದು.

ವೃತ್ತಿ.—ಧಾತುವಿನ ಕಡೆಯ ಕ ಚ ಟ ತ ಪಂಗಳ ರೂಪಮುಂ ಪರದ ದಕಾರಂ ಪಡೆಗುಂ; ಕ ಚ ಟ ತ ಪಂಗಳಲ್ಲದ ಪೆಱವಕ್ಕರಂಗಳ್ ಧಾತುವಿನ ಕಡೆಯೊಳಿರೆ, ಪರದ ದಕಾರಕ್ಕೆ ಡಕಾರಮುಂ ತಕಾರಮುಕಾರಮುಮಕ್ಕುಂ.

ಪ್ರಯೋಗಂ.—ಕಕಾರಕ್ಕೆ—ಒಕ್ಕು, ಒಕ್ಕರ್; ಮಿಕ್ಕಂ, ಮಿಕ್ಕರ್; ಪೊಕ್ಕಂ, ಪೊಕ್ಕರ್; ನಕ್ಕಂ, ನಕ್ಕರ್; ತಕ್ಕರಂ.

ಮಿಕ್ಕರನೇಕೆ ಮಂನಿಸುವ
ರಕ್ಕರವೋದದ ಪುಲ್ಲಪಾಪಿಗಳ್
ರಕ್ಕಸಿಯ ಮಾಡಮುದಱಿಕೊಳ್
ಪೊಕ್ಕವರುಱಿದಪರೆ ಸರಸ್ವತಿಮಣಿಹಾರಾ ||

ಚಕಾರಕ್ಕೆ—ಎಚ್ಚಂ, ಎಚ್ಚರ್; ಬೆಚ್ಚಂ, ಬೆಚ್ಚರ್; ಪಚ್ಚಂ, ಪಚ್ಚರ್. ಮಣಿಯದೆ ಕುಣಿದೀ ಧೀರನದಿರೆ ಕೂಕಿಱಿದೆಚ್ಚರ್; ಮಿಱ್ತುಗೆ ಮಾರಿಗೆ ಪಚ್ಚರ್; ದುಟ್ಟೋಡೆ ಘಾಯದಿಂ ಹಯಬಲಮುಂ.

ಟಕಾರಕ್ಕೆ—ತೊಟ್ಟಂ, ತೊಟ್ಟರ್; ಕೊಟ್ಟಂ, ಕೊಟ್ಟರ್; ಬಿಟ್ಟಂ, ಬಿಟ್ಟರ್; ನಟ್ಟಂ, ನಟ್ಟರ್. ಬೆಕ್ಕಸಂಬಟ್ಟು ಬಾಯುಂ ಬಿಟ್ಟರ್ ಭೀಷ್ಮರ್; ಕೆತೊಟ್ಟಂ ಸಂಮೋಹನಮನಭಯಂ ಪಾಂಡವಂ.

ತಕಾರಕ್ಕೆ—ಪೆತ್ತಂ, ಪೆತ್ತರ್; ಕೆತ್ತಂ, ಕೆತ್ತರ್; ತೆಟ್ಟಂ, ತೆಟ್ಟರ್; ಗೆತ್ತಂ, ಗೆತ್ತರ್; ಪೊತ್ತಂ, ಪೊತ್ತರ್ ಮುಗಿಲಂ ಮಾಱಾನೆಗೆತ್ತರ್.

ಪಕಾರಕ್ಕೆ—ತಪ್ಪಂ, ತಪ್ಪರ್. ತಪ್ಪಂ ತಂನೊಳ್ಪಳಂಚಿಕಿಡಿಗುಟ್ಟಿ ತಪ್ಪವಂಬುಗರವಂ.

ಡಕಾರಕ್ಕೆ—ಉಣ್ಡಂ; ಕಣ್ಡಂ; ಕೊಣ್ಡಂ. ಮರದ ಹರಿಯಣದೊಳುಂಡಂ; ಮರದೊಳ್ಸಮೆದಂಕವಣಿಯನೇಱಿದಂ; ಕುರುಪ್ರಭು ಕಂಡಂ ಶರಜಾ

ಲಜರ್ಜರಿತಗಾತ್ರತ್ರಾಣನಂದ್ರೋಣನಂ; ಭುವನತ್ರಿಣೇತ್ರರುಚಿಯುಂ ಕೈಕೊಂಡನಾ ಪಾಂಡವಂ.

ದಕಾರಕ್ಕಾದ ತಕಾರಕ್ಕೆ—ಸೋಲ್ತಂ; ಪೋಲ್ತಂ; ನಿಲ್ತಂ; ಕಿಱ್ತಂ; ಉಱ್ತಂ.

ಮಾಲವದೇಶಮುಂ ಕಿಡಿಸಿ ತದ್ಧರಾಪುರಸ್ತ್ರೀಯರಂ ತೊಱ್ತುಮಾಡಿದಂ; ಕಾದದಿರ್ದಂದು ಸೋಲ್ತಂ ಕೌಂತೇಯಂ ಕೌರವಂಗೆಂದುಲಿಗುಂ; ಮಱಿಸುಂದಿದ ಪುಲಿಯುನಾಗಳಿನಿಸಂ ಪೋಲ್ತಂ; ನೋೞ್ದೆ ಕೊಂಡಂತೆ ಬೆಂನೊಳ್ ನಿಲ್ತಂ ಗಾಂಡೀವಿ.

ಅಕಾರಕ್ಕೆ (ಒಂದು ಸೂಱ್ ದಕಾರಕ್ಕೆ ಟಕಾರಮುಕ್ಕುಂ ಎಂದು ಪಾಠಾಂತರಂ)—ಬೆರಂಟಂ. ಬೆರಂಟುವು ಪೊಕ್ಕುಱಿನುಗುರಿಸಿದುವು ತುಱಿಂಬ.

ಮೇಣೆಂಬುದಱಿಂ ಕೆಲವಱಿೊಳಿರ್ದಂತೆ ದಕಾರಮೆ—ಪೂಣ್ದಂ; ಮಾಣ್ದಂ; ಜೋಲ್ದಂ; ಎಱ್ದಂ; ನೇಱ್ದಂ; ಅಱ್ದಂ (or ಆಱ್ದಂ); ಬಿಱ್ದಂ; ಆರ್ದಂ; ನೇರ್ದಂ. ಬಾದುಂಟೆಂದು ಹತ್ತನೆಯ ತಲೆಯುಮಂ ನೇರ್ದಾಗಳ್.

## ಸೂತ್ರಂ.

ನೆಗೞ್ಗುಂ ಲೋಪಂ ಪೋಗಾ
ಗುಗಳ ಗಕಾರಕ್ಕೆ ದದಪಮಿರೆಯುಂ ದತ್ವ |
ಕ್ಕೊಗೆದಸ್ವರಯತ್ವಂ ಪ
ತ್ತುಗೆಗೊಂಡುದುಗಾದ ತುತ್ವದೊಳ್ ನೆಲಸಿರೆಯುಂ || 242 ||

Further, the roots ಪೋಗು and ಆಗು lose their ಗ before ದ and ದಪ; and also before ಯ್ತು, their common substitute in the Imperfect for ಉದು (or ಇತು).

ಪದಚ್ಛೇದಂ.—ನೆಗೞ್ಗುಂ ಲೋಪಂ ಪೋಗು ಆಗುಗಳ ಗಕಾರಕ್ಕೆ, ದದಪಂ ಇರೆಯುಂ, ದತ್ವಕ್ಕೆ ಒಗೆದು ಅಸ್ವರಯತ್ವಂ ಪತ್ತುಗೆಗೊಂಡು ಉದುಗೆ ಆದ ತುತ್ವದೊಳ್ ನೆಲಸಿ ಇರೆಯುಂ.

ಅನ್ವಯಂ.—ದದಪಂ ಇರೆಯುಂ—ದತ್ವಕ್ಕೆ ಅಸ್ವರಯತ್ವಂ ಒಗೆದು, ಉದುಗೆ ಆದ ತುತ್ವದೊಳ್ ಪತ್ತುಗೆಗೊಂಡು, ನೆಲಸಿರೆಯುಂ—ಪೋಗಾಗುಗಳ ಗಕಾರಕ್ಕೆ ಲೋಪಂ ನೆಗೞ್ಗುಂ.

ಟೀಕು.—ದದಪಂ = ದಪಕಾರಂ; ಇರೆಯುಂ = ಪರದಲ್ಲಿ ಇರ್ದೊಡೆಯುಂ; ದತ್ವಕ್ಕೆ = ಭೂತಕಾಲದ ದಕಾರಕ್ಕೆ; ಅಸ್ವರಯತ್ವಂ = ವ್ಯಂಜನದ ಯಕಾರಂ; ಒಗೆದು = ಹುಟ್ಟಿ; ಉದುಗೆ = ನಪುಂಸಕಲಿಂಗದ ಉದು ಎಂಬುದರ್ಕ್ಕೆ; ಆದ ತುತ್ವದೊಳ್ = ಆದೇಶವಾದ ತುಕಾರದಲ್ಲಿ;

ಪತ್ತುಗೆಗೊಂಡು = ಪೊರ್ದುಗೆಯಾಗಿ; ನೆಲಸಿರೆಯುಂ = ನೆಲೆಗೊಂಡಿರ್ದೊಡೆಯುಕಿ; ಪೋಗಾಗುಗಳ = ಪೋಗು ಆಗು ಎಂಬ ಧಾತುಗಳ; ಗಕಾರಕ್ಕೆ = ಗತ್ವಕ್ಕೆ; ಲೋಪಂ = ಅದರ್ಶನಂ; ನೆಗಬ್ಗಿಂ = ಬರ್ಪುದು.

ವೃತ್ತಿ.—ದ ದಪಂಗಳ್ಪರವಾಗೆಯುಂ, ಪೋಗು ಆಗು ಎಂಬಿವಱ ಗಕಾರಕ್ಕೆ ಲೋಪಂ; ಭೂತವತಿಯ ದಕಾರಕ್ಕೆ ವ್ಯಂಜನಯುಕಾರಂ ಬಂದು, ಉದುಗಾದ ತುಕಾರದೊಳ್ಪೊರ್ದೆಯುಂ, ಗಕಾರಕ್ಕೆ ಲೋಪಮಕ್ಕುಂ.

ಪ್ರಯೋಗಂ.—ಪೋದಂ, ಪೋದಪಂ; ಆದಂ, ಆದಪಂ; ಪೋದುದು, ಆದುದು; ಪೋಯ್ತು, ಆಯ್ತು. ಪೊಂಮಱಿವೋಲ್ ಪೊಳೆದು ಪಾಱಿಪೋದಂ ಶ್ವೇತಂ; ಕೊಂಬಿಱಿಪಿದ ಮರದಿಂದಗ್ಗಳಂ ತಿಂಣಮಾದಂ; ಕೆಂದಳಿರ್ಮಿಸುಪ ಕೆಂಗಱಿಯಾದುದು; ಪೂದೊಡಂಬೆ ಪಿಳ್ಕಾದುದು; ಅಬ್ಜಿನಿ ಪೋದಂದು ಸುಣ್ದನಿ ಸವಿಲ್ಗೆ ಸರದದ ಪುಗಿಲೊಳ್; ಭೀಷಣಮಾಯ್ತು; ಸೈನ್ಯಂ ಮಹಾರ್ಣವದಂತಾಯ್ತಬ್ಧಿಯೆ ಘೂರ್ಣಿಸುವಂತಾಯ್ತುರ ಮನೆಯೊಳಗೆ; ಬಗೆ ಪೋಯ್ತಾಗಳೆಲೆಯಿಡಲ್ತೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳ್; ಪುಂಸ್ಕೋಕಿಲಧ್ವನಿತಾನಿರೆಲೆವೋಯ್ತು. ಪೋಗಲೀಯದಡಸಿ ತಾಪಮೆಂದುಂ ಜೋದರೆಲ್ಲಂ; ಪೋಪಂಗೆ ಬರ್ಪಂಗನಾಕುಳಂ.

## ಸೂತ್ರಂ.

Besides, before the affix ಕೆ of the Imperative and before ಕುಂ they receive the forms: ಪೋ, ಅಕ್.

ಪರದೊಳ್ವಿಧಿಯ ಕೆಕಾರಂ
ಬರೆ ಕುಂ ಬರೆ ಪೋಗೆನಿಪ್ಪ ಧಾತುವಿನಂತ್ಯಾ ।
ಕ್ಷರಲೋಪಂ ಚರಮಂ ವಿ
ಸ್ವರಮಾದ್ಯಂ ಹ್ರಸ್ವಮಕ್ಕುಮಾಗೆಂಬುದಱೊಳ್
|| 243 ||

ಪದಚ್ಛೇದಂ.—ಪರದೊಳ್ ವಿಧಿಯ ಕೆಕಾರಂ ಬರೆ, ಕುಂ ಬರೆ, ಪೋಗು ಎನಿಪ್ಪ ಧಾತುವಿನ ಅಂತ್ಯಾಕ್ಷರಲೋಪಂ; ಚರಮಂ ವಿಸ್ವರಂ, ಆದ್ಯಂ ಹ್ರಸ್ವಂ ಆಕ್ಕುಂ ಆಗು ಎಂಬುದಱೊಳ್.

ಅನ್ವಯಂ.—ಆಗು ಎಂಬುದಱೊಳ್ = ಚರಮಂ ವಿಸ್ವರಂ, ಆದ್ಯಂ ಹ್ರಸ್ವಂ ಆಕ್ಕುಂ ಎಂಬುದನ್ವಯಂ.

ಟೀಕು.—ಪರದೊಳ್ = ಪರದಲ್ಲಿ; ವಿಧಿಯ = ವಿಧ್ಯರ್ಥದ; ಕೆಕಾರಂ = ಕೆಕಾರಂ; ಬರೆ = ಬರೆ; ಕುಂ = ಕುಂಕಾರಂ; ಬರೆ = ಬರೆ; ಪೋಗೆನಿಪ್ಪ ಧಾತುವಿನ = ಪೋಗು ಎಂಬ ಧಾತುವಿನ; ಅಂತ್ಯಾಕ್ಷರಲೋಪಂ = ಕಡೆಯಕ್ಷರದ ಲೋಪಂ ಆಗುವುದು; ಆಗೆಂಬುದಱೊಳ್ = ಆಗು ಎಂಬ ಧಾತುವಿನಲ್ಲಿ; ಚರಮಂ = ಅಂತ್ಯಂ; ವಿಸ್ವರಂ = ವ್ಯಂಜನದ ಕಕಾರಂ; ಆದ್ಯಂ = ಮೊದಲಕ್ಷರಂ; ಹ್ರಸ್ವಂ = ಹ್ರಸ್ವಂ; ಅಕ್ಕುಂ = ಆಗುವುದು.

ವೃತ್ತಿ.—ವಿಧಿಯ ಕೆಕಾರಮುಂ ಕುಂ ಎಂಬುದುಂ ಪರಮಾಗೆ, ಪೋಗೆಂಬ ಗಕಾರಕ್ಕೆ ಲೋಪಂ; ಆಗೆಂಬುದಱ ಕಡೆಯ ಸ್ವರಕ್ಕೆ ಲೋಪಮುಂ ಮೊದಲ್ಗೆ ಹ್ರಸ್ವಮುಮಕ್ಕುಂ.

ಪ್ರಯೋಗಂ.—ಪೋಕೆ, ಪೋಕುಂ; ಅಕ್ಕೆ, ಅಕ್ಕುಂ. ಪೋಕೆ ಬರ್ಕೆ ಮುಳಿಸಿಲ್ಲೆಮಗಾತನೊಳ್ ಆನ ಪಾಂಗಿನಿಂ; ಪೊಱಮಾಱದೆ ಸಯ್ತೆ ಪೋಕುಮಾ ಪರಸೈನ್ಯಂ. ವೇದದೊಳೊಂದಿದಾಯು ನಿನಗಕ್ಕೆ ಬೇಗಂ ಕಲಿಕಾಲಸೂದನಾ. ಸ್ವಾಭ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ.

## ಸೂತ್ರಂ.

The root ಉಳ್ nd the suffix ಉದು ecome ಉಂಟು.—For the Negative the suffixes ಉದು and ಉವು become ಅದು and ಅವು.

ಅವತರಿಸಿರ್ಕುಮದುಳ್ಧಾ
ತುವಿನ ಳಕಾರಕ್ಕೆ ಣತ್ವಮುದುಗೆ ಟುಕಾರಂ ।
ಪ್ರವಿಲೋಮಕ್ರಿಯೆಗದುವೆಂ
ದವೆಂದು ಬಂದಿರ್ಕುಮುದುಗಮುವುಗಂ ಪ್ರಚುರಂ
॥ 244 ॥

ಪದಚ್ಛೇದಂ.—ಅವತರಿಸಿ ಇರ್ಕುಂ ಅದು ಉಳ್ಧಾತುವಿನ ಳಕಾರಕ್ಕೆ ಣತ್ವಂ, ಉದುಗೆ ಟುಕಾರಂ.—ಪ್ರವಿಲೋಮಕ್ರಿಯೆಗೆ ಅದು ಎಂದು ಅವು ಎಂದು ಬಂದು ಇರ್ಕುಂ ಉದುಗಂ ಉವುಗಂ ಪ್ರಚುರಂ.

ಅನ್ವಯಂ.—ಉಳ್ಧಾತುವಿನ ಳಕಾರಕ್ಕೆ ಣತ್ವಂ ಅದು, ಉದುಗೆ ಟುಕಾರಂ ಅವತರಿಸಿ ಇರ್ಕುಂ.—ಪ್ರವಿಲೋಮಕ್ರಿಯೆಗೆ ಉದುಗಂ ಉವುಗಂ ಅದು ಎಂದು ಅವು ಎಂದು ಪ್ರಚುರಂ ಬಂದು ಇರ್ಕುಂ.

ಟೀಕು.—ಉಳ್ಧಾತುವಿನ = ಉಳ್ ॥ ಸತ್ತಾಯಾಂ, to be ॥ ಎಂಬ ಸತ್ತಾರ್ಥದ ಧಾತುವಿನ; ಳಕಾರಕ್ಕೆ = ಳತ್ವಕ್ಕೆ; ಣತ್ವಂ = ಣಕಾರಂ; ಅದು = ಅದು; ಉದುಗೆ = ನಪುಂಸಕ

ಲಿಂಗದ ಉದು ಎಂಬುದರ್ಕೆ; ಟುಕಾರಂ = ಟುತ್ವಂ; ಅವತರಿಸಿರ್ಕುಂ = ಹುಟ್ಟಿಪ್ಪುದು; ಪ್ರತಿಲೋಮಕ್ರಿಯೆಗೆ = ಪ್ರತಿಷೇಧಕ್ರಿಯೆಗೆ; ಉದುಗಂ = ನಪುಂಸಕಲಿಂಗದ ಉದುವೆಂಬುದರ್ಕಂ; ಉವುಗಂ = ಉವು ಎಂಬುದರ್ಕಂ; ಅದುವೆಂದು = ಅದು ಎಂದು; ಅವೆಂದು = ಅವು ಎಂದು; ಪ್ರಚುರಂ = ಪ್ರಸಿದ್ಧವಾಗಿ; ಬಂದಿರ್ಕುಂ = ಬಂದಿಪ್ಪುವು.

ವೃತ್ತಿ.—ಉಳ್ ಎಂಬ ಧಾತುವಿನ ಳಕಾರಕ್ಕೆ ಣತ್ವಮುಂ ಅಲ್ಲಿ ಪರದುದುವಿಂಗೆ ಟುಕಾರಾದೇಶಮುಮಕ್ಕುಂ.—ನಪುಂಸಕಲಿಂಗದ ಉದುಗಮುವುಗಂ ಪ್ರತಿಷೇಧಕ್ರಿಯೆಯೊಳದುವೆಂದುಮುವುವೆಂದುಮ್ ಆದೇಶಮಕ್ಕುಂ.

ಪ್ರಯೋಗಂ.—ಉಳ್ಳುದೆಂಬುದರ್ಕೆ—ಉಣ್ಟು. ಉಂಟು ಭುಜಬಲಂ ಪಿರಿದು ಚಾಗದಮೆಯ್; ಈ ಸಿರಿಯುಂಟು ಮಾಡಿದಂ ಕುರುಬಲದೊಳ್.

ಪ್ರತಿಷೇಧಕ್ರಿಯೆಗೆ—ಅಱಿಯದು ವಿಭವಂ; ಜವ್ವನಮಱಿಯದು; ನವವಿಧರತೋಪಚಾರದಿನೆಂದುಂ ಪಱಿಸದು ಬೇಟಂ; ಏಪುಳಕಳಾಪಕೋಪಶಿಖಿ ಪುಟ್ಟದು;—ಸಲ್ಲವು; ಗೆಲ್ಲವು; ನಿಲ್ಲವು; ಸೈಱಿಯವು. ಗಿರಿಯುಂ ಕರಿಯುಂ ನಿಲ್ಲವು ಪವಿಮುಖದ ಕೋಟ್ಗಿಮಾತನ ಬಾಳ್ಗಂ; ತುಱುಗಳ ಮೆಯ್ಗಳ ರೋಮಂ ಸೈಱಿಯವು ದಲ್.

## ಸೂತ್ರಂ.

Before ದ and ದಪ the theme ಕೊಳ್ becomes ಕೊಣ್.—Excepting ಉಂಟು the root ಉಳ್ becomes ಒಳ್, and takes the personal affixes without inserting ದ or ದಪ. Its Suffix for the Neuter Plural, though ಅವು, is affirmative. For ಉಂಟು, in the Negative, ಇಲ್ಲ is used.

ಣತ್ವಂ ಕೊಳ್ಧಾತ್ವಂತ್ಯ
ಕ್ಕುತ್ವಕ್ಕುಳ್ಧಾತುಪೂರ್ವದೊಳ್ ನೆಗೞ್ಗುಂ ಹ್ರ ।
ಸ್ವೋತ್ವಂ ಪುರುಷತ್ರಯದೊಳ್
ದತ್ವನಿಷೇಧಂ ಬಹುತ್ವದುವುಗವುಮಕ್ಕುಂ ॥ 245 ॥

ಪದಚ್ಛೇದಂ.—ಣತ್ವಂ ಕೊಳ್ಧಾತ್ವಂತ್ಯಕ್ಕೆ. ಉತ್ವಕ್ಕೆ ಉಳ್ಧಾತುಪೂರ್ವದೊಳ್ ನೆಗೞ್ಗುಂ ಹ್ರಸ್ವೋತ್ವಂ; ಪುರುಷತ್ರಯದೊಳ್ ದತ್ವನಿಷೇಧಂ; ಬಹುತ್ವದ ಉವುಗೆ ಅವುಂ ಅಕ್ಕುಂ.

ಅನ್ವಯಂ.—ಕೊಳ್ಧಾತ್ವಂತ್ಯಕ್ಕೆ ಣತ್ವಂ ನೆಗೞ್ಗುಂ. ಉಳ್ಧಾತುಪೂರ್ವದೊಳ್ ಉತ್ವಕ್ಕೆ ಹ್ರಸ್ವೋತ್ವಂ; ಪುರುಷತ್ರಯದೊಳ್ ದತ್ವನಿಷೇಧಂ; ಬಹುತ್ವದ ಉವುಗೆ ಅವುಂ ಅಕ್ಕುಂ.

ಟೀಕು.—ದ ದಪಂಗಳ್ಪರಮಾದ ಎಂಬುದನುವರ್ತನೆ—ಕೊಳ್ಧಾತ್ವಂತ್ಯಕ್ಕೆ = ದ ದಪಂಗಳ್ಪರಮಾದ ಕೊಳೆಂಬ ಧಾತುವಿನಂತ್ಯಕ್ಕೆ; ಣತ್ವಂ = ಣಕಾರಾದೇಶಂ; ನೆಗಟ್ಗುಂ = ಪ್ರಸಿದ್ಧಿವಡೆವುದು; ಉಳ್ಧಾತು ಪೂರ್ವದೊಳ್ = ಸತ್ತಾರ್ಥದಲ್ಲಿ ಉಳ್ ಎಂಬ ಧಾತುವಿನ ಮೊದಲಲ್ಲಿ; ಉತ್ವಕ್ಕೆ = ಉಕಾರಕ್ಕೆ; ಹ್ರಸ್ವೋತ್ವಂ = ಹ್ರಸ್ವದ ಒಕಾರಂ ಪ್ರಸಿದ್ಧಿವಡೆವುದು; ಪುರುಷತ್ರಯದೊಳ್ = ಪುರುಷತ್ರಯದಲ್ಲಿ; ದತ್ವನಿಷೇಧಂ = ಭೂತಕಾಲದ ದಕಾರಂ ಬಾರದು; ಬಹುತ್ವದ = ನಪುಂಸಕಲಿಂಗದ ಬಹುವಚನದ; ಉವುಗೆ = ಉವು ಎಂಬುದರ್ಕೆ; ಅವುಂ = ಅವು ಎಂಬುದುಂ; ಅಕ್ಕುಂ = ಆಗುವುದು

ವಿಚಾರಂ (not in Mḍb. Ms.).—ದತ್ವನಿಷೇಧವೆಂದು, ಉಪಲಕ್ಷಣವಾಗಿ ಉಳ್ಧಾತುಗೆ ದ ದಪ ವಕಾರಂಗಳ್ ಮೂಱುಂ ನಿಷೇಧವೆಂಬುದರ್ಥಂ; ಭೂತಕಾಲವಾಗಿಯೆ ಸಲ್ವುದು.

ವೃತ್ತಿ.—ದಕಾರಂ ಪರಮಾದ ಕೊಳ್ಧಾತುವಿನ ಳಕಾರಕ್ಕೆ ಣತ್ವಮಕ್ಕುಂ; ಪುರುಷತ್ರಯದೊಳ್ ಉಳ್ಧಾತುವಿನ ಮೊದಲುಕಾರಕ್ಕೆ ಹ್ರಸ್ವೋತ್ವಮಕ್ಕುಂ; ನಪುಂಸಕಲಿಂಗದ ಬಹುವಚನದುವುವಿಂಗೆ ಅವು ಎಂದಕ್ಕುಂ.

ಪ್ರಯೋಗಂ.—ಕೊಳ್ಧಾತುಗೆ—ಕೊಣ್ಡಂ, ಕೊಣ್ಡರ್, ಭುವನತ್ರಿಣೇತ್ರರುಚಿಯುಂ ಕೈಕೊಂಡನಾ ಪಾಂಡವಂ. ತಮತಮಗೆ ಭಯಂಗೊಂಡರಾಶಂಕೆಗೊಂಡರ್.

ಉಳ್ಧಾತುಗೆ—ಒಳಂ, ಒಳರ್; ಒಳಯ್, ಒಳಿರ್; ಒಳೆನ್, ಒಳೆವು. ಪೇಱಿನಿತರ್ಕಮೊಳಂ ಮುರಾಂತಕಂ (Mḍb. Ms. ಪು—) ಒಳರನ್ನೆವರಂ ಮಾರ್ಬಲದೊಳಗಿಱಿಯಲ್ ಮಱುಗುವತಿಭಟರ್.

ನಪುಂಸಕಕ್ಕೆ—ಒಳವು.

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಪೇಱಿಗೆಯುಂಟು ।
ನೀನುಳ್ಳೊಡುಂಟು ಬೆಳ್ಗೊಡೆ
ನೀನಿಲ್ಲದಿವೆಲ್ಲಮೊಳವೆ ಭಾನುತನೂಜಾ ॥ ಕಂದಂ ॥

ನುಂಗುವುವುಮೊಳವುದಧಿಯೊಳ ಮಹಾಮತ್ಸ್ಯಂಗಳ್.

ಉಂಟೆಂಬುದರ್ಕೆ ಎಲ್ಲವೞಿಂತೆ ಪ್ರತಿಷೇಧಮಾಗಿಲ್ಲೆಂದಾಯಿತು ನೀಲಗ್ರೀವರುಮಾರ್ತರಿಲ್ಲ ಗೆಲಲನ್ನರಾರ್ಪರೆಂದಂ ಕೃಪಂ.

## ಸೂತ್ರಂ.

A form of the verb expressing the sense of the Locative (ಸತಿಸಪ್ತಮಿ) is formed by the suffix ಎ, instead of which also the suffixes ಇನೆಗಂ, ಉದುಂ, ಅನ್ನಂ, ಅನ್ನೆಗಂ, ಇನಂ, ಅಲೊಡಂ and ಅಲೊಡಂ + ಎ (ಅಲೊಡನೆ) are used.

ಇನೆಗಮುದುಮಂನಮಂನೆಗ
ಮಿನಮಲೊಡಂ ಸೊಂನೆವೆರಸು ಸತ್ಯರ್ಥದೆಕಾ |
ರನಿಜಸ್ಥಾನದೊಳಪ್ಪುವಿ
ವನುಕೂಲಂ ಮತ್ತೆಕಾರದಾದಿಯೊಳಲೊಡಂ || 246 ||

ಪದಚ್ಛೇದಂ.— ಇನೆಗಂ ಉದುಂ ಅನ್ನಂ ಅನ್ನೆಗಂ ಇನಂ ಅಲೊಡಂ ಸೊಂನೆವೆರಸು; ಸತ್ಯರ್ಥದ ಎಕಾರನಿಜಸ್ಥಾನದೊಳ್ ಅಪ್ಪುವು ಇವು; ಅನುಕೂಲಂ ಮತ್ತೆ ಎಕಾರದ ಆದಿಯೊಳ್ ಅಲೊಡಂ.

ಅನ್ವಯಂ.— ಸತ್ಯರ್ಥದ ಎಕಾರನಿಜಸ್ಥಾನದೊಳ್ ಇನೆಗಂ ಉದುಂ ಅನ್ನಂ ಆಂನೆಗಂ ಇನಂ ಅಲೊಡಂ ಇವು ಸೊಂನೆವೆರಸು ಅಪ್ಪುವು; ಮತ್ತೆ ಎಕಾರದ ಆದಿಯೊಳ್ ಅಲೊಡಂ ಅನುಕೂಲಂ.

ಟೀಕು.— ಸತ್ಯರ್ಥದ = ಸತಿಸಪ್ತಮಿಯರ್ಥದ; ಎಕಾರನಿಜಸ್ಥಾನದೊಳ್ = ಎಕಾರದ ನಿಜಸ್ಥಾನದಲ್ಲಿ; ಇನೆಂಗಂ = ಇನೆಂಗಂ ಎಂದು; ಉದುಂ = ಉದುಂ ಎಂದು; ಅಂನಂ = ಅಂನಂ ಎಂದು; ಅಂನೆಗಂ = ಅನ್ನೆಂಗಂ ಎಂದು; ಇನಂ = ಇನಂ ಎಂದು; ಅಲೊಡಂ = ಅಲೊಡಂ ಎಂದು; ಇವು = ಈ ರೂಪಂಗಳ್; ಸೊಂನೆವೆರಸು = ಸೊಂನೆಗೂಡಿ; ಅಪ್ಪುವು = ಆದೇಶವಾಗುವುವು; ಮತ್ತೆ = ಬಳಿಕ; ಎಕಾರದ = ಸತ್ಯರ್ಥದೆಕಾರದ; ಆದಿಯೊಳ್ = ಮೊದಲಲ್ಲಿ; ಅಲೊಡಂ = ಅಲೊಡಂ ಎಂದು; ಅನುಕೂಲಂ = ಹಿತವಪ್ಪುದು.

ವೃತ್ತಿ.—ಇನೆಗಂ ಉದುಂ ಅಂನಂ ಅಂನೆಗಂ ಇನಂ ಅಲೊಡಂ ಎಂಬಿವು ಸೊಂನೆವರಸಲ್ಲದಿರವು; ಇವು ಸತಿಸಪ್ತಮಿಯ ಎಕಾರಕ್ಕಾದೇಶಮಾಗಿ ಬಂದುವು; ಎಕಾರದ ಪೆಱಗೆ ಒರ್ಮೆ ಅಲೊಡಮೆಂಬುದೊಂದಾಗಮಮಾಗಿಯುಂ ಬರ್ಕುಂ.

ಪ್ರಯೋಗಂ.—ಸತಿಸಪ್ತಮಿಯ ಎಕಾರಕ್ಕೆ—ನುಡಿಯೆ; ಪೊರ್ದೆ; ನೆಲನದಿರೆ; ನೋಟಕರ್ಕಣಲಸೆ; ಮನಂಗೊರಗೆ.

ಎಕಾರದ ಆದೇಶಂಗಳೊಳ್ ಇನೆಗಮೆಂಬುದರ್ಕೆ—ಕಾಮುಕರಂ ಕರಮುಡಂಗಿಸುರ್ಗಪಿನೆಗಂ ಕಾಮುದನಡಂಗೆವೊಯ್ದಂ.

ಉದುಮೆಂಬುದರ್ಕೆ — ಬರವೇೞ್ಕುಂಬುದುಮ್ ಅಂಜನಾಚಲದವೊಲ್ ಕಣ್ಗೊಪ್ಪಿ ಬರ್ಪಂಬುಜೋದರಸಂ.

ಅನ್ನಮೆಂಬುದರ್ಕೆ—ಉದ್ಧವಿರ್ದಂ ನೆಗೆಪನ್ನಂ ಪೊಯ್ಯಲೆಂದವ್ವಳಿಪುದು.

ಅನ್ನೆಗಂ ಇನಮೆಂಬುದರ್ಕೆ—ಒಲೆಯೊಡನೆ ಮುತ್ತುಂಗಾಲೊಳ್ ನರೆ ಬರ್ಪಂನೆಗಮಿರು. ಗಂಗೆಯ ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ.

ಒಡಮೆಂಬುದರ್ಕೆ—ಕುರುಕುಲಾಧಿಪಂ ನುಡಿಯಲೊಡಂ.

ಎಕಾರದ ಪೆಱಗೆ ಅಲೊಡಮಾಗಮಕ್ಕೆ—ಬರಲೊಡನೆ ಕೊಟ್ಟಂ.

## ಸೂತ್ರಂ.

Of the above suffixes ಅನ್ನೆಗಂ, ಅನ್ನಂ, ಇನೆಗಂ, ಇನಂ are used for the Present and Future tenses; ಉದುಂ, ಅಲೊಡಂ for the Past.

ನೆಗೞ್ಗುಂ ಸಂಪ್ರತಿಗಂ ಭಾ
ವಿಗಮಂನೆಗಮಂನಮಿನೆಗಮಿನಮೆಂಬಿವು ಸೂ |
ರಿಗಳಿಂದುದುಮಲೊಡಂಗಳ್
ನೆಗೞ್ಗುಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್ ||247||

ಪದಚ್ಛೇದಂ.— ನೆಗೞ್ಗುಂ ಸಂಪ್ರತಿಗಂ ಭಾವಿಗಂ ಅಂನೆಗಂ ಅಂನಂ ಇನೆಗಂ ಇನಂ ಎಂಬ ಇವು ಸೂರಿಗಳಿಂದೆ, ಉದುಂ ಅಲೊಡಂಗಳ್ ನೆಗೞ್ಗುಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್.

ಅನ್ವಯಂ.— ಸೂರಿಗಳಿಂದೆ ಸತಿಸಪ್ತಮಿಯೊಳ್ ಸಂಪ್ರತಿಗಂ ಭಾವಿಗಂ ಅಂನೆಗಂ ಅಂನಂ ಇನೆಗಂ ಇನಂ ಎಂಬಿವು ನೆಗೞ್ಗುಂ, ಭೂತಾರ್ಥದಲ್ಲಿ ಉದುಂ ಅಲೊಡಂಗಳ್ ನೆಗೞ್ಗುಂ.

ಟೀಕು.— ಸೂರಿಗಳಿಂದೆ = ವಿದ್ವಾಂಸರಿಂದೆ; ಸತಿಸಪ್ತಮಿಯೊಳ್ = ಸತಿಸಪ್ತಮಿಯಲ್ಲಿ ಸಂಪ್ರತಿಗಂ = ವರ್ತಮಾನಕಾಲಕ್ಕಂ; ಭಾವಿಗಂ = ಭವಿಷ್ಯತ್ಕಾಲಕ್ಕಂ; ಅಂನೆಗಂ = ಅಂನೆಗಂ ಎಂದು; ಅಂನಂ = ಅಂನಂ ಎಂದು; ಇನೆಗಂ = ಇನೆಗಂ ಎಂದು; ಇನಂ = ಇನಂ ಎಂದು; ಎಂಬಿವು = ಎಂಬೀ ರೂಪಂಗಳ್; ನೆಗೞ್ಗುಂ = ಬರ್ಪುವು; ಭೂತಾರ್ಥದಲ್ಲಿ = ಭೂತಕಾಲದರ್ಥದಲ್ಲಿ ಉದುಮಲೊಡಂಗಳ್ = ಉದುಂ ಅಲೊಡಂ ಎಂಬಿವು; ನೆಗೞ್ಗುಂ = ಬರ್ಪುವು.

ವೃತ್ತಿ.—ಅಂನೆಗಂ, ಅಂನಂ, ಇನೆಗಂ ಇನಂ ಎಂಬಿವು ವರ್ತಮಾನದೊಳಂ ಭವಿಷ್ಯಂತಿಯೊಳಂ ವರ್ತಿಪುವು; ಉದುಂ, ಅಲೊಡಂ ಎಂಬಿವು ಭೂತವತಿಯೊಳ್ ಸಲ್ಗುಂ.

ಪ್ರಯೋಗಂ.—ಸಂಪ್ರತಿಗೆ—ನೆನೆವಂನೆಗಂ ಬಂದಂ; ಕೊಲ್ವಂಸಮ್ ಇಕ್ಕೆ ಕೊಂಡಂ; ಬಿಂಸೈಸುವಿನೆಗಮ್ ಎರ್ದೆಗೊಂಡಂ (Mdb. Ms. ಎಡೆಗೊಂಡಂ); ಇದಿರ್ವಪ್ಪಿನಮ್ ಅಪ್ಪಿ ಕೊಂಡಂ.

ಭವಿಷ್ಯಂತಿಗೆ—ಈವಂನೆಗಮಿರ್ದಂ; ಬರಂಬಡೆವನ್ನಮಾರಾಧಿಸಿದಂ; ಅವಧಿ ಬರ್ಪಿನೆಗಂ ಸೈರಿಸಿದಂ; ಬೆಳಗಪ್ಪಿನಂ ಕೇಳಿಸಿದಂ.

ಭೂತವತಿಗೆ—ಓಲಗಂ ಪರೆವುದುಮಾಲೋಚಸಕ್ಕೆ ಪೊಕ್ಕಂ; ಪಾವಸೆ ಕಿಡಲೊಡಂ ನೀರ್ತಿಳಿದುದು.—ಇವು ಸತಿಸಪ್ತಮಿಯ ಪ್ರಯೋಗಂಗಳ್

## ಸೂತ್ರಂ.

When ಅನ್ನೆಗಂ, ಇನ್ನೆಗಂ and ಎನ್ನೆಗಂ are followed by ವರಂ, or ವರೆಗಂ which denote boundary (ಸೀಮಾ, ಸೀಮೆ), Their last syllable is dropped Also ಮುಟ್ಟೆ denotes "as far as".

ಅಂನೆಗಮಿಂನೆಗಮೆಂನೆಗ
ಮೆಂನದೆ ಕಡೆಗುಂಟು ಲೋಪಮಿದಿರೊಳ್ಸೀಮೋ ।
ತ್ಪಂನಂ ವರಂ ವರೆಗಮಿರೆ
ಕೆಂನಂ ಪೆಱವರ್ಕೆ ಲೋಪವಿಧಿ ಮುಟ್ಟೆನೆಯುಂ ||248||

ಪದಚ್ಛೇದಂ.—ಅಂನೆಗಂ ಇಂನೆಗಂ ಎಂನೆಗಂ ಎಂನದೆ ಕಡೆಗೆ ಉಂಟು ಲೋಪಂ, ಇದಿರೊಳ್ ಸೀಮೋತ್ಪನಂ ವರಂ ವರೆಗಂ ಇರೆ; ಕೆಂನಂ ಪೆಱವರ್ಕೆ ಲೋಪವಿಧಿ; ಮುಟ್ಟೆ ಎನೆಯುಂ.

ಅನ್ವಯಂ.—ಇದಿರೊಳ್ ಸೀಮೋತ್ಪಂನಂ ವರಂ ವರೆಗಂ ಇರೆ, ಅಂನೆಗಂ ಇಂನೆಗಂ ಎಂನೆಗಂ ಎಂನದೆ ಕಡೆಗೆ ಲೋಪಂ ಉಂಟು; ಮುಟ್ಟೆನೆಯುಂ; ಕೆಂನಂ ಪೆಱವರ್ಕೆ ಲೋಪವಿಧಿ.

ಟೀಕು.—ಇದಿರೊಳ್ = ವರದಲ್ಲಿ; ಸೀಮಾ = ಸೀಮೆಯಲ್ಲಿ; ಉತ್ಪಂನಂ = ಹುಟ್ಟಿದುವಾದ; ವರಂ = ವರಂ ಎಂದು; ವರೆಗಂ = ವರೆಗಂ ಎಂದು; ಇರೆ = ಇರ್ದೊಡೆ; ಅಂನೆಗಂ = ಅಂನೆಗಂ ಎಂದು; ಇಂನೆಗಂ = ಇಂನೆಗಂ ಎಂದು; ಎಂನೆಗಂ = ಎಂನೆಗಂ ಎಂದು; ಎಂನದೆ = ಎಂನದೆ; ಕಡೆಗೆ = ಅಂತ್ಯಕ್ಕೆ; ಲೋಪಂ = ಲೋಪಂ; ಉಂಟು = ಉಂಟಾಗುವುದು; ಮುಟ್ಟೆನೆಯುಂ = ಮುಟ್ಟೆ ಎನೆಯುಂ; ಕೆಂನಂ = ವೆಗ್ಗಳವಾಗಿ; ಪೆಱವರ್ಕೆ = ಅನ್ಯವಾದುವರ್ಕೆ; ಲೋಪವಿಧಿ = ಲೋಪದ ವಿಧಿ ಬರ್ಪುದು.

ವೃತ್ತಿ.—ವರಂ ವರಗಮೆಂಬ ಸೀಮಾರ್ಥಶಬ್ದಂ ಪರದೊಳಿರೆ, ಅಂನೆಗಂ ಇಂನೆಗಂ ಎಂನೆಗಂ ಎಂಬಿವಱ ಗಕಾರಕ್ಕೆ ಲೋಪಂ; ವರಂ ವರೆಗಮೆಂಬಿವು ಪರದೊಳಿರ್ದೊಡಂ ಮಿಕ್ಕಲ್ಲಿ ಲೋಪಮಿಲ್ಲ; ಮುಟ್ಟೆ ಎಂದುಂ ಸೀಮಾರ್ಥಮಂ ಪೇೞ್ಗುಂ.

ಪ್ರಯೋಗಂ.—ಪರಮೆಂಬುದಾಗವುಕ್ಕೆ—ಎಂನೆವರಂ ಸಿರಿ ತಮಗುಂಟಂನೆವರಂ ಸೇವ್ಯರಲ್ತೆ ಖಳರುಂ. ಇಂನೆವರಂ ಗುಱಿಯಾದುದಿಲ್ಲ ಕಾಮಕರ ವಿಮುಕ್ತಬಾಣಹತಿಗೆ.

ಮುಟ್ಟೆಂಬುದರ್ಕೆ—ದೆಸೆಮುಟ್ಟೆ; ವಾರ್ಧಿಮುಟ್ಟೆ; ಅಂತಮುಟ್ಟೆ; ಆನಱಿಯೆನಾ ತಂಮುಟ್ಟೆ ಸಂಗ್ರಾಮಮುಂ.

## ಸೂತ್ರಂ.

It is not advisable to use the suffix ಅಲ್ instead of the ಎ of the Locative—Infinitive (S. 246). This last Infinitive form is used when another agent is expected (ಉಭಯಕರ್ತೃಕಂ).

ವಿದಿತೋಭಯಕರ್ತೃಕಮೆನಿ
ಸಿದ ಸತಿಸಪ್ತಮಿಗೆಕಾರಮಪ್ಪುದದರ್ಕಂ ।
ಜದೆ ಕೆಲರಲ್ವಂ ಪೇೞ್ವರ್
ಚದುರರದಂ ಮೆಚ್ಚರಲೊಡಮೆಂದೊಡೆ ಶುದ್ಧಂ॥249॥

ಪದಚ್ಛೇದಂ.—ವಿದಿತೋಭಯಕರ್ತೃಕಂ ಎನಿಸಿದ ಸತಿಸಪ್ತಮಿಗೆ ಎಕಾರಂ ಅಪ್ಪುದು. ಅದರ್ಕೆ ಅಂಜದೆ ಕೆಲರ್ ಅಲ್ವಂ ಪೇೞ್ವರ್; ಚದುರರ್ ಅದಂ ಮೆಚ್ಚರ್; ಅಲೊಡಂ ಎಂದೊಡೆ ಶುದ್ಧಂ.

ಯಥಾನ್ವಯಂ. ಟೀಕು.—ವಿದಿತ = ಪ್ರಸಿದ್ಧವಾದ; ಉಭಯಕರ್ತೃಕಂ = ಇರ್ವರ್ ಕರ್ತೃಗಳನುಳ್ಳುದು; ಎನಿಸಿದ ಸತಿಸಪ್ತಮಿಗೆ = ಎನಿಸಿದ ಸತಿಸಪ್ತಮಿಯ ಪ್ರಯೋಗಕ್ಕೆ; ಎಕಾರಂ = ಎತ್ವಂ; ಅಪ್ಪುದು = ಆಗುವದು; ಅದರ್ಕೆ = ಆ ಎಕಾರಕ್ಕೆ; ಅಂಜದೆ = ಹೆದರದೆ; ಕೆಲರ್ = ಕೆಲಂಬರ್; ಅಲ್ವಂ = ಅಲ್ ಎಂಬುದಂ; ಪೇೞ್ವರ್ = ಹೇೞ್ವರ್; ಚದುರರ್ = ಬಲ್ಲವರ್; ಅದಂ = ಆ ಪ್ರಯೋಗಮಂ; ಮೆಚ್ಚರ್ = ಒಡಂಬಡರ್; ಅಲೊಡಂ = ಅಲೊಡಂ ಎಂದು; ಎಂದೊಡೆ = ಪೇೞ್ದೊಡೆ; ಶುದ್ಧಂ = ಶುದ್ಧವಪ್ಪುದು.

ವೃತ್ತಿ.—ಇರ್ಬರ್ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ; ಆ ಎಕಾರಕ್ಕೆ ಅಲುವಂ ಕೆಲರ್ ಅಂಜದೆ ಪೇೞ್ವರ್; ಅದುಮಾಗದು; ಅಲೊಡಮೆಂದೊಡೆಶುದ್ಧಂ.

ಪ್ರಯೋಗಂ.—ಇರ್ಬರ್ ಕರ್ತೃಗಳ್ಗಪ್ಪ ಸತಿಸಪ್ತಮಿಗೆ—ಗಾಯಕಂ ಪಾಡೆ ದೇವಂ ಮೆಚ್ಚಿದಂ; ಪಾತ್ರವಾಡೆ ವಾದಕಂ ಬಾಜಿಸಿದಂ; ವಂದಿ ಪೊಗೞೆ ಚಾಗಿ ಕೊಟ್ಟಂ.

ಅಲ್ಗೆ—ಪಾದಪದ್ಮಂಗಳನೊತ್ತುತ್ತಿರಲ್ ಶೂದ್ರಿಕನೃಪತಿ ಸುಖಾಸೀನನಾಗಿರ್ದನಾಗಳ್; ಬಯ್ಗಿನ ಕೆಂಬಿಸಿಲೆಳಸಲೆಸೆದುವಾಶ್ರಮತರುಗಳ್ ಎಂಬಿವ ಬದ್ಧಂಗಳ್.

ಅಲೊಡಮೆಂಬುದಱ ಶುದ್ಧಕ್ಕೆ—ವಸಂತಂ ಬರಲೊಡಂ ಕೋಗಿಲೆಯುಲಿಗುಂ; ಗಾಳಿ ಬೀಸಲೊಡನೆಲೆ ಕಱುಲ್ದುವು.

## ಸೂತ್ರಂ.

The Suffix ಒಡೆ which introduces the Subjunctive (ಪಕ್ಷಾರ್ಥಂ), is used for all genders, all numbers, all persons and all tenses.

ಪಿರಿದುಂ ಪಕ್ಷಾಂತರಮುಂ
ನಿರವಿಪೆಕಾರಂ ನಿಜಾಂತಮಾದೊಡೆಶಬ್ದಂ ।
ಪರಿಕಿಸೆ ಧಾತ್ವಂತ್ಯದೊಳಾ
ವರಿಸಿರ್ಕುಂ ಲಿಂಗವಚನಪುರುಷಾಯತ್ತಂ ॥ 250 ॥

ಪದಚ್ಛೇದಂ.— ಪಿರಿದುಂ ಪಕ್ಷಾಂತರಮುಂ ನಿರವಿಪ ಎಕಾರಂ ನಿಜಾಂತಂ ಆದ ಒಡೆ ಶಬ್ದಂ, ಪರಿಕಿಸೆ, ಧಾತ್ವಂತ್ಯದೊಳ್ ಆವರಿಸಿ ಇರ್ಕುಂ, ಲಿಂಗವಚನಪುರುಷಾಯತ್ತಂ.

ಅನ್ವಯಂ.— ಲಿಂಗವಚನಪುರುಷಾಯತ್ತಂ ಆವರಿಸಿ ಇರ್ಕುಂ ಎಂಬುದನ್ವಯಂ.

ಟೀಕು.— ಪಿರಿದುಂ = ವಿಶೇಷವಾಗಿ; ಪಕ್ಷಾಂತರಮುಂ = ಒಂದು ಪಕ್ಷಾಂತರವಂ; ನಿರವಿಪೆಕಾರಂ = ಪೇಳ್ವ ಎಕಾರಂ; ನಿಜಾಂತಂ = ತಂನಂತಂ; ಆದ = ಆದ; ಒಡೆಶಬ್ದಂ = ಒಡೆ ಎಂಬ ಶಬ್ದಂ; ಪರಿಕಿಸೆ = ವಿಚಾರಿಸೆ; ಧಾತ್ವಂತ್ಯದೊಳ್ = ಧಾತುಗಳಂತ್ಯದಲ್ಲಿ; ಲಿಂಗ = ಲಿಂಗತ್ರಯದಲ್ಲಿ; ವಚನ = ವಚನತ್ರಯದಲ್ಲಿ; ಪುರುಷ = ಪುರುಷತ್ರಯದಲ್ಲಿ; ಆಯತ್ತಂ = ಕೂಡಿದುದಾಗಿ; ಆವರಿಸಿರ್ಕುಂ = ಪೊರ್ದುಗೆಯಾಗಿರ್ಪುದು.

ವೃತ್ತಿ.—ಪಕ್ಷಾರ್ಥಮುಂ ಪೇೞ್ವೆಕಾರಂ ಕಡೆಯಾಗುಳ್ಳೊಡೆಶಬ್ದಂ ಲಿಂಗತ್ರಯವಚನತ್ರಯ ಪುರುಷತ್ರಯಾನ್ವಿತಮಾಗಿ, ಧಾತುವಿನ ಕಡೆಯೊಳ್ಪತ್ತುಗುಂ.

ಪ್ರಯೋಗಂ.— ಲಿಂಗತ್ರಯಕ್ಕೆ—ನೋೞ್ಪೊಡವಳ್ಕಿಱಿಯಳ್; ಸಮನುಡಿವೊಡವಂ ಪಿರಿಯಂ; ತೀಡುವೊಡಲ್ಲಿ ಕಂಮೆಲರ್ತೀಡುಗುಂ.

ವಚನತ್ರಯಕ್ಕೆ—ಕಾದುವೊಡೊರ್ವನೆ ಬಲ್ಲಿದಂ; ಪೋಲಿಸುವೊಡಿರ್ವರುಂ ತಕ್ಕರ್; ನುಡಿವೊಡೆಲ್ಲರುಂ ಮಾತಱಿಯರ್.

ಪುರುಷತ್ರಯಕ್ಕೆ— ಪೊರ್ದುವೊಡವನೊಳ್ಳಿದಂ; ತಿರ್ದುವೊಡವರೂಳ್ಳಿದರ್; ಬೇಱ್ಪೊಡೆ ನೀನೊಳ್ಳಿದಯ್; ಈವೊಡೆ ನೀವೊಳ್ಳಿದಿರ್; ಭಾವಿಪೊಡಾನೊಳ್ಳಿದೆಂ; ಸೇವಿಪೊಡಾವೊಳ್ಳಿದೆವು.

ಪಿರಿದೆಂಬುದಱಿಂ ಕಾಲತ್ರಯಕ್ಕೆ—ಪುಸಿದೊಡೆ ಬಿಟ್ಟಂ; ಪಳಂಚಿದಪೊಡೆ ಕೊಂದಪಂ; ಚಿತ್ರಿಪೊಡೆ ತೂಳಿಕೆಯುಂ ತರಿಸುವಂ.

## ಸೂತ್ರಂ.

Roots and verbal themes have various meanings.

ಧಾತುಗಳವು ನಾನಾರ್ಥೋ
ಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಱಿದ ।
ನ್ವಿತರೆ ಕ್ರಿಯಾನುಕೂಲಂ
ಮಾತೇಂ ಪೂರಿಸುಗೆ ಮತ್ತಮುೞಿದುವನಿದಱೊಳ್
|| 251a ||

ಪದಚ್ಛೇದಂ.— ಧಾತುಗಳ್ ಅವು ನಾನಾರ್ಥೋಪೇತಂಗಳ್; ಲಕ್ಷ್ಯಸಿದ್ಧಿವಿಡಿದುವಂ ಅಱಿದು, ಅನ್ವಿತರೆ ಕ್ರಿಯಾನುಕೂಲಂ, ಮಾತೇಂ, ಪೂರಿಸುಗೆ ಮತ್ತಂ ಉೞಿದುವಂ ಇದಱೊಳ್.

ಅನ್ವಯಂ.—ಮತ್ತಂ ಉೞಿದುವಂ ಇದಱೊಳ್ ಪೂರಿಸುಗೆ ಎಂಬುದನ್ವಯಂ.

ಟೀಕು. — ಧಾತುಗಳ್ = ಧಾತುಗಳ್; ಅವು = ಅವು; ನಾನಾರ್ಥೋಪೇತಂಗಳ್ = ನಾನಾರ್ಥದೊಡನೆ ಕೂಡಲ್ಪಟ್ಟುವು; ಲಕ್ಷ್ಯಸಿದ್ಧಿವಿಡಿದುವಂ = ಉದಾಹರಣೆಗಳಲ್ಲಿ ಸಿದ್ಧಿವಡೆದುವಂ; ಅಱಿದು = ತಿಳಿದು; ಅನ್ವಿತರೆ = ಬಲ್ಲವರೆ; ಕ್ರಿಯಾನುಕೂಲಂ = ಕ್ರಿಯೆಗೆ ಅನುಕೂಲವಾಗಿ; ಮಾತೇಂ = ಹೇೞ್ವುದೇಂ; ಮತ್ತಂ = ಇನ್ನು; ಉೞಿದುವಂ = ಉೞಿದ ಧಾತುಗಳಂ; ಇದಱೊಳ್ = ಈ ಆಖ್ಯಾತಪ್ರಯೋಗದಲ್ಲಿ; ಪೂರಿಸುಗೆ = ಪೂರ್ಣವಂ ಮಾಡುಗೆ.

ವೃತ್ತಿ.—ಧಾತುಗಳ್ಪಲವರ್ಥಂಗಳಂ ನುಡಿಯಲ್ಸಮರ್ಥಂಗಳಾಗಿರ್ಪುವು; ಪ್ರಮಾಣಪುರುಷರ ಮಾರ್ಗೋದಾಹರಣಂಗಳ ಬೞಿವಿಡಿದು, ವಾಕ್ಯಾನ್ವಯಸಿದ್ಧಿಯುಳ್ಳರ್ ಕ್ರಿಯಾನುಕೂಲವಾಗಿ ಮತ್ತಮ್ ಈ ಆಖ್ಯಾತಪ್ರಕರಣದೊಳ್ತಿಳಿದು ಪೂರಿಸುಗೆ.

## ಅನುಕ್ತಸೂತ್ರಂ.[1]

If the verb ಪಡು (with personal suffixes) is joined to verbs that have either the suffix ಅಲ್ or ಎ and are transitive (ಸಕರ್ಮಕಂ), the so-called Passive is formed; when they are intransitive, the combination with ಪಡು does not alter their meaning.

ಕ್ರಿಯೆಯ ಪದಂ ತಾಂ ಕರ್ತೃ
ಪ್ರಯುಕ್ತಮಾಗೆಲ್ಲಿಯೇನದೆಂಬಿಚ್ಛೆಯನಾ |
ಶ್ರಯಿಪುದು ಸಕರ್ಮಕಮದಲ್
ಪ್ರಯುಕ್ತ ಪಡುಧಾತು ಸರ್ವಧಾತುಗೆಯಕ್ಕುಂ
|| 251b ||

ಪದಚ್ಛೇದಂ.—ಕ್ರಿಯೆಯ ಪದಂ ತಾಂ ಕರ್ತೃಪ್ರಯುಕ್ತಂ ಆಗಿ ಎಲ್ಲಿ ಏನ್ ಅದು ಎಂಬ ಇಚ್ಛೆಯಂ ಆಶ್ರಯಿಪುದು, ಸಕರ್ಮಕಂ ಅದು, ಅಲ್ಪ್ರಯುಕ್ತ ಪಡುಧಾತು ಸರ್ವಧಾತುಗೆ ಅಕ್ಕುಂ.

ಯಥಾನ್ವಯಂ. ಟೀಕು.—ಕ್ರಿಯೆಯ ಪದಂ=ಕ್ರಿಯಾಪದಂ; ತಾಂ=ತಾಂ; ಕರ್ತೃ ಪ್ರಯುಕ್ತಂ= ಪದದೊಡನೆ ಕೂಡಿದುದು; ಆಗಿ = ಆಗಿ; ಎಲ್ಲಿ = ಆವೆಡೆಯಲ್ಲಿ; ಅದು = ಅದು; ಏನ್ = ಏನೆಂದು; ಎಂಬಿಚ್ಛೆಯಂ = ಎಂಬಾಪೇಕ್ಷೆಯಂ; ಆಶ್ರಯಿಪುದು = ಬಯಸುವುದು; ಅದು =ಆ ಪದಂ; ಸಕರ್ಮಕಂ = ಸಕರ್ಮಕಪ್ರಯೋಗಂ ಅಪ್ಪುದು; ಸರ್ವಧಾತುಗೆ = ಈ || ಪ್ರದಾನೇ || ಎಂಬುದಾದಿಯಾದ ಸಮಸ್ತಧಾತುಗಳ್ಗೆ (vide 6th Chapter); ಅಲ್ಪ್ರಯುಕ್ತ ಪಡುಧಾತು = ಅಲ್ ಎಂಬುದಱೊಡನೆ ಕೂಡಿದ ಪಡು ಎಂಬ ಧಾತು; ಅಕ್ಕುಂ = ಆಗುವುದು.

ವೃತ್ತಿ.—ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಾಪೇಕ್ಷೆಯಂ ಬಯಸುವುದು, ಅದು ಸಕರ್ಮಕಮಕ್ಕುಂ. ಅಲ್ಲಿ ಈ || ಪ್ರದಾನೇ || ಎಂಬುದಾದಿಯಾದ ಸಕಲಧಾತುಗಳ್ಗೆ ಅಲ್ ಎಂಬುದಱೊಡನೆ ಕೂಡಿದ ಪಡುಧಾತುವಕ್ಕುಂ; ಅಲ್ಲಿ ಮೊದಲ್ಪೇೞ್ದ ತಾಂ ನೀನ್ ಆನೆಂಬ ಪುರುಷತ್ರಯಕ್ಕೆ ಏಕಾನೇಕವಚನದೊಳ್ ಅಮ್ ಅರ್ ಅಯ್ ಇರ್ ಎನ್ ಎವುಗಳಕ್ಕುಂ ಎಂಬುದನುವರ್ತಿಸೆ, ಪದಮಕ್ಕುಂ.

ಪ್ರಯೋಗಂ.—ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್; ನೀನಿರಲ್ಪಟ್ಟಯ್, ನೀವಿರಲ್ಪಟ್ಟಿರ್; ಆನಿರಲ್ಪಟ್ಟೆಂ, ಆಮಿರಲ್ಪಟ್ಟೆವು ಎಂಬಂತೆ ಎಲ್ಲಕ್ಕಂ ತಿಳಿವುದು.

[1] It is not found in our best two Manuscripts, and does also not occur in the Mûḍabidaru Manuscript. It is, therefore, an interpolation (Cased on the Śabdânuśasana).

ಶಬ್ದಾನುಶಾಸನದಲ್ಲಿ ಸೂತ್ರಂ (4, 2)[1] || ಕರ್ಮಣಿ || ಅನ್ಯದ್-ಯುಷ್ಮದ್-ಅಸ್ಮದ್-ಅರ್ಥೇಷು ಪ್ರತ್ಯೇಕಮ್ ಏಕತ್ವಾನೇಕತ್ವಯೋರ್ ವಿವಕ್ಷಿತಯೋರ್ ಯಥಾಕ್ರಮಂ ಧಾತೋಃ ಅಮ್ ಅರ್ ಅಯ್ ಇರ್ ಎನ್ ಎವು ಏತೇ ಪ್ರತ್ಯಯಾ ಭವಂತಿ ಕರ್ಮಣಿ ಚಾಭಿದೇಯೇ || ಇಲ್ಲಿ ಕರ್ಮಣಿ ಎಂದು ಕರ್ಮದಲ್ಲಿ ಎಂಬೀ ಸೂತ್ರಕ್ಕೆ ಅನುವರ್ತನೆ ಬಂದು, ತಾನ್ನೀನಾನೆಂಬರ್ಥಂಗಳಲ್ಲಿ ಬೇಱೆ ಬೇಱೆ ಏಕವಚನ ಬಹುವಚನಂಗಳ್ ವಿವಕ್ಷೆಯಾಗೆ ಯಥಾಕ್ರಮವಾಗಿ ಧಾತುಗೆ ಅಮ್ ಅರ್ ಅಯ್ ಇರ್ ಎನ್ ಎವು ಎಂಬೀ ಪ್ರತ್ಯಯಂಗಳ್ ಕರ್ಮದೊಳಮ್ ಅಕ್ಕುಂ— ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್, ನೀನಿರಲ್ಪಟ್ಟಯ್, (ಅದು ಇರೆ ಪಟ್ಟುದು) ಎಂಬಂತೆಲ್ಲಕ್ಕಂ ಪತ್ತಿಸುಗುಂ. ಯೋಗವಿಭಾಗಮುತ್ತರಾರ್ಥಂ.

ಸೂತ್ರಂ (4, 3) || ಬೇಡ್ವಾದೇರ್ ಅಪ್ರಧಾನೇ || ಅನ್ಯದರ್ಥವಿವಕ್ಷಾಯಾಂ ಬೇಡ್ ಇತ್ಯೇವಮ್ ಆದಿಭ್ಯೋ ಧಾತುಭ್ಯಃ ಅಪ್ರಧಾನೇ ಕರ್ಮಣ್ಯ ಅಮ್-ಆದಯೋ ಭವಂತಿ || ಎಂದುದಾಗಿ ಬೇಡ್ವಾದಿಗಪ್ರಧಾನದಲ್ಲಿ ಎಂಬಾ ಸೂತ್ರಕ್ಕೆ ಅನ್ಯಾರ್ಥವಿವಕ್ಷೆಯಲ್ಲಿ ಬೇಡು ಎಂಬುದಾದಿಯಾದ ಧಾತುಗಳ್ಗೆ ಅಪ್ರಧಾನವಾದಲ್ಲಿ ಕರ್ಮದಲ್ಲಿ ಅಮಾದಿಗಳಕ್ಕುಂ.

ಪ್ರಯೋಗಂ.—ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ; ನೀಂ ಬೇಡಲ್ಪಟ್ಟಯ್; ಆಂ ಬೇಡಲ್ಪಟ್ಟೆಂ. ಇಂತು— ಗೋವಳನಿಂದೆ ಎರ್ಮೆ ಪಾಲಂ ಕಱೆಯಲ್ಪಟ್ಟುದು; ಉಪಾಧ್ಯಾಯಂ ಶಿಷ್ಯರಿಂ ತತ್ವಮಂ ಬೆಸಗೊಳಲ್ಪಟ್ಟಂ; ಬೇಹುಕಾಱಿನರಸನಿಂ ಸುದ್ದಿಯಂ ಕೇಳಲ್ಪಟ್ಟಂ; ಪಟ್ಟಳ್, ಪಟ್ಟುದು ಎಂಬಂತೆ.

ಸೂತ್ರಂ (4, 89)[2] || ಕರ್ಮಣ್ಯ ಅನು ಪಡುಃ || ಧಾತೋಃ ಪಡುಧಾತುರ್ ಅನುಪ್ರಯುಜ್ಯತೇ ಕರ್ಮಣಿ ವಿಹಿತೇತಿಜಿಪರೇ || ಎಂದುದಾಗಿ ಧಾತುಗೆ ಪಡುಧಾತುವನುಪ್ರಯುಜ್ಯವಾದಪುದು ಕರ್ಮದಲ್ಲಿ ವಿಹಿತಮಾಗೆ, (ತಿಜಿ ಎಂಬ) ಅಮಾದಿಗಳ್ಪರಮಾಗೆ —

1) The first S. is: ಧಾತೋರ್ ಏಕಾನೇಕತ್ವೇ (the Presonal suffixes are used). The instance given are: ತಾನಿರ್ದಂ, ತಾಮಿರ್ದರ್, ನೀನಿರ್ದಯ್, ನೀಮಿರ್ದಿರ್; etc.
2) Sûtra 88 see in note 1 s. S. 234.

ಮಾಡಲ್ಪಟ್ಟುದು ಘಟಂ ಕುಂಬಱನಿಂ; ನೋಡಲ್ಪಟ್ಟನರಸನಂಗನೆಯಿಂ; ಬಯಸಲ್ಪಟ್ಟಳ್ತರುಣಿ ರಮಣನಿಂ; ಮಾಡಲ್ಪಡುಗೆಮಗೆ ಸಂಪದಂ ಜಿನಪತಿಯಿಂ; ಕಿಡಿಸಲ್ಪಡುಗೆಮ್ಮ ದುಃಖಸಂತತಿ ಜಿನನಿಂ.

ಕರ್ಮಣಿಪ್ರಯೋಗಮಲ್ಲದಿರೆ—ನೋಡಿದಳರಸನ್ನಂಗನೆ; ರಮಣಂ ತರುಣಿಯಂ ಬಯಸಿದಂ; ಮಾಡಿದಂ ಪದಕಮನಕ್ಕಸಾಲೆ.

ಸೂತ್ರಂ (4, 91) || ತಸ್ಮಿನ್ನೆದಲ್ || ಧಾತೋರ್ ಎಕಾರಃ ಅಲ್ ಭವತಃ ಪಡುಧಾತೌ ಪರೇ || ಎಂದುದಾಗಿ ಧಾತುಗೆ ಹ್ರಸ್ವದೆಕಾರಂ ಅಲ್ಲುಂ ಆಪ್ಪುವು ಪಡುಧಾತು ಪರಮಾಗೆ—ಮಾಡೆ ಪಟ್ಟಂ, ಮಾಡಲ್ ಪಟ್ಟಂ; ನೋಡೆ ಪಟ್ಟಂ, ನೋಡಲ್ ಪಟ್ಟಂ; ಕಿಡಿಸೆ ಪಟ್ಟುದು, ಕಿಡಿಸಲ್ ಪಟ್ಟುದು ಎಂಬಂತೆಲ್ಲಕ್ಕಂ ಪತ್ತಿಸುವುದು.

The author Kêśava is a second Bramha indeed!

ಕವಿತಾ-ಪ್ರೌಢಿಯೊಳಬ್ಜ-ಸಂಭವನೆ ಕರ್ತಾರಂ ಕ್ರಿಯಾ-ಕೌಶಲ್ಯಂ
ಸ್ತವನೀಯಂ ತದಧೀನವಾದಖಿಳ-ಶಾಸ್ತ್ರಾಮ್ನಾಯಮುಂ ಕೂಡೆ ಬ|
ಲ್ಲವರಿಲ್ಲೆನ್ನದಿರೊರ್ವನಿಂದಭಿನವ-ಬ್ರಹ್ಮಂ ಗಡೆಂಬಂತೆ ತೋ
ಱುವನಾತ್ಮೀಯ-ವಚೋ-ವಿಚಿತ್ರತರ-ವಿದ್ಯಾವೇಶವಂ ಕೇಶವಂ||
ಮತ್ತೇಭವಿಕ್ರೀಡಿತಂ ||

ಟೀಕು.—ಕವಿತ್ವದ ಬಲ್ಲತನದಲ್ಲಿ ಬ್ರಹ್ಮನೆ ಕರ್ತೃ ಕ್ರಿಯಾಕೌಶಲ್ಯವುಳ್ಳವಂ ಸ್ತುತಿ ಮಾಡಲ್ತಕ್ಕವಂ, ಅವನಧೀನವಾದ ಸಮಸ್ತವಾದ ವೇದಶಾಸ್ತ್ರಂಗಳಂ ಒಡನೆ ಅಱಿತವರ್ ಇಲ್ಲವೆಂದು ಎನಲ್ ಬೇಡ; ಕವಿಕೇಶವಂ ಒರ್ವಂ ಇಂದು ಹೊಸಬನಾದ ಬಹ್ಮಂ ಗಡ! ಎಂಬ ಹಾಂಗೆ ತನ್ನ ಸಂಬಂಧವಾದ ವಾಕ್ಯಂಗಳ ಚೋದ್ಯತರವಾದ ವಿದ್ಯಂಗಳ ಆವೇಶವನ್ನು ಕಾಣಿಸುವಂ.

ಗದ್ಯಂ. — ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ನಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಆಖ್ಯಾತಸಾಕಲ್ಯಲಕ್ಷಣಮೆಂಬ ಪಂಚಮಸಂಧಿ ಸಂಪೂರ್ಣಂ.

೫ನೆಯ ಅಧ್ಯಾಯಂ ಸಮಾಪ್ತಂ.

# ೬ನೆಯ ಅಧ್ಯಾಯಂ. VI. CHAPTER.

## ಧಾತುಪ್ರಕರಣಂ.

## CANARESE VERBAL ROOTS AND THEMES.

(This list is not in the Mûḍabidaru Manuscript; it is usually given separately.)

ಸೂತ್ರಂ.

Kêśava's list of Canarese verbal Roots (and themes) is equal in value to (the poet) Bhîma's list of Samskṛita roots.

ವೇದಸಮನಾಗಿ ಭೀಮನಿ
ನಾದುದು ಸಂಸ್ಕೃತದ ಧಾತುವಾ ತೆಱದಿಂದಂ |
ಯಾದವಕಟಕಾಚಾರ್ಯನಿ
ನಾದುದು ಕರ್ಣಾಟಧಾತು ಕವಿಕೇಶವನಿಂ ||

ಸೂತ್ರಂ.

No Canarese Roots end in aspirated consonants or in ಙ್, ಞ್, ಶ್, ಷ್, ಹ್, or ಕ್ಷ್.

ದೊರೆವಡೆದ ಮಹಾಪ್ರಾಣಾ
ಕ್ಷರಾಂತದಿಂ ಙಞಶಷಾಂತಹಾಂತಕ್ಷಾಂತೋ |
ದ್ಧರಣದಿನುದ್ಭವಿಸವು ಬ
ಲ್ಲರ ಮತದಿಂ ಧಾತು ತಿಳಿವುದಿವನೀಕ್ರಮದಿಂ ||251c||

ಕ್ರಿಯಾರ್ಥೋ ಧಾತುಃ[1]

(A verbal root or theme expresses the meaning of a verb)

### 1. ಸ್ವರಧಾತುಗೆ.

1. ಈ. ಪ್ರದಾನೇ (literally: in giving), to give.

2. ಓ. ಸ್ನೇಹೇ, to love.

### 2. ಕಾಂತಕ್ಕೆ.

3. ಕಾ. ರಕ್ಷಣೇ, to guard.

4. ಕೀ. ರಕ್ತಪಕ್ವೇ, to become pus.

5a. ಕೇ. ಶಯನೇ, to lie down, ನಿಧುವನೇಚ, to lie with.

[1] This sentence occurs in 1, 12 of the Śabdânuśâsana.

5*b*. ಕುಟಕು. ಗಾಢಪೂರಣೇ, to cram into.

6. ಮಿಸುಕು. ಸ್ಪಂದನೇ, to move.

7. ಮುಸುಕು. ಆವರಣೇ, to cover, -ಭಾವೇಚ, a covering.

8. ಕುಸುಕು, ಕುಸುಂಕು. ಘಾತನೇ, to strike.

9. ಪಿಸುಕು, ಪಿಸುಂಕು. ಅವಜ್ಞಾತಿಶಯೇ, to treat with great disrespect.

10. ಕುಱುಕು, ಕುಱುಂಕು. ಖಾದನೇ, to eat, etc.

11. ಮುಱುಕು. ಮುಖವಿಕಾರೇ, to distort the face, etc.

12. ತುಱುಕು. ಗಾಢಪ್ರವೇಶೇ, to force into.

13. ನುಱುಕು. ವೃದ್ಧಿಹೀನೇ, to be or become deficient in growth.

14. ಇಱುಕು, ಇಱುಂಕು. ನಿಗ್ರಹಗ್ರಹಣೇ, to hold firmly, etc.

15. ಸಾಕು. ರಕ್ಷಣೇ, to preserve, foster.

16. ಜರ್ಕು. ನಖಘಾತನೇ, to strike with the nails or claws.

17. ನೂಂಕು. ಪ್ರೇರಣೇ, to push on, etc.

18. ಸೋಂಕು. ಸ್ಪರ್ಶನೇ, to touch, etc.

19. ಕೂಂಕು. ಉತ್ಸರ್ಪಣೇ, ಉತ್ಸರ್ಪಣಮೆಂದು ಗಮನಂ, to soar, etc.

20. ತೇಂಕು. ಪ್ಲವನೇ, to float, swim.

21. ಔಂಕು. ದೃಢಪೀಡನೆ to press firmly, etc.

22. ಕಲಂಕು. ಆಲೋಡನೇ, to stir up, etc.

23. ಚಲುಕು, ಚಲುಂಕು. ಜಲೋತ್ಸರ್ಜನೇ, to pour out liquids.

24. ಚಲಕು, ಚಲಂಕು. ಕರವಿಮೋಚನೇ, to loosen from out of the hand, etc.

25. ಪೊಳಕು, ಪೊಳಂಕು. ಚರ್ವಣಕ್ರಿಯಾಯಾಂ, to chew.

26a. ಪಳಂಕು. ಗಾಢಸ್ಪರ್ಶನೇ, to touch strongly or forcibly, to push, etc.

26b. ಪಳುಂಕು, (ಪಱುಕು). ನೂಂಕು, to push, etc.

27. ಹಲಕು. ವೃಕ್ಷಾರೋಹಣೇ, to climb, as a tree, ಶರೀರಾಂಗಭೇದೇ ಚ. a certain member of the body.

28. ಉಲುಕು. ಶರೀರಸ್ಫುರಣೇ, the body to shake, etc.

29. ಮುಲುಕು. ಪ್ರಸವನಕ್ರಿಯಾಯಾಂ, to be in labour.

30. ಕುಲುಕು. ಗಾಢಪೂರಣೇ, to fill with force, etc.

31. ತೊಡಕು, ತೊಡಂಕು. ವಿಪರ್ಯಾಸೇ, to oppose, etc.

32. 33. ಕೊಂಕು, ಬಂಕು. ಕೌಟಿಲ್ಯೇ, to get crooked, to bend.

34. ತುಡುಕು, ತುಡುಂಕು. ಸತ್ವರಗ್ರಹಣೇ, to seize or grasp hastily, etc.

35. ಪುಡುಕು, ಪುಡುಂಕು. ಕರಾನ್ವೇಷಣೇ, to search for with the hands, etc.

36. ಮಿಡುಕು, ಮಿಡುಂಕು. ಚೈತನ್ಯೇ, to recover consciousness, etc.

37. ಇಡುಕು, ಇಡುಂಕು. ಗಾಢವಿಮೋಚನೇ, to unloose vehemently, etc.

38. ಅಡಕು. ಸ್ಥಾನಾಂತರಪ್ರಣೀತೌ, to put in another place, etc.

39. ಕುಡುಕು. ಚಂಚುಘಾತನೇ, to peck, ಧಾನ್ಯಾದಿದ್ರವ್ಯೇ ಚ, corn and other things, food aliment.

40. ಕರ್ದುಕು, ಕರ್ದುಂಕು. ಲಘುಚಂಚುಘಾತನೇ, to peck lightly.

41. ಬರ್ದುಕು, ಬರ್ದುಂಕು. ಜೀವನಾರ್ಥೇ, to live.

42. ಬೆದಕು. ಅನ್ವೇಷಣೇ, to search for.

43. ಕುಡುಕು. ಈಷತ್ಪ್ರಧಾವನೇ, to wash gently.

44. ಮುಡುಕು (ಮುದುಕು). ಶರೀರೋಪಗೂಹನೇ, ಉಪಗೂಹನಮೆಂದಾಲಿಂಗನಂ, to embrace the body.

45. ಮಿನುಕು. ಅಂತರ್ಗತಸ್ವನೇ, to speak in an indistinct tone etc., ಕಾಂತೌ ಚ, to glitter.

46. ಕೆಣಕು. ಕದರ್ಥನೇ; to irritate or provoke.

47. ಕುಱುಕು. ಮುಸಲಕ್ರಿಯಾಯಾಂ, to pound, ಕೇಳೇ ಚ, to play (or ಕೀಲೇ ಚ, a plug).

48. ಕೊಣಕು. ಮೃಗಲಂಘನೇ, to leap, as a wild beast

49. ತಿಣುಕು (o. r. ತಿಣಕು). ಅಪಾನವಾಯೌ, to fart.

50. ಬಿಕ್ಕು. ಉಚ್ಛ್ವಾಸೇ, to sigh, sob, ಮಾಂಸಭೇದೇ ಚ, a kind of flesh.

51. ಒಕ್ಕು. ಖಲಕರಣೇ, to work on the floor for treading out corn. ಶಕುನೇ ಚ, an omen.

52. ಇಕ್ಕು. ತ್ಯಾಗ—ಹನನಯೋಃ, to deposit, etc. to beat, kill.

53. ನಕ್ಕು, (o. r. ನೆಕ್ಕು). ಲೇಹನೇ, to lick.

54. ಪಿಕ್ಕು. ವಿವರಣೇ, to separate.

55. ಎಕ್ಕು. ವಿಭಜನೇ, to divide, etc. ಪ್ರವಾಹಿ ಕಾರ್ಯಾಂ ಚ, to purge.

56. ತಿಕ್ಕು. ತಿರ್ಯಕ್ಕಂಡೂತಿಲೇಹನೇ, to lick the itch as beasts do.

57. ಕೆಕ್ಕು. ಗೋಶಿಕ್ಷಾಧ್ವನೌ, to shout in training cattle.

58. ಮುಕ್ಕು. ಖಾದನವಿಶೇಷೇ, to eat in a certain manner

59. ನೆಕ್ಕು. ಅಂತರ್ಲೀನೇ, to be depressed, etc.

60. ಕುಕ್ಕು. ವಸ್ತ್ರಸ್ವಲ್ಪಘಾತನೇ, to beat a cloth to a small extent. ಪಕ್ಷಿಭೇದೇ ಚ, a crane.

61. ಮುಱುಕು, ಮುಱುಂಕು. ಜಲನಿಮಜ್ಜನೇ, to be immersed in water.

62. ತುಳುಕು, ತುಳುಂಕು. ಸೇಚನೇ, to sprinkle, etc.

63. ಬಳ್ಕು. ನಮನೇ, to bend.

64. ನಿಳ್ಕು. ಉಪರಿಸ್ಪರ್ಶನೇ, to stretch one's self, etc.

65. ಉಳ್ಕು. ದೀಪ್ತೌ, to shine ದ್ರವ್ಯೇ ಚ, a meteor.

66. ಅಳ್ಕು. ಭಯೇ, to fear, ಅಶಕ್ತೌ ಚ, to be without strength

67. ತಳ್ಕು. ಅನುಲೇಪನೇ, to anoint the body, ತದ್ಭಾವೇ ಚ, lustre, etc.

68. ಒಱ್ಕು, ಪ್ರವಾಹೇ, to flow.

69. ಅಱ್ಕು. ಜೀರ್ಣೇ, to be worn out, etc.

70. ಉಕ್ಕು. ಔದ್ಧತ್ಯೇ, to be proud etc. ಲೋಹಭೇದೇ ಚ, steel.

71. ಸೊರ್ಕು. ಉನ್ಮಾದೇ, to grow proud.
72. ಸಿರ್ಕು, ಸಿಲ್ಕು. ಪ್ರತಿಬಂಧೇ, to be impeded, entangled.
73. ಸುರ್ಕು. ಸಂಕೋಚೇ, to contract, shrivel.
74. ಜಿರ್ಕು. ನಖಕ್ಷತೇ, to wound with the nails or claws
75. ಸೆರ್ಕು. ವಸ್ತ್ವಂತರಪ್ರವೇಶೇ, to tuck into, etc.
76. ಮೊರಕು (o. r. ಮೊರ್ಕು). ದರ್ಪಘೂರ್ಣನೇ, to be in trembling oscillation from haughtiness.
77. ಕೋ. ಸೂತ್ರಪ್ರವೇಶೇ, to enter, as a thread into a needle; to be threaded; to thread.

3. ಗಾಂತಕ್ಕೆ

78. ಉಗಿ. ಆಕರ್ಷಣೇ, to draw towards, etc. ನಖಕ್ಷತೇ ಚ, to wound with the nails or claws.
79. ಮುಗಿ. ಪುಷ್ಪಸಂಕೋಚನೇ, to contract, as a flower, etc.
80. ಬಗಿ. ವಿಶ್ಲೇಷೇ, ವಿಶ್ಲೇಷವೆಂದು ಭಾಗಂ, to divide, separate, etc.
81. ಸುಗಿ. ಭಯೇ, to fear.
82. ಬಿಗಿ. ಬಂಧನೇ, to fasten, ಹಯಪರಿಕರೇ ಚ, a girth of horses, etc.
83. ಅಗಿ. ಸಂತ್ರಾಸ–ಹರ್ಷ–ಚರ್ವಣೇಷು, ಸಂತ್ರಾಸವೆಂದು ಭಯಂ (to tremble), to tremble or fear; to be glad; to chew.
84. ಚಿಗಿ. ಅಂಗುಲಿವಿಸರ್ಜನೇ, to let loose from the fingers; to discharge or propel with the fingers.
85. ಪುಗು. ಪ್ರವೇಶೇ, to enter.
86. ನಗು. ಹಸನೇ, to laugh.
87. ಉಗು ವಿಸರ್ಜನೇ, to let loose, throw away.
88. ಮಿಗು. ಅತಿಕ್ರಮಣೇ, to exceed, etc.; ಅವಶಿಷ್ಟೇ ಚ, to remain.
89. ಮುಗ್ಗು. ಜೀರ್ಣಾವಗಂಧೇ, to get or have a corrupt, musty smell. ಗತಿಭಂಗೇ ಚ, to stumble.
90. ಉಗ್ಗು. ವಚನವಿರೋಧೇ, to stammer, etc.
91. ಪೋಗು. ಗಮನೇ, to go
92. ಆಗು. ಪ್ರಾದುರ್ಭಾವೇ, to become manifest, to become.
93. ಕೂಗು. ಉಚ್ಚೈರ್ಧ್ವನೌ, to cry aloud, shout.
94. ತೇಗು. ಉದಾನವಾಯೌ. to belch; ವೃಕ್ಷಭೇದೇ ಚ, a teak-tree.
95. ತಾಗು. ಸಂಘಟ್ಟನೇ, to come into close contact.
96. ಬಾಗು. ನಮ್ರತ್ವೇ, to bend or bow.
97. ತೂಗು. ತುಲನೇ, to weigh.
98. ಬೀಗು. ಹರ್ಷಭಾವೇ, to be glad. ಸ್ಥೌಲ್ಯೇ ಚ, to become bulky, to swell.
99. ಕೇಗು. ಮಯೂರಸ್ವನೇ, to cry, as a peacock.
100. ನೀಗು. ತ್ಯಜನೇ, to leave or quit.
101. ಹುದುಗು. ಗೋಪನೇ, to guard, conceal, etc.
102. ಸಿದುಗು. ಹಸ್ತಾನ್ವೇಷಣೇ, to search about or for with the hands.

103. ಪೊಂಗು. ಸ್ಫುಟನೇ, to burst, open, expand, etc.
104. ನುಂಗು. ಗಿಲನೇ, to swallow.
105. ಕುನುಂಗು. ಸಂಕೋಚನೇ, to contract; to bend.
106. ತಾಂಗು. ಧಾರಣ—ಸಂಘಟ್ಟನಯೋಃ, to support; to come into close contact.
107. ಜಿನುಗು, ಜಿನುಂಗು. ಅವ್ಯಕ್ತಧ್ವನೌ, to sound inarticulately, to mutter, to hum; ವರ್ಷಭೇದೇ ಚ, drizzling rain
108. ಮಲಗು, ಮಲಂಗು. ಉಪಧಾನಾವಲಂಬೇ, to lie down, recline; ಉಪಧಾನೇ ಚ, a pillow, a cushion.
109. ಬೆಲಂಗು. ಕರಮುಕ್ತೌ. to let go from the hand, etc.
110. ತೊಲಗು. ವಿವಿಕ್ತೇ, to move away, separate from.
111. ಪಿಂಗು. ಅಪಸರಣೇ, to go away, retreat.
112. ಮಿಸುಗು. ಕಾಂತೌ, to shine.
113. ಎಸಗು. ಉದ್ಯೋಗೇ, to undertake, commence,.
114. ಮಸಗು. ವಿಜೃಂಭಣೇ, to open, extend, appear.
115. ಕರಗು. ವಿಲೀನೇ, to be dissolved, melt, etc.
116. ಕೊರಗು. ರಸವಿಹೀನೇ, to be deprived of juice, to shrivel, etc.
117. ಹರಗು. ಸಸ್ಯಕ್ರಿಯಾಯಾಂ, to work in a corn-field, etc.
118. ಮಱುಗು. ಸಂತಾಪೇ, to burn, grieve.
119. ಎಱಗು. ಪ್ರಣತೇ, to stoop, to bow, etc.
120. ಮಿಱುಗು. ಚಕಚಕಾಯಮಾನೇ, to glitter.
121. ತುಱುಗು. ಸಂಚ್ಛನ್ನೇ, to be covered or enveloped, etc.
122. ಉಱುಗು. ವಕ್ರಭಾವೇ, to be crooked, bent.
123. ಒಱಗು. ಸುಪ್ತೌ, to lie down, sleep.
124. ಕಱಂಗು. ಕಾರ್ಷ್ಣ್ಯೇ, ಕಾರ್ಷ್ಣ್ಯವೆಂದು ಕರ್ರ್, to turn black.
125. ಉಡುಗು. ಸಂಕೋಚನೇ, to inflect, contract, shrivel, etc.
126. ತೊಡಗು. ಪ್ರಾರಂಭೇ, to begin.
127. ಮಡಗು. ಗೋಪನೇ, to hide, conceal.
128. ನಡುಗು (o. r. ನಡಗು). ಕಂಪನೇ, to tremble.
129. ಮಿಡುಗು. ಸಂಖಿಂನೇ, ಸಂಖಿಂನವೆಂದು ದುಃಖದಿಂದಾದ ಚಿಂತೆ, to grieve.
130. ಕಡಂಗು. ಔತ್ಸುಕ್ಯೇ, ಔತ್ಸುಕ್ಯವೆಂದು ಇಚ್ಛೆ, to desire.
131. ಅಡಂಗು. ಗೋಪನೇ, to hide (v. i.).
132. ಬಾಡಗು. ಶೋಷಣೇ, to become dry, etc.
133*a*. ಎಡೆಯುಡುಗು (ಎಡೆ-ಉಡುಗು). ವಿಚ್ಛೇದೇ, to leave room, etc.
133*b*. 133*c*. ತೊಳಗು, ಬೆಳಗು. ಕಾಂತೌ, to shine.
133*d*. ಮುಱುಗು. ನಿಮಗ್ನೇ, to submerge,
134. ಅಲುಗು. ಸಂಚಲನೇ, to shake.
135. 136. 137. ಅೞ್ ಅೞ್ಗು ತಱ್ಗು, ಕ್ಷೀಣತ್ವೇ, to decay; to grow less.
138. ಮುೞ್ಗು. ಪತನೇ, to fall down.

139. ಮೊಱು. ನಮನೇ, to bow (*v. i.*).

140. ಅಱು (see 136). ಲಯೇ, to dissolve (v. i.).

141. ಪುಱು. ದಹನಕ್ರಿಯಾಯಾಂ, to burn.

142. ಉಱು. ಸ್ನೇಹೇ, to love.

143. ಮೊಱಗು. ವಾದನಕ್ರಿಯಾಯಾಂ, to sound, as musical instruments; ಸ್ತನಿತೇ ಚ, to thunder; ವೃಕ್ಷಭೇದೇ ಚ, a sort of tree.

144. ಒಱು. ಸಂಮೇಳನೇ, to unite.

145. ನುಱು (ನುಳ್ಳು). ಸಂಚೂರ್ಣೇ, to be ground.

146. ಕುಱು. ಆಕುಂಚನೇ, to bend together, contract.

147. ಕಱು. ಕಾರ್ಷ್ಣ್ಯೇ, to turn black.

148. ನೆಱು. ಅಂತರ್ಲೀನೇ, to sink in, be depressed.

149. ತೆಗೆ. ಆಕರ್ಷಣೇ, to take.

150. ಒಗೆ. ಜನನ–ವಸ್ತ್ರಪ್ರಕ್ಷಾಲನಯೋಃ, to be born; to wash clothes.

151. ಬಗೆ. ಪರಿಭಾವೇ, to reflect; ಚಿತ್ತೇ ಚ, to think.

152. ತಗೆ. ಸ್ತಂಭನೇ, to stop, etc.

153. ಹೊಗೆ. ಧೂಪಧೂಮನಿರೋಧಕ್ರಿಯಾಯಾಂ, to hem in the smoke of incense and other materials, to smoke, ಧೂಮೇ ಚ, smoke.

154. ನೆಗೆ. ಉತ್ಪವನೇ, to be purified, become clear.

155. ಮೊಗೆ. ಜಲಾಕರ್ಷಣೇ, to scoop water; ಘೂಭೇದೇ ಚ, (o. r. ಘುಟಭೇದೇ ಚ), an earthen vessel.

## 4. ಚಾಂತಕ್ಕೆ.

156. ಮಿಂಚು. ದೀಪ್ತೌ, to shine; ವಿದ್ಯುತಿ ಚ, lightning.

157. ಮುಂಚು. ಅಗ್ರಗಮನೇ, to go before.

158. ಪಿಂಚು. ಪಶ್ಚಾದರ್ಥೇ, to be behind.

159. ಹೊಂಚು. ಸಂಕೇತೋದ್ಯೋಗೇ, to exert one's self secretly, etc.

160. ಪಳಂಚು. ಸಂಘಟ್ಟನೇ, to come into close contact, etc.

161. ಜಱುಚು. ಬಹುಭಾಷಾಯಾಂ, to chatter.

162. ಅಱುಚು. ಉಚ್ಚೈರ್ಧ್ವನೌ, to cry out aloud.

163. ಮೋಚು. ವೈಧವ್ಯೇ, to become a widow.

164. ಕವಿಚು. ವಿಪರೀತಪತನೇ, to be turned upside down.

165. ಪೆರ್ಚು. ವಿಸ್ತಾರೇ, to increase.

166. ಮಚ್ಚು. ಅತಿಪರಿಚಯೇ, to be greatly devoted to etc.

167. ಬೆರ್ಚು. ಸಂತ್ರಾಸೇ, to fear; ತೃಣಪುರುಷೇ ಚ, a straw-puppet, scare-crow.

168. ಕರ್ಚು. ಖಾದನೇ, to bite; ಪ್ರಕ್ಷಾಲನೇ, to wash; ತಂಡುಲಪ್ರಕ್ಷಾಲಜಲೇ ಚ, water in which rice has been washed.

169. ಬಾರ್ಚು. ಪುಂಜೀಕರಣೇ, to heap.

170. ತೀರ್ಚು. ನಿಷ್ಪತ್ತೌ, to finish.

171. ಉರ್ಚು. ಆಕರ್ಷಣೇ, to draw towards one's self; ಮಲಭೇದನೇ ಚ, to purge or be purged.

172. ಬಿರ್ಚು. ವಿಭಜನೇ, to divide, to loosen.

